

ದಕ್ಷಿಣ ಭಾಷಾ ಪುಸ್ತಕ ಸಂಸ್ಥೆಯ ಸಹಕಾರದಿಂದ ಪ್ರಕಟಿ

ರೂ.

Rs. 25.00

# ಬಾಳಿನ ರಹಸ್ಯ

ರಾಜಂ ಅಯ್ಯರ್

ಲ್ಲಿ ಬರುವ ಸುಖ ದುಃಖಗಳನ್ನು ಹೃದಯಂಗಮವಾಗಿ

# ಬಾಳಿನ ರಹಸ್ಯ

(ಕಮಲಾಂಬಾಳ್ ಚರಿತ್ರೆ)



ಮೂಲ ತಮಿಳು ಗ್ರಂಥದ ಲೇಖಕರು: } ಬಿ. ಆರ್. ರಾಜಂ ಅಯ್ಯರ್

ಅನುವಾದಕರು: ಕೆ. ಸಂಪದ್ಗಿರಿ ರಾಯರು





ಸಾಧನಾ ಪ್ರಕಾಶನ, ರಾಯಚೂರು

BALINA RAHASYA
(KANNADA)

---

Original in Tamil
KAMALAMBAL CHARITRAM
By Rajam Iyer.

Translated in to Kannada by
Shri K. Sampadgiri Rao



---



---

KANNADA—DECEMBER 1959
5000 copies.

Published under the auspices of the
SOUTHERN LANGUAGES BOOK TRUST
KANNADA No. 29

Price Rs 25.00

Published by
Sadhana Prakasana,
RAICHUR.

Printed by Sadhana Printery, Hyderabad-A.P.




# ಆ ಮುಖ

ಸಾಧಾರಣ ಜನತೆಗೆ ರುಚಿಸಲೂ ಬೇಕು, ನಿಜವಾಗಿ ಬೆಲೆ ಬಾಳು ವಂಥದೂ ಆಗಬೇಕು, ಇಂಥ ಪುಸ್ತಕಗಳ ವಿಷಯದಲ್ಲಿ ತಮಗೆ ಈಗಾಗಲೇ ಆದ ಅನುಭವದಿಂದ ದಕ್ಷಿಣ ಭಾರತ ಪುಸ್ತಕ ಸಂಸ್ಥೆಯವರು ತಮ್ಮ ಎರಡನೆಯ ಪುಸ್ತಕ ಗುಚ್ಛವನ್ನು ದಕ್ಷಿಣದ ಎಲ್ಲಾ ಭಾಷೆಗಳಲ್ಲೂ ಪ್ರಕಟಿಸ ಲಿದ್ದಾರೆ. ಬಗೆ ಬಗೆಯ ಗುಂಪಿನ ಓದುಗರ ಭಿನ್ನ ಭಿನ್ನ ರುಚಿಗೆ ತಕ್ಕಂತೆ ಬಹಳ ಎಚ್ಚರಿಕೆಯಿಂದ ಪುಸ್ತಕಗಳನ್ನು ಆರಿಸಿದ್ದಾರೆ. ಸಹಜವಾಗಿಯೇ ಜೀವನದ ನಾನಾ ಮುಖಗಳ ಬಗ್ಗೆ ವಿಚಾರ ತಿಳಿಸುವ ಪುಸ್ತಕಗಳನ್ನು ಆರಿಸಿ ದ್ದಾರೆ. ಭಾರತದ ನಾಯಕಮಣಿಗಳ ಜೀವನವನ್ನು ತಿಳಿಸುವ ಗ್ರಂಥಗಳೂ ಇವೆ. ದೇಶದ ಹಿತಕ್ಕಾಗಿ, ಜನತೆಯ ಮೂಲಭೂತ ಹಕ್ಕುಗಳಿಗಾಗಿ, ದೇಶದ ಪ್ರತಿಷ್ಠೆ ಪ್ರಭಾವಗಳನ್ನು ಹೆಚ್ಚಿಸಲಿಕ್ಕಾಗಿ ಹೊಡೆದಾಡಿದ ಆ ನಾಯಕರಿಗೆ ತಾವು ಎಷ್ಟು ಋಣಿಗಳೋ ಮುಂದಿನ ಪೀಳಿಗೆಯವರು ತಿಳಿದು ಕೊಳ್ಳುವುದು ಒಳ್ಳೆಯದು.

ಈ ಮಾಲೆಯಲ್ಲಿ ತತ್ತ್ವಶಾಸ್ತ್ರ, ಧರ್ಮ, ವಿಜ್ಞಾನ, ಪ್ರಾಚೀನೇತಿ ಹಾಸ, ಅರ್ಥಶಾಸ್ತ್ರಗಳೂ ಇವೆ. ಕಥಾ ಸಾಹಿತ್ಯಕ್ಕೆ, ಪ್ರಾಚೀನ ಕಲೆಗಳ ಪ್ರಚಾರಕ್ಕೆ ಎಡೆಯಿದೆ. ಅಭಿನಯ ಕಲೆ, ಶಿಲ್ಪಶಾಸ್ತ್ರ, ಪ್ರಾಚೀನ ಅವಶೇಷ ಗಳ ಸಂಶೋಧನೆ, ಎಲ್ಲ ಕಾಲಕ್ಕೂ ಅದ್ಭುತವೆನಿಸುವ ದಕ್ಷಿಣ ಭಾರತದ ಮಹಾ ದೇವಾಲಯಗಳ ವಿಷಯ, ಎಲ್ಲವೂ ಇವೆ. ಈ ಗೊಂಚಲು ಜನರಿಗೆ ಅಧ್ಯಯನಕ್ಕೆ ನಾನಾ ವಿಷಯಗಳನ್ನು ಒದಗಿಸಿ, ಇಂಥ ಗ್ರಂಥ ರಾಸಿಯನ್ನು ಹೆಚ್ಚು ಹೆಚ್ಚು ಜನ ಓದುವಂತೆ ಮಾಡುವುದರಲ್ಲಿ ಸಂದೇಹವಿಲ್ಲ.

ಈ ಕೆಲಸದಲ್ಲಿ ಒಂದು ಪ್ರಶಂಸನೀಯ ಅಂಶವಿದೆ—ದಕ್ಷಿಣ ಭಾರತದ ಭಾಷೆಗಳ ಪುಸ್ತಕಗಳನ್ನು ಒಂದರಿಂದ ಒಂದಕ್ಕೆ ಭಾಷಾಂತರ ಮಾಡಿಸುವ ಏರ್ಪಾಡು. ಈ ಗ್ರಂಥಮಾಲೆ ಪೂರ್ಣವಾದಾಗ ತಮ್ಮ ಜ್ಞಾನವನ್ನು ಬೆಳೆಸಿ ಕೊಳ್ಳಲು ಸ್ವೈಜವಾದ ಅಭಿರುಚಿಯುಳ್ಳ ಅಕ್ಷರಸ್ಥರನೇಕರನ್ನು ಪಾಠಕ ಪ್ರಪಂಚಕ್ಕೆ ಇವು ಸೆಳೆಯುತ್ತವೆಂದು ನನಗೆ ನಂಬಿಗೆಯಿದೆ. ಅವರಿಗೆ ಜ್ಞಾನ

ಬಲವನ್ನು ಹೆಚ್ಚಿಸಿಕೊಳ್ಳಲು ಅಮೂಲ್ಯ ಸಾಮಗ್ರಿಯನ್ನು ಒದಗಿಸುತ್ತದೆ. ದಕ್ಷಿಣ ಭಾಷಾ ಪುಸ್ತಕ ಸಂಸ್ಥೆಯ ಕೆಲಸ, ಅದು ಪ್ರಾರಂಭವಾದ ಶ್ರೇಷ್ಠ ಉದ್ದೇಶಗಳನ್ನು ಹೆಚ್ಚು ಹೆಚ್ಚಾಗಿ ನಿರ್ವಹಿಸುತ್ತ ಬರುತ್ತದೆಯೆಂದು ಆಶಿಸುತ್ತೇನೆ.

ಮದರಾಸು

ಎ. ಲಕ್ಷ್ಮಣಸ್ವಾಮಿ ಮೊದಲಿಯಾರ್
ವೈಸ್‌ಛಾನ್ಸಲರ್
ಮದ್ರಾಸ್-ವಿಶ್ವವಿದ್ಯಾನಿಲಯ

# ಪೀಠಿಕೆ

ತಮಿಳು ಕಾದಂಬರಿಗಳಲ್ಲಿ ಪಿ. ಆರ್. ರಾಜಾಮಯ್ಯರ್ ಅವರು ಬರೆದ 'ಕಮಲಾಂಬಾಳ್ ಚರಿತ್ರ' ವೇ ಎರಡನೆಯದು. ಮೊದಲನೆಯ ಕಾದಂಬರಿ ವೇದನಾಯಕಂ ಪಿಳ್ಳೆಯವರು ಬರೆದ 'ಪ್ರತಾಪ ಮುದಾಲಿಯಾರ್ ಚರಿತ್ರಂ'. ಈ ಕಾದಂಬರಿ ವಿವೇಕ ಚಿಂತಾಮಣಿ ಎಂಬ ತಮಿಳು ಸಾಹಿತ್ಯ ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಅಚ್ಚಾಯಿತು. ಈ ಕಾದಂಬರಿಕರ್ತರಾದ ಪಿ. ಆರ್. ರಾಜಮಯ್ಯರಿಗೆ ಚಿಕ್ಕಂದಿನಿಂದಲೂ ಆಂಗ್ಲ ಸಾಹಿತ್ಯದಲ್ಲಿ ಚೆನ್ನಾಗಿ ಪ್ರವೇಶ ವಿತ್ತು. ಅವರು ಬಿ. ಎಲ್. ವರೆಗೆ ಓದಿ 'ಲಾ' ಪರೀಕ್ಷೆಯಲ್ಲಿ ತೇರ್ಗಡೆ ಯಾಗದೆ ಹೋದರು. ಆ ಕಾರಣ ಅವರು ತಮಿಳು ಸಾಹಿತ್ಯದಲ್ಲಿಯೂ, ವೇದಾಂತ ವಿಷಯಗಳಲ್ಲಿಯೂ, ಕೃಷಿ ಮಾಡಿದರು. ಸ್ವಾಮಿ ವಿವೇಕಾನಂದರು ಅಮೇರಿಕಾಯಾತ್ರೆ ಮುಗಿಸಿ ನಮ್ಮ ದೇಶಕ್ಕೆ ಹಿಂದಿರುಗಿದ ತರುವಾಯ ಪ್ರಾರಂಭಿಸಿದ "ಪ್ರಬುದ್ಧ ಭಾರತ" ಎಂಬ ವೇದಾಂತ ಪತ್ರಿಕೆಗೆ ಅವರು ಮೊದಲ ಸಂಪಾದಕರಾದರು. ಆ ಪತ್ರಿಕೆಯಲ್ಲಿ ಪ್ರಕಟವಾದ ಎರಡು ಲೇಖನಗಳು ಆಗಿನ ವಿದೇಶಿ ಪಾಲಕರ ವಿಕೋಪಕ್ಕೆ ಕಾರಣವಾದವು. ಆಗಿನ ಪ್ರಭುತ್ವವು ರಾಜಮಯ್ಯರ್ ಮೇಲೆ ರಾಜದ್ರೋಹವನ್ನು ಆರೋಪಿಸಿ ಅವರನ್ನು ಬಂಧಿಸಬೇಕೆಂಬ ಆಜ್ಞೆ ಜಾರಿ ಮಾಡಿದರು. ಈ ಆಜ್ಞೆಯು ಅವರಿಗೆ ಸೇರುವುದಕ್ಕೆ ಮುಂಚೆಯೇ ಮೃತ್ಯು ಅವರನ್ನು ಕೊಂಡೊಯ್ದಿತು. ಒಳ್ಳೆ ಯೌವನದಲ್ಲಿಯೇ ಇವರು ಮೃತ್ಯುವಿಗೆ ಆಹುತಿಯಾದರು—ಸಾಹಿತ್ಯ ದಲ್ಲಿಯೂ, ವೇದಾಂತದಲ್ಲಿಯೂ ನುರಿತ ಇಂಥ ಒಬ್ಬ ಗ್ರಂಥಕರ್ತರು ಚಿಕ್ಕ ವಯಸ್ಸಿನಲ್ಲಿಯೇ ಮರಣ ಹೊಂದಿದುದು ತಮಿಳ ಸಾಹಿತ್ಯಕ್ಕೇ ದೊಡ್ಡ ದುರದೃಷ್ಟ.

'ಕಮಲಾಂಬಾಳ್ ಚರಿತ್ರಂ' ಎಂದರೆ ಕಮಲಾಂಬಾಳ್ ಎಂಬ ಹೆಂಗಸಿನ ಜೀವನ ಚರಿತ್ರೆಯಷ್ಟೆ ಅಲ್ಲ. ಆ ಕಾಲದಲ್ಲಿ ದಕ್ಷಿಣ ದೇಶದಲ್ಲಿ ನಮ್ಮೆಲ್ಲರಿಗೂ ಪರಿಚಿತವಾದ, ಅನುಭವಿಸಲಾರದ, ಸಾಮಾನ್ಯ ಸಂಘಟನೆಗಳ ವರ್ಣನೆ ಕೂಡಾ ಈ ಕಾದಂಬರಿಯಲ್ಲಿದೆ.

ಇದರಲ್ಲಿಯ ಕಥಾಸಂವಿಧಾನವೂ, ಪಾತ್ರ ಚಿತ್ರಣವೂ ಚೆನ್ನಾಗಿ ಹೊಂದಿಕೊಂಡಿವೆ. ಈ ಕಥೆಯು ಗಮನ ಮುಂದೆ ಏನು ಜರಗುತ್ತದೆಯೋ ಎಂಬ ಕುತೂಹಲ, ಸುರಸವಾದ ಹಾಸ್ಯ, ವಸ್ತು ಗಾಂಭೀರ್ಯ, ನಡು ನಡುವೆ ಪೂರ್ವ ಗ್ರಂಥಗಳಿಂದ ತೆಗೆದುಕೊಂಡ ಉದಾಹರಣೆಗಳು—ಇವೆಲ್ಲವೂ ಸೇರಿ ಕೊನೆಗೆ ವೇದಾಂತ ತತ್ವದಲ್ಲಿ ಕೊನೆಗೊಳ್ಳುವುದು ಈ ಕಾದಂಬರಿಯ ವಿಶೇಷವೆಂದು ಹೇಳಬಹುದು.

ಇದೊಂದು ಅಪೂರ್ವವಾದ ಕಥೆ. ಇಷ್ಟು ಚೆನ್ನಾಗಿ ನೈಪುಣ್ಯದಿಂದ ಬರೆಯಲಾದ ಈ ಕಾದಂಬರಿ ಆಧುನಿಕ ತಮಿಳ ಬರೆಹಗಾರರಿಗೆ ಒಂದು ಮೇಲ್ಪಂಕ್ತಿಯಾಗಿ ನಿಂತಿದೆ.

ದಕ್ಷಿಣ ಭಾರತ ಭಾಷಾಗ್ರಂಥ ಸಮಿತಿಯುವರು ಈ ಅದ್ಭುತ ಕಾದಂಬರಿಯನ್ನು ವಿವಿಧ ದ್ರಾವಿಡ ಭಾಷೆಗಳಲ್ಲಿ ಅನುವಾದ ಮಾಡಲು ಆರಿಸಿದುದಕ್ಕಾಗಿ ಅಭಿವಂದನೆಗಳು.

ಮದ್ರಾಸು.

ಆರ್. ಪಿ. ಸೇತುಪಿಳ್ಳೆ
ತಮಿಳು ಶಾಖಾಧ್ಯಕ್ಷರು
ಮದ್ರಾಸ್ ವಿಶ್ವವಿದ್ಯಾಲಯ

## ಗ್ರಂಥಕರ್ತರಾದ ಶ್ರೀ ರಾಜಂ ಅಯ್ಯರ್ ಪರಿಚಯ :

ಶ್ರೀ ರಾಜಂ ಅಯ್ಯರ್ ವತ್ತಲಗುಂಡು ಎನ್ನುವ ಗ್ರಾಮದಲ್ಲಿ ಜನ್ಮ ತಾಳಿದವರು. ಕಥೆಯೂ ಮಧುರೆ ಜಿಲ್ಲೆಗೆ ಸಂಬಂಧಿಸಿದುದೇ.

ಶ್ರೀ ವಿವೇಕಾನಂದ ಸ್ವಾಮಿ ಅವರಿಂದಲೂ, ಭಾರತಿ ಅವರಿಂದಲೂ ಪ್ರಶಂಸಿಸಲ್ಪಟ್ಟವರು ಶ್ರೀ ರಾಜಂ ಅಯ್ಯರ್.

ಶ್ರೀ ರಾಜಂ ಅಯ್ಯರ್ ತಮ್ಮ ೨೬ನೆಯ ವಯಸ್ಸಿನಲ್ಲಿ ತೀರಿಕೊಂಡರು. ಆ ಎಳೆಯ ವಯಸ್ಸಿನಲ್ಲಿಯೇ ಇವರು ತಮಿಳಿನಲ್ಲಿ ಬರೆದ ಗ್ರಂಥ 'ಕಮಲಾಂಬಾಳ್ ಚರಿತ್ರಂ' ಒಂದೇ.

ವಿವೇಕಾನಂದ ಸ್ವಾಮಿಗಳ ಅಮೆರಿಕಾ ದೇಶದ ವಿಜಯವಾದ ನಂತರ ಮದರಾಸಿನಲ್ಲಿ ಆರಂಭವಾದ "ಪ್ರಬುದ್ಧ ಭಾರತ" ಅಥವಾ "ಎಚ್ಚರಗೊಂಡ ಇಂಡಿಯಾ" ಎನ್ನುವ ಆಂಗ್ಲಪತ್ರಿಕೆಯ ಪ್ರಥಮ ಸಂಪಾದಕರಾಗಿ ಶ್ರೀ ವಿವೇಕಾನಂದರಿಂದ ಆರಿಸಲ್ಪಟ್ಟ ಗೌರವವನ್ನು ಪಡೆದವರು.

* ಷೆಲ್ಲಿ, ಬೈರನ್, ಕೀಟ್ಸ್, ಕಂಬನ್, ಇವರ ಕವಿತೆಗಳ ಆಳವಾದ ಕಲೆಯ ಕನಸು — ತನ್ನ ಕಲಾಚಾತುರ್ಯದಿಂದ ಷಿಕಾಗೋವನ್ನೂ, ಲಂಡನನ್ನೂ, ನೋಡಬೇಕೆಂಬ ಒಂದು ದೊಡ್ಡ ಸಂಕಲ್ಪ, ತನ್ನ ಕೀರ್ತಿ ಸಮುದ್ರ ದಾಟಿ ಎಲ್ಲೆಲ್ಲೂ ಪಸರಿಸಬೇಕೆಂಬ ಆಕಾಂಕ್ಷೆ, ಇವೇ ವತ್ತಲಗುಂಡು ರಾಜನ ಎಳೆ ವಯಸ್ಸಿನ ಕನಸು. ಬಿ. ಎಲ್. ಪರೀಕ್ಷೆಯಲ್ಲಿ ತೇರ್ಗಡೆಯಾಗದೆ ಹೋದುದರಿಂದ ಅವರ ಆಸೆ ಮುರಿದು, ಅದು ಪೂರ್ಣ ಬದಲಾವಣೆ ಹೊಂದಿ ಹೋಯಿತು. ಕಲೆಯ ಕನಸು ವೇದಾಂತದ ಹುಚ್ಚಾಗಿದುದು ಗರ್ಲಃಇನೇ ಇಸವಿಯಲ್ಲಿ. 'ವಿವೇಕ ಚಿಂತಾಮಣಿ' ಪತ್ರಿಕೆಯಲ್ಲಿ ತಮ್ಮ ಮನಸ್ಸಿನ ಸ್ಥಿತಿಯನ್ನು "ಕಮಲಾಂಬಾಳ್" ಎನ್ನುವ ಕಥೆಯನ್ನು ಧಾರಾವಾಹಿಯಾಗಿ ಬರೆದರು.

* ಅವರ ಅನಾಯಾಸ ಮರಣ ಒಂದು ಅದ್ಭುತವಾದ ಪ್ರಕರಣ. 'ಪ್ರಬುದ್ಧ ಭಾರತ'ದಲ್ಲಿ ಪ್ರಕಟವಾದ "ವೇದಾಂತ" "ರಾಜಾಧಿರಾಜ" ಎನ್ನುವ ಸಂಪಾದಕೀಯ ಲೇಖನಗಳಿಗಾಗಿ ಅವರ ಮೇಲೆ ರಾಜ್ಯದ್ರೋಹದ ಆರೋಪಣೆ

ಯನ್ನು ಹೊರಿಸಿತು. ಸರಕಾರವು ಅವರನ್ನು ನಿರ್ಬಂಧಿಸುವಂತೆ 'ವಾರೆಂಟು' ಜಾರಿ ಮಾಡಿತು. ಪೋಲೀಸಿನವರು ಬಂದರು. ಆದರೆ ವಾರಂಟನ್ನು ಜಾರಿ ಮಾಡಲು ಆರೋಪಿಯೇ ಇರಲಿಲ್ಲ.

---

* ಈ ಟಿಪ್ಪಣಿ ಶ್ರೀ ಸ್ವಾಮಿ ಶುದ್ಧಾನಂದ ಭಾರತಿಯವರು 'ಕಲ್ಕಿ'ಯಲ್ಲಿ ಬರೆದ 'ಪೆರಿಯವಾಳ್ ಕಥೈ' (ದೊಡ್ಡವರ ಕಥೆ) ಯಿಂದ ಸಂಗ್ರಹಿಸಿದುದು.

# ಪಾತ್ರ ಪರಿಚಯ

ಪುಸ್ತಕವನ್ನು ಓದಲಾರಂಭಿಸುವುದಕ್ಕೆ ಮುನ್ನ ಈ ಚರಿತ್ರೆಯಲ್ಲಿ ಬರುವ ಪಾತ್ರಗಳನ್ನು ಕುರಿತು ವಾಚಕರು ತಿಳಿದು ಕೊಳ್ಳುವುದು ಸ್ವಲ್ಪ ಮಟ್ಟಿಗೆ ಅವಶ್ಯವೇ ಅಲ್ಲವೆ ?

ಕಮಲಾಂಬಾಳ್: ತಮಿಳು ನಾಡಿನ ನಾರೀ ಮಣಿಗಳು ಹೇಗಿದ್ದರೆಂಬುದಕ್ಕೆ ಒಂದು ನಿರ್ದಶನ. ತಮಿಳು ಕುಟುಂಬದಲ್ಲಿ ಪ್ರಕಾಶಿಸುವ ಕುಲದೀಪ. ತಾಳ್ಮೆಗೆ ಭೂಷಣ. ಪ್ರೇಮಕ್ಕೆ ಆಭರಣ. ಕೊನೆಯಲ್ಲಿ ರಾಮಭಕ್ತಿಯಲ್ಲಿ ಮಗ್ನಳಾಗಿ ಭಕ್ತ ಶಿರೋಮಣಿಯಾಗುವಳು.

ಮುತ್ತುಸ್ವಾಮಿ ಅಯ್ಯರ್: ಆದರ್ಶವಾದಿ. ಮರೆಯಾದ ತಮಿಳು ಜನರ ಹಿಂದಿನ ಪೀಳಿಗೆಯವರ ಪ್ರತಿನಿಧಿ. ಗೃಹಸ್ಥ ಬಾಳಿನಲ್ಲಿ ಜಿಗುಪ್ಸೆಗೊಂಡು ಜ್ಞಾನ ಮಾರ್ಗವನ್ನು ಹೊಂದಿದವರು. ಪ್ರಪಂಚದಲ್ಲಿ ಮಕ್ಕಳೇ ಸ್ವಲ್ಪ ಯೋಗ್ಯರೆಂದು ಇವರ ಅಭಿಪ್ರಾಯ. ಸಚ್ಚಿದಾನಂದ ಸ್ವಾಮಿಗಳ ಶಿಷ್ಯರಾಗಿಯೂ ಕೀರ್ತಿ ಪಡೆದರು.

ಲಕ್ಷ್ಮಿ: ಮುತ್ತುಸ್ವಾಮಿ ಅಯ್ಯರ್ ಮಗಳು. ಕಲ್ಯಾಣಿ ಎಂತಲೂ ಈಕೆಯ ಹೆಸರು. ಕಂಬನ ಹಾಡುಗಳನ್ನು ಚೆನ್ನಾಗಿ ಬಲ್ಲವಳು. ಈ ಕಾಲದ ಕುಟುಂಬಸ್ತ್ರೀಯರು ಹೇಗೆ ಇರಬೇಕೆನ್ನುವುದಕ್ಕೆ ಒಂದು ಉದಾಹರಣೆ.

ಶ್ರೀನಿವಾಸನ್: ಲಕ್ಷ್ಮಿಯ ಗಂಡ; ಪರಮ ಸಾಧು. ಮದುವೆಯಾಗಲಿರುವ ಯುವಕರು ಮದುವೆಯಾಗುವುದಕ್ಕೆ ಪೂರ್ವದಲ್ಲಿಯೂ, ಮದುವೆಯ ವೈಭವದ ಸಮಯದಲ್ಲಿಯೂ ಹೇಗೆ ನಡೆದು ಕೊಳ್ಳಬೇಕೆಂಬುದನ್ನು ಇವನಿಂದ ತಿಳಿದುಕೊಳ್ಳಬೇಕು.

ಸುಬ್ರಹ್ಮಣ್ಯ ಅಯರ್: ಮುತ್ತುಸ್ವಾಮಿ ಅಯ್ಯರ್ ತಮ್ಮ. ಅಣ್ಣನೆಂದರೆ ಪ್ರಾಣ. ಇವರಿಗೆ ಹೆಂಡತಿ ಎಂದರೆ ದೊಡ್ಡ ಭಯ. ಅವಳು ಹೇಳಿದುದೇ ಆಜ್ಞೆ. ಅವಳು ಇವರನ್ನು ವಶಮಾಡಿಕೊಳ್ಳಬೇಕೆಂದು ಮದ್ದನ್ನು ಇಟ್ಟುದದರ ಕಾರಣವಾಗಿ ಇವರು ಪ್ರಾಣ ಕಳೆದುಕೊಳ್ಳಬೇಕಾಯಿತು.

ಪೊನ್ನಮ್ಮಾಳ್: ಈ ಪುಣ್ಯವತಿಯನ್ನು ಕುರಿತು ನೆನೆಯಲೂ, ಬರೆಯಲೂ ಸಂಕೋಚವಾಗುತ್ತದೆ. ಕೈಕೆಯಂತೆ ಮೊದಲಿನಲ್ಲಿ ಒಳ್ಳೆಯವಳೇ. ಆದರೆ ಕಲಹದ ಕಿಚ್ಚು ಹತ್ತಿಸಿದ ಕೂಡಲೆ ಅಮೃತವು ವಿಷವಾಯಿತು. ಗಂಡನಿಗೆ ಮದ್ದಿಟ್ಟು ಅವನನ್ನು ಕಾಲನಿಗೆ ಒಪ್ಪಿಸಿದಳು.

ಅಮ್ಮೈಯಪ್ಪಪಿಳ್ಳೈ: ರಾಜಂ ಅಯ್ಯರವರ ಉನ್ನತ ಸೃಷ್ಟಿ, ಈ ಚರಿತ್ರೆಯಲ್ಲಿ ಇವರದೇ ಮುಖ್ಯ ಪಾತ್ರ. ಗ್ರಂಥಕರ್ತರು ಶಾಲೆಗಳಲ್ಲಿ ತಮಿಳು ಪಂಡಿತರ ಸ್ಥಿತಿಗತಿಗಳನ್ನು ವಿವರಿಸಲು ಇವರನ್ನೇ ಹೇತುವಾಗಿಟ್ಟು ಕೊಂಡಿದ್ದಾರೆ. ಇವರ ಪೂರ್ಣ ಹೆಸರು ನೀವೇ ಪುಸ್ತಕವನ್ನು ತಿರುವಿಹಾಕಿ ತಿಳಿದುಕೊಳ್ಳಿ. ಇಲ್ಲಿ ಜಾಗವಿಲ್ಲ.

ಪೇಯಾಂಡಿದೇವನ್: ಮತ್ತೊಂದು ಮುಖ್ಯಪಾತ್ರ. ಕಳ್ಳನೇ ಹೌದು. ಆದರೇನು? ಕಳ್ಳನೂ ಸುಧಾರಿಸುವುದಿಲ್ಲವೆ? ಕೊನೆಯಲ್ಲಿ ಸುಧಾರಣೆ ಹೊಂದಿ ಬೆಳಗಾಗುತ್ತಲೂ ಮುತ್ತುಸ್ವಾಮಿ ಅಯ್ಯರಿರುವ ದಿಕ್ಕಿಗೆ ನಮಸ್ಕರಿಸಿಯೇ ಬೇರೆ ಕೆಲಸವನ್ನು ಮಾಡುತ್ತಿದ್ದವನು.

ಸುಬ್ಬು: ಕಾಡು ಹರಟೆ ಹೊಡೆಯುವ ಸಭಿಕರ ಅಧ್ಯಕ್ಷಿಣಿ. ಮಂಥರೆ ಇಲ್ಲ ದಿದ್ದರೆ ರಾಮಾಯಣ ಹೇಗೆ ನಡೆದಿರಲಾರದೊ ಅದರಂತೆ ಈ ಅಮ್ಮ ನವರು ಇಲ್ಲದಿದ್ದರೆ ನಮ್ಮ ಕಥೆ ಬೆಳದೇ ಇರಲಾರದು. 'ರ' ಕಾರ ಈ ಪುಣ್ಯವತಿಯ ಬಾಯಿಯಲ್ಲಿ ತಿರುಗಲಾರದು. 'ಯ' ಕಾರ ಪ್ರಯೋಗವನ್ನು ಕಂಡು ಭಯಪಡಬೇಡಿ ಎಂದು ಮುಂಚಿತವಾಗಿ ಎಚ್ಚರಿಕೆ ಕೊಡುತ್ತೇನೆ.

ಇವರನ್ನು ಮುಖ್ಯವಾಗಿ ತಿಳಿದುಕೊಳ್ಳಬೇಕು. ಇನ್ನೂ ಎಷ್ಟೊ ಜನ ರಿದ್ದಾರೆ. ಅವರನ್ನು ನೀವು ಕಥೆಯಲ್ಲಿಯೇ ಸಂಧಿಸಿ ಕೊಳ್ಳಬಹುದು.

ಮೇಲೆ ಹೇಳಿದವರನ್ನು ಕುರಿತು ನೀವು ಓದುವಾಗ ಎಲ್ಲಿಯೊ ನೋಡಿ ದಂತೆ ನೆನಪಾಗುವುದು. ಎಲ್ಲಿ ನೋಡಿರುವಿರಿ? ತಮಿಳು ನಾಡಿನ ಗ್ರಾಮಗಳ ಲ್ಲಿಯೇ ತಾನೆ!

## ಅಧ್ಯಾಯಗಳು

# ೧. ಸ್ತ್ರೀ ಪುರುಷ ಸಂವಾದ

ಮಧುರೆ ಜಿಲ್ಲೆಯಲ್ಲಿ ಶಿರುಕುಳಂ ಎಂದು ಒಂದು ಗ್ರಾಮವಿದೆ. ಆ ಗ್ರಾಮದ ನಡುಬೀದಿಯ ಮಧ್ಯೆ "ದೊಡ್ಡಮನೆ" ಎಂಬ ಹೆಸರುಳ್ಳ ಒಂದು ಮನೆ ಇದೆ. ಆ ಮನೆಯಲ್ಲಿ ಪಡಸಾಲೆಗೆ ಸೇರಿದ ಹಾಗೆ ಒಂದು ಕೋಣೆಯಲ್ಲಿ ಕೆಳಗೆ ಒಂದು ಮಂದಲಿಗೆ ಹಾಸಿ ಅದರ ಮೇಲೆ ಒಂದು ದಿಂಬನ್ನಿಟ್ಟು ಅದರ ಮೇಲೆ ವಾಲಿಕೊಂಡು ಒಬ್ಬರು ಮಲಗಿದ್ದರು. ಅವರ ನಿದ್ದೆ ಮುಗಿದು ಎಚ್ಚೆತ್ತ ಕೂಡಲೆ "ಆss ಶಂಭೋ ಶಂಕರ !" ಎಂದು ಎರಡುಸಲ ಘಟ್ಟಿಯಾಗಿ ಆಕಳಿಸಿ ಕಾಲನ್ನು ತುರಿಸಿಕೊಳ್ಳುತ್ತ "ಲೇ—ಲೇ" ಎಂದು ಕೂಗಿದರು. ಆಗ ಪಡಸಾಲೆಯಲ್ಲಿ ಕುಪ್ಪಸವನ್ನು ಹೊಲಿಯುತ್ತಿದ್ದ ಅವರ ಹೆಂಡತಿ, ಇವರ ದನಿ ಕಿವಿಯಲ್ಲಿ ಬಿದ್ದಕೂಡಲೆ, ಎರಡುಸಲ ಕೆಮ್ಮಿ ಮೌನವಾಗಿದ್ದಳು.

ಅಷ್ಟರಲ್ಲಿ ಮಲಗಿದ್ದ ಬ್ರಾಹ್ಮಣರು "ಲೇ—ನಿನ್ನನ್ನೇ—ಲೇ" ಎಂದು ಮತ್ತೆ ಕರೆದರು.

ಅದಕ್ಕೆ ಅವರ ಹೆಂಡತಿ ಕೋಪ ಬಂದವಳಂತೆ ತೋರಿಸಿಕೊಂಡು,

"ಇಲ್ಲಿ' ಲೇ'ನೂ ಇಲ್ಲ—'ಬೇ'ನೂ ಇಲ್ಲ. 'ಲೇ' ಅಂತೆ 'ಲೇ'—ಕಾಸು ಕೊಟ್ಟು ಸಂತೆಯಲ್ಲಿ ಕೊಂಡ ಪದಾರ್ಥವೇ ? ಇನ್ನುಮುಂದೆ ಹೀಗೆ ಕರೆಯಿರಿ—ದಾರಿ ತೋರಿಸುತ್ತೇನೆ" ಎಂದು ಪರಿಹಾಸ್ಯದಿಂದ ಹೇಳಿದಳು.

ಅವರು:- "ಚು-ಚು ಎಷ್ಟಪ್ಪಾ !" ಎಂದು ಹೇಳಿ, "ದೊರೆಯ ಮಗಳಾದರೂ ತಂದುಕೊಂಡವನಿಗೆ ಅವಳು ಊಳಿಗದವಳು" ಎಂದು ಸಂಗೀತವನ್ನು ಹಾಡಲು ತೊಡಗಿದರು.

ಹೆಂಡತಿ:- ನಿಮ್ಮಂತೆಯೇ ಅವನೂ ಒಬ್ಬ ಗಂಡಸು ತಾನೆ. ವೇದನಾಯಕಂ ಪಿಳ್ಳೆಯಂತೆ ಕೆಟ್ಟು ಇನ್ನು ಫರಂಗಿ ಜನರ ಹೆಂಗಸರಂತೆ ಆರಂಭಿಸಬೇಕಾದುದೆ ! 'ಲೇ' ಎಂದರೇನು—'ಲೇ'. ನಮ್ಮಪ್ಪ ಎರಡು

ದಡವನ್ನಾಳಿದರು ; ನಮ್ಮಜ್ಜ ಮೂರು ದಡಗಳನ್ನಾಳಿದರು. ಸಂತೆಗೆ ತೆಗೆದು ಕೊಂಡು ಬಂದು ಎಸೆದಂತೆ 'ಲೇ' ಎಂದು ಏಕೆ ಕರೆಯಬೇಕು ?

ಅವರು:- ಮೂರೇ ದಡಕ್ಕೆ ಏಕೆ ನಿಲ್ಲಬೇಕು ? ಆ ದಡ—ಈ ದಡ—ಕೊಳದ ದಡ—ಮಸಣದ ದಡ ಒಂದು—ಅಂತು ನಾಲ್ಕು ದಡಗಳಿವೆಯಲ್ಲ.

ಹೆಂಡತಿ:- ನಮಗೆ ಅದು ಮಾತ್ರ ಉಂಟು. ನೀವೆಲ್ಲರೂ ಶರಭೋಜಿ ಮಹಾರಾಜರ ಮಕ್ಕಳು. ನಿಮಗೂ, ನಮಗೂ ಎಷ್ಟೋ ಅಂತರ. ನಿಮಗೆ ನಾವು ಗುಲಾಮರು ತಾನೆ !

ಅವರು:- ನಾನು ಮಾಡಿದ ಅಪರಾಧವನ್ನು ತಾವು ದೊಡ್ಡ ಮನಸ್ಸು ಮಾಡಿ ಕ್ಷಮಿಸಿ ಅನುಗ್ರಹಿಸಬೇಕು. "ಸಣ್ಣವರು ಮಾಡಿದ ತಪ್ಪನ್ನು ಹಿರಿಯರಾದವರು ಮನ್ನಿಸುವುದು ಅವರ ಕಾರ್ಯ" — ಓ! ಶ್ರೀಮತಿ ರಾಜ ರಾಜೇಶ್ವರಿ ಕಮಲಾಂಬಾಳ್ ಅವರೆ ! ದಯೆಯಿಟ್ಟು ಸ್ವಲ್ಪ ನೀರು ಅಪ್ಪಣೆ ಯಾಗಬೇಕು.

ಹೆಂಡತಿ:- ನಮ್ಮ ಮನೆಯಲ್ಲಿ ನೀರು ಕೊಡುವ ಪದ್ಧತಿ ಇಲ್ಲ.

ಅವರು:- ಕೊಟ್ಟರೇನೇ ನಿನಗೆ ಗಂಡು ಮಗು ಹುಟ್ಟುವುದು ನೋಡು ! (ಆಗ್ಗೆ ಕಮಲಾಂಬಾಳ್ ಆರು ತಿಂಗಳ ಗರ್ಭಿಣಿ)

ಹೆಂಡತಿ:- ಆ ! ಇರುವ ಹೆಣ್ಣನ್ನು ಕಾಪಾಡಿದರೆ ಸಾಲದೆ. ಗಂಡು ಮಗು ಇಲ್ಲವೆಂದು ಈಗ ಯಾರು ನಿಮ್ಮೊಡನೆ ಹೇಳಿದರು ?

ಅವರು:- ಹೇಳದಿದ್ದರೂ ಮನಸ್ಸಿನಲ್ಲಾದರೂ ಇರುವುದಲ್ಲವೆ ? ಈಗ ನೀರನ್ನು ತೆಗೆದುಕೊಂಡು ಬಂದರೆ ಇಲ್ಲಿಗೆ ಮೂರನೆಯ ತಿಂಗಳಿಗೆ ಗಂಡು ಮಗು ಹುಟ್ಟುವುದು.

ಹೆಂಡತಿ:- ಮೂರು ತಿಂಗಳಾಗಬೇಕೆ ? ಈಗಲೆ ಮುದ್ದುಮಗು ನೀವಿಲ್ಲವೆ ?—ಎಂದು ಹೇಳಿ ಒಳಗೆ ಹೋಗಿ ಒಂದು ತಟ್ಟೆಯಲ್ಲಿ ತೇಂಗೊಳಲು, ಎಳ್ಳುಂಡೆ ಮೊದಲಾದ ತಿಂಡಿಗಳನ್ನೂ ಕೈಯ್ಯಲ್ಲಿ ಮಂಜಿನ ಗಡ್ಡೆಯಂಥ ತಣ್ಣನೆ ನೀರನ್ನೂ ತೆಗೆದುಕೊಂಡು ಬಂದು ತನ್ನ ಪತಿಯ ಹಾಸಿಗೆಯ ಅಂಚಿ ನಲ್ಲಿಟ್ಟು 'ಅಪ್ಪಾ' ಎಂದು ಅವರ ಮೇಲೆ ವಾಲಿದಳು. ಕೂಡಲೆ ಅವರು ಅವಳನ್ನು ತಬ್ಬಿಕೊಂಡು ಭಕ್ಷ್ಯಗಳನ್ನು ಎಣಿಸಲು ತೊಡಗಿದರು.

ಅರ್ಧ ತಿಂದಾದ ಮೇಲೆ ತನ್ನ ಹೆಂಡತಿ ಪರಾಕಾಗಿರುವುದನ್ನು ಕಂಡು ಅವಳ ಎರಡು ಕೈಗಳನ್ನು ಹಿಡಿಯುತ್ತ "ಏನೆ! ನೀನೇನೊ ಬಹಳ ದೊಡ್ಡ ಮನುಷ್ಯಳಾಗಿ ಬಿಟ್ಟೆಯಾ? ಲೇ—ಅಂದರೆ ಶರಭೋಜಿ ಮಹಾರಾಜನ ಮಗನೆಂದು ಪರಿಹಾಸ್ಯ ಮಾಡುತ್ತೀಯ?" ಎಂದು ಹೇಳಿ ಕೆನ್ನೆಯ ಮೇಲೆ ಮೆತ್ತಗೆ ಹೊಡೆದರು. ಅವಳು ನಗುತ್ತ "ಇಲ್ಲ, ಇನ್ನುಮೇಲೆ– ಇಲ್ಲ" ಎಂದು ಹೇಳಿ "ಮರ್ಯಾದೆಯಿಂದ ಕೈಯನ್ನು ಬಿಡುತ್ತೀರಾ — ಇಲ್ಲ, ಕೂಗಿ ಕೊಳ್ಳಲೊ?" ಎಂದಳು. "ಕೂಗಿಕೊ – ಯಾರು ಬರುತ್ತಾರೆ ನೋಡೋಣ" ಎಂದಕೂಡಲೆ ಅವಳು "ಅಯ್ಯೋ!" ಎಂದು ಮೆತ್ತಗೆ ಮುದ್ದಾಗಿ ಕೂಗಿದ ಮೇಲೆ ಅವರು ಮತ್ತೆ ಕೆನ್ನೆಯಮೇಲೆ ಒಂದು ಏಟನ್ನು ಕೊಟ್ಟು ಕೈಯನ್ನು ಬಿಟ್ಟರು. ಆಮೇಲೆ ಇಬ್ಬರೂ ಬಹಳ ಚುರುಕಾಗಿ ಭಕ್ಷ್ಯಗಳನ್ನು ತಿಂದರು.

ಹೆಂಡತಿ:– ಹೀಗೆ ಭಕ್ಷ್ಯಗಳನ್ನು ತಿನ್ನುತ್ತಿದ್ದರೆ ನಮ್ಮ ಮಗು ಕಲ್ಯಾಣಿಗೆ ಯಾವಾಗ ಮದುವೆ ಮಾಡುವುದು?

ಅವರು:– "ಸೊಬಗಿಗೆ ಸೊಬಗನ್ನು ಕೊಡುವರಾರು?" ಅವಳೇ ಕಲ್ಯಾಣಿ ಆಗಿದ್ದಾಳೆ. ಇನ್ನು ಅವಳಿಗೆ ಕಲ್ಯಾಣ – ಅಂದರೆ ಮದುವೆ – ಏತರದು?

ಹೆಂಡತಿ:– ಪ್ರಪಂಚಕ್ಕೆ ಬುದ್ಧಿ ಇಲ್ಲ. ಸಾವಿರ-ಐನೂರು ಎಂದು ಖರ್ಚು ಮಾಡುತ್ತ ಮದುವೆ ಮಾಡುತ್ತಾರೆ. ಸಣ್ಣದಾಗಿ "ಕಲ್ಯಾಣಿ" ಎಂದು ಹೆಸರನ್ನಿಟ್ಟು ಸುಮ್ಮನಾಗಬಹುದಲ್ಲ. ನಮಗೆ ತಿಳಿದ ಈ ಪರಮ ರಹಸ್ಯ ಒಬ್ಬರಿಗೂ ತಿಳಿಯಲಿಲ್ಲ ನೋಡಿ!

ಅವರು:– ಕಲ್ಯಾಣಿ ಎಲ್ಲಿ ಕಣ್ಣಿಗೇ ಕಾಣಿಸಲಿಲ್ಲ—ಎಂದಕೂಡಲೇ "ಅವಳು ಪಕ್ಕದ ಮನೆಗೆ ಹೋಗಿದ್ದಳು" ಎಂದು ಹೇಳಿ ಆಕೆ "ಕಲ್ಯಾಣೀ" ಎಂದು ಕರೆದಳು. ಆ ಮಗು "ನಮ್ಮಣ್ಣ ಕರೆಯುತ್ತಾರೆ" ಎಂದು ಹೇಳುತ್ತ ತನ್ನ ಸ್ನೇಹಿತೆಯರನ್ನು ಬೀಳ್ಕೊಂಡು, ಕೈಯಲ್ಲಿ ಪುಸ್ತಕಗಳನ್ನು ಹಿಡಿದು ಕೊಂಡು ಬಂದು ನಿಂತಳು.

"ಒಂದು ವಿಷಯ—'ಪುಸ್ತಕಂ ಹಸ್ತಭೂಷಣಂ' ಎಂದ ಹಾಗೆ ನಮ್ಮ ಕಲ್ಯಾಣಿ, ಅಣ್ಣ ಅವರನ್ನು ಕಾಣುವಾಗಲೆಲ್ಲಾ ಕೈಯಲ್ಲಿ ಪುಸ್ತಕವಿಲ್ಲದೆ

ಇರುವುದಿಲ್ಲ.” ಎಂದು ಅವರು ಹೇಳಿದರು. ಅದಕ್ಕೆ ಆ ಮಗು: “ಇಲ್ಲ, ಅಣ್ಣಾ ! ಓದುತ್ತಲೇ ಇದ್ದೆ. ಮೀನಾಕ್ಷಿಯನ್ನು ಬೇಕಾದರೆ ಕೇಳಿ, ಅಣ್ಣಾ !” ಎಂದಳು. ಆದಕ್ಕೆ ಅವರು ಅವಳನ್ನು ಪರೀಕ್ಷಿಸುವುದರ ಸಲುವಾಗಿ— “ಕುಂಟುಬಿಲ್ಲೆ” ಆಡಿಕೊಂಡಿದ್ದೆಯಲ್ಲಾ. ನನಗೆ ಕೇಳಿಸಲಿಲ್ಲವೆಂದು ತಿಳಿದೆಯೇನು ?” ಅಂದುದಕ್ಕೆ “ಇಲ್ಲ, ಅಣ್ಣಾ ! ನಿಶ್ಚಯವಾಗಿ ಓದುತ್ತಿದ್ದೆ” ಎಂದು ಮಗು ಅಂದಳು. ಅವರು “ಪುಸ್ತಕಗಳನ್ನು ಹಾಗೆಯೇ ಕೊಡು” ಎಂದು ತೆಗೆದುಕೊಂಡು— ಅದು ತಾನು ಆಯ್ದು ತೆಗೆದ ಹಾಡುಗಬ್ಬಗಳು— ಟಿಪ್ಪಣಿ ಸಹಿತ ಕಂಬರಾಮಾಯಣದ ಸಂಗ್ರಹವಾಗಿದ್ದುದನ್ನು ನೋಡಿ “ಕೊನೆಗೆ ಎಲ್ಲಿಗೆ ನಿಲ್ಲಿಸಿದೆ ?” ಎಂದು ಕೇಳಲು, ಕಲ್ಯಾಣಿ “ಶೂರ್ಪನಖಿ ರಾವಣನ ಬಳಿ ಹೋಗಿ ಮೊರೆಯಿಟ್ಟು ಯುದ್ಧವಾಗುವಂತೆ ಪ್ರೇರಿಸಿದ ಘಟ್ಟ” ಎಂದು ಹೇಳಿದಳು.

ಅವರು:- (ತನ್ನ ಹೆಂಡತಿಯನ್ನು ನೋಡಿ) ಹೆಂಗಸರೇ ಲೋಕದಲ್ಲಿ ಎಲ್ಲ ಕಲಹಗಳಿಗೂ ಕಾರಣ ! ಸೀತೆ ಇಲ್ಲದಿದ್ದರೆ ರಾಮಾಯಣ ಎಲ್ಲಿರುತ್ತಿತ್ತು ?”

ಹೆಂಡತಿ:- ಹೌದು ! ಹೆಂಗಸರ ಮೇಲೆ ಆಸೆ ಇಟ್ಟು ಗಂಡಸರು ಕೆಟ್ಟು ಅಳಿದರೆ ಅದಕ್ಕೆ ಹೆಂಗಸರೇ ಕಾರಣ. ರಾವಣನು ಕೆಟ್ಟದ್ದು ಸೀತೆಯಿಂದಲೇ ಅಥವಾ ತನ್ನ ಮದದಿಂದಲೆ ?

ಅವರು:- ಅದು ಹೋಗಲಿ. ಇನ್ನೊಂದು ವಿಶೇಷವನ್ನು ನೋಡು. ರಾಮಾಯಣದ ಯುದ್ಧಕ್ಕೆ ಮೊಟ್ಟಮೊದಲಿನ ಕಾರಣವೂ ಹೆಣ್ಣು— ಕಥೆಯ ಮಧ್ಯಭಾಗದಲ್ಲಿ ನಿಂತು ಅದನ್ನು ಕೆರಳಿಸಿದುದೂ ಹೆಣ್ಣು— ಶೂರ್ಪನಖಿ ಅಲ್ಲವೆ ? ಇದರಲ್ಲಿಯೇ ವಾಲ್ಮೀಕಿಯ ಸಾಮರ್ಥ್ಯವೂ ಚೆನ್ನಾಗಿ ಪುಷ್ಟಗೊಳ್ಳುತ್ತದೆ. “ನಾರದರು ಕಲಹ ಪ್ರಿಯರು” ಎಂದು ಹೇಳುವುದು ರೂಢಿಯಾಗಿದೆ. ಆದರೆ ಅವರೂ ಸಹ ಇಷ್ಟು ದೊಡ್ಡ ಯುದ್ಧವನ್ನು ಮಾಡಿಸಲಿಲ್ಲ. ಇಷ್ಟು ಮಾಯಾಜಾಲವನ್ನೂ ಮೋಸವನ್ನೂ ಅವರು ಕನಸಿನಲ್ಲಿಯೂ ಅರಿತವರಲ್ಲ. ಅವರು ಯಾರ ಬಳಿ ಹೋಗಿ ಜಗಳವನ್ನು ಕೆರಳಿಸಿದ್ದರೂ ಶೂರ್ಪನಖಿ ರಾವಣನಿಗೆ ಮಾಡಿದಷ್ಟು ಕೇಡನ್ನು ಅವರು ಮಾಡಿ

ದುದೇ ಇಲ್ಲ. ಹತ್ತು ನಾರದರನ್ನು ಸೇರಿಸಿದರೂ ಒಂದು ಶೂರ್ಪನಖಿಯಾಗ ಲಾರರು.

ಹೆಂಡತಿ:- ಹಾಗೆಯೇ ಆಗಲಿ. ಲೋಕದಲ್ಲಿ ಗಂಡಸರೆಲ್ಲರೂ ರಾವಣ ನಂತೆಯೂ, ಕುಂಭಕರ್ಣನಂತೆಯೂ ಇದ್ದರೆ, ಹೆಂಗಸರೆಲ್ಲರೂ ಶೂರ್ಪನಖಿ ಯಂತಿರಬಾರದೇಕೆ ?

ಅವರಿಗೆ ಇದರ ಮೇಲೆ ಯಾವ ಸಮಾಧಾನವನ್ನೂ ಹೇಳಲು ತೋರ ಲಾಗದ್ದರಿಂದ ಮಗು ಕಲ್ಯಾಣಿಯನ್ನು ನೋಡಿ: "ನಿನಗೆ ರಾಮನಂಥ ಗಂಡ ಬೇಕೆ—ಲಕ್ಷ್ಮಣನಂಥವನು ಬೇಕೆ ?" ಎಂದು ಕೇಳಿದರು. ಕಲ್ಯಾಣಿ ನಾಚಿಕೆ ಯಿಂದ ತಲೆ ತಗ್ಗಿಸಿಕೊಂಡು ಮೌನ ತಾಳಿದಳು. ಆಗ ಅವರು "ರಾಮ ಕಪ್ಪು — ಲಕ್ಷ್ಮಣ ಕೆಂಪು. ರಾಮ ಸಾಧು. ಅವನಿಗೆ ಅಳುವುದಕ್ಕೆ ಮಾತ್ರ ಗೊತ್ತು. ಲಕ್ಷ್ಮಣನೋ ಒಳ್ಳೆಯ ಧೀರ. ನೋಡು—ರಾಮನ್ನು ಕಾಡಿಗೆ ಹೋಗು ಎನ್ನುವುದಕ್ಕೆ ಮೊದಲೆ ನಾರುವಸ್ತ್ರಗಳನ್ನು ಧರಿಸಿ ಕಾಡಿಗೆ ಹೊರಟು ಬಿಟ್ಟ. ಲಕ್ಷ್ಮಣನಾದರೋ ಧೈರ್ಯವಾಗಿ ಎಲ್ಲರನ್ನೂ ಕೊಂದುಹಾಕು ತ್ತೇನೆ ಎಂದು ಬಿಲ್ಲನ್ನು ಎತ್ತಿದ. ರಾಮನಿಗಿಂತ ಲಕ್ಷ್ಮಣನೇ ಎಷ್ಟೋ ಮೇಲು. ಎಲ್ಲವನ್ನೂ ಯೋಚಿಸಿ ಬೇಗ ಉತ್ತರ ಹೇಳು. ನಾನು ಮದುವೆಗೆ ಏರ್ಪಾಡು ಮಾಡಬೇಕು." ಎಂದು ಪರಿಹಾಸ್ಯ ಮಾಡಿದರು.

ಕಲ್ಯಾಣಿ:- ಏನಣ್ಣಾ ! ಇದಕ್ಕಾಗಿಯೇ ಕರೆದಿರೇನು? ಮೀನಾಕ್ಷಿ ಕರೆಯುತ್ತಾಳೆ. ನಾನು ಹೋಗುತ್ತೇನೆ.—ಎಂದು ಹೊರಡಲು, ಕೂಡಲೆ ಅವರು "ಇದೊಳ್ಳೇ ಮಗು ; ನೀನು ರಾಮನನ್ನೂ ಮದುವೆ ಮಾಡಿಕೊಳ್ಳ ಬೇಡ—ಲಕ್ಷ್ಮಣನನ್ನೂ ಮದುವೆ ಮಾಡಿಕೊಳ್ಳಬೇಡ. ಅವರಿಬ್ಬರಿಗೂ ಮದುವೆ ಆಗಿಬಿಟ್ಟಿದೆ. ಅದಕ್ಕಾಗಿ ಏತಕ್ಕೆ..." ಎಂದು ಹೇಳಿ ಮುಗಿಸುವುದ ರೊಳಗೆ "ಮುತ್ತುಸ್ವಾಮೀ, ಮುತ್ತುಸ್ವಾಮೀ!" ಎಂದು ಬೀದಿಯ ಬಾಗಿಲನ್ನು ಯಾರೋ ತಟ್ಟಲು, ಮುತ್ತುಸ್ವಾಮಿ ಅಯ್ಯರ್ "ರಾಮಣ್ಣ ಪುರೋಹಿತರು ಬಂದಿದ್ದಾರೆ. ನೀವು ಒಳಗೆ ಹೋಗಿ" ಎಂದು ಹೇಳಿ ತಾಯಿ ಮಗಳನ್ನು ಒಳಕ್ಕೆ ಕಳಿಸಿ ಬಾಗಿಲನ್ನು ತೆಗೆದರು.

## ೨. ಪುರೋಹಿತರೂ ಜೋಯಿಸರೂ.

ಮುತ್ತುಸ್ವಾಮಿ ಅಯ್ಯರ್ ಬಾಗಿಲನ್ನು ತೆಗೆದಕೂಡಲೆ ರಾಮಣ್ಣ ಪುರೋಹಿತರು ಒಳಕ್ಕೆ ಬಂದರು. ಅವರನ್ನು ನೋಡಿದರೆ ಅವರ ವಯಸ್ಸು ಐವತ್ತಕ್ಕೂ ಮಿಗಿಲಾಗಿದೆಯೆಂದು ಯಾರೂ ಹೇಳಲಾರರು. ಆದರೆ ಅವರಿಗೆ ಷಷ್ಠಿಪೂರ್ತಿಯಾಗಿ ಐದುವರ್ಷಗಳಾಗಿಹೋದುವು: ಅಂದರೆ ಈಗ ಅವರಿಗೆ ೬೫ ವರ್ಷ. ಈಗಲೂ ಶಿರುಕುಳದಲ್ಲಿ ಇವರನ್ನು ಬಿಟ್ಟು ಬೇರೆ ಯಾರನ್ನೂ ಬ್ರಾಹ್ಮಣಾರ್ಥಕ್ಕೆ ಕರೆಯುವುದಿಲ್ಲ. ಆ ಊರಿನಲ್ಲಿ ಒಂದು ತಿಂಗಳಿಗೆ ಕನಿಷ್ಠ ಪಕ್ಷ ಇಪ್ಪತ್ತು ಶ್ರಾದ್ಧಗಳಾದರೂ ಆಗುವುವು. ಎಲೆಯಲ್ಲಿ ಬಡಿಸುತ್ತಿರುವಾಗ "ಸಾಕು" ಎಂದು ಹೇಳುವ ದುರಭ್ಯಾಸ ಅವರಲ್ಲಿಲ್ಲ. "ಎಷ್ಟು ಹಾಕಿದರೂ ಊಟ ಮಾಡುವುದು ನಮ್ಮ ಕರ್ತವ್ಯ" ಎಂದು ಅವರು ಹೇಳುವುದುಂಟು. ಆ ಊರಿನ ಜನಗಳಿಗೆ ಅವರು ಬ್ರಾಹ್ಮಣಾರ್ಥ ಭೋಜನ ಮಾಡಿದರೇನೇ ತೃಪ್ತಿ. "ಈ ಬ್ರಾಹ್ಮಣರು ಇಷ್ಟು ಉಣ್ಣುತ್ತಾರಲ್ಲಾ — ಇದರಲ್ಲಿ ಅರ್ಧ ಭಾಗವಾದರೂ ನಮ್ಮ ಪಿತೃಗಳಿಗೆ ಸೇರಲಾರದೆ" ಎಂದು ಅವರ ಭಾವನೆ. ಯಥಾರ್ಥವನ್ನು ಅವರು ಅರಿಯರು. ಇವರು ಮಧ್ಯಾಹ್ನ ಊಟ ಮಾಡುವುದಲ್ಲದೆ ರಾತ್ರಿ ಭೋಜನವಿಲ್ಲವಾದುದರಿಂದ ಇಪ್ಪತ್ತು ಮೂವತ್ತು ವಡೆಗಳನ್ನು ಮಾತ್ರ ತಿಂದು ಒಪ್ಪತ್ತು ಮಾಡುವರು. ಉದ್ದಿನವಡೆ ಮಾತ್ರವೇ ಅವರ ಮೈಕಟ್ಟು ಕೆಡದಂತೆ ಕಾಪಾಡಿಕೊಂಡು ಬಂದಿದೆ. ಒಂದು ದಿನವಾದರೂ ಜ್ವರವೆಂದು ಹಾಸಿಗೆ ಹಿಡಿದಿರಬೇಕಲ್ಲಾ! ಇಲ್ಲವೇ ಇಲ್ಲ. ವಯಸ್ಸಿನಿಂದ ಸ್ವಲ್ಪ ಗೂನಿದ್ದವರಂತೆ ಕಂಡರೂ, ಅವರ ನಡೆ ಸ್ವಲ್ಪವಾದರೂ ನಡುಗುತ್ತಿರಲಿಲ್ಲ. ನದಿಯ ದಡದಲ್ಲಿ ಪ್ರತಿನಿತ್ಯವೂ ಓಡುವುದು ಅವರ ಅಭ್ಯಾಸ.

ಪುರೋಹಿತರು ಒಳಗೆ ಬಂದಕೂಡಲೆ ನಮ್ಮ ಮುತ್ತುಸ್ವಾಮಿ ಅಯ್ಯರ್, "ಮಾಮಾ, ಬನ್ನಿ, ಬನ್ನಿ...ಮಗು, ಮಣೆ ತೆಗೆದುಕೊಂಡು ಬಾ!" ಕಲ್ಯಾಣಿ ಮಣೆಯನ್ನು ತಂದಮೇಲೆ "ಕೂತುಕೊಳ್ಳಿ— ನಾನೇ ಅಲ್ಲಿಗೆ ಬರಬೇಕೆಂದಿದ್ದೆ... ಎಲಾ, ಯಾರೋ ಅದು, ವೀರಾ!" ಎಂದು ಕೂಗಿದರು. ತತ್‌ಕ್ಷಣವೆ ಕೆಲಸಗಾರನಾದ ವೀರನು "ಸ್ವಾಮಿ" ಎನ್ನುತ್ತ ಬರಲು ಅವರು,

"ಹೋಗಿ, ಮಗು ಸುಂದರನನ್ನು ಕರೆದುಕೊಂಡು ಬಾ" ಎಂದು ಹೇಳಿದರು. ಪುರೋಹಿತರನ್ನು ನೋಡಿ, "ಜೋಯಿಸರನ್ನು ಕರೆದುಕೊಂಡು ಬರಹೇಳಿದೆ. ರಾಹುಕಾಲ ಕಳೆದುಹೋಯಿತಲ್ಲವೆ — ಈಹೊತ್ತು ಏನು ಶುಕ್ರವಾರವೆ?"

ಪುರೋಹಿತರು:- ಹೌದು, ಹೌದು. ರಾಹುಕಾಲ ಕಳೆದು ಬಹಳ ಹೊತ್ತು ಆಗಿದೆ.

ಮುತ್ತು:- "ಹೌದು, ಹೌದು. ಮಂಗಳವಾರವೆಂಬ ಜ್ಞಾಪಕದಿಂದ ಹೇಳಿದೆ." ಆ ಹೊತ್ತಿಗೆ ಹುಡುಗ ಸುಂದರನು ಚೆಂಡನ್ನು ಆಡುತ್ತ .ಏತಕ್ಕೆ ಅಪ್ಪಾ — ಕೂಗಿದಿರಂತೆ?" ಎಂದು ಕೇಳುತ್ತ ಬಂದನು.

ಮುತ್ತು:- "ಚಂಡು ಏತಕ್ಕೊ? — ಎಲೆಲಾ! ತಾತನ ಮೇಲೆ ಬೀಳಹೋಗುತ್ತೆ. ಅದನ್ನು ಕೈಯ್ಯಲ್ಲಿಟ್ಟುಕೊ"

ಹುಡುಗ:- "ಹೊಸ ಚೆಂಡು ಅಪ್ಪಾ! ದೊಡ್ಡ ಗಜ್ಜುಗ ಒಳಗೆ ಇಟ್ಟದ್ದೇನೆ."

"ಆದಿರಲಿ: ಏನು ಆಟದ ಬುದ್ಧಿ — ನೀನು ಹೋಗಿ ಶಂಕರ ಜೋಯಿಸರನ್ನು ಅಪ್ಪನೂ, ತಾತನೂ..." ಎಂದು ಮುಂದುವರಿಸುತ್ತಿರುವಲ್ಲಿ "ಯಾವ ತಾತ?" ಎಂದು ಹುಡುಗ ಕೇಳಲು "ಹೌದೋ — ಇದೇ ತಾತ— 'ನಿಮ್ಮನ್ನು ತತ್‌ಕ್ಷಣ ಕರೆದುಕೊಂಡು ಬರುವಂತೆ ಹೇಳಿದರು. ಏನೋ ಅವಸರದ ಕೆಲಸವಂತೆ' ಎಂದು ಹೇಳಿ ಕರೆದುಕೊಂಡು ಬಾ!" ಎಂದು ಹೇಳಿದರು.

ಹುಡುಗ:- "ಏನು ಕೆಲಸ ಹೇಳು?"

ಮುತ್ತು:- "ಹೇಳುತ್ತೇನೆ ಹೋಗು."

ಹುಡುಗ:- "ಹೇಳಿದರೇನೇ..."

ಮುತ್ತು:- "ಅಕ್ಕನಿಗೆ ಮದುವೆ"

ಹುಡುಗ:- "ಅಕ್ಕನಿಗೆ ಮದುವೆಯಂತೆ, ನಿಮ್ಮನ್ನು ಕರೆದುಕೊಂಡು ಬರಹೇಳಿದರು ಎಂದು ಹೇಳಿ ಕರೆದುಕೊಂಡು ಬರುತ್ತೇನೆ."

ಮುತ್ತು:- "ಇದು — ಏನೋ ಇವನು — ನೀನು ಏನೂ ಹೇಳ ಬೇಡವೋ, ಜೊತೆಯಲ್ಲಿಯೇ ಕರೆದುಕೊಂಡು ಬಾರೋ."

ಹುಡುಗ:- "ಅವರು ನನ್ನೊಡನೆ ಓಡಲಾರರು. ನಾನು ಅವರಿಗೆ ಮುಂಚೆಯೇ ಓಡಿ ಬಂದುಬಿಟ್ಟಿರುತ್ತೇನೆ."

ಮುತ್ತು:- "ನೀನು ಓಡಬೇಡ. ಹೋಗಿ ನಿಧಾನವಾಗಿ ಕರೆದುಕೊಂಡು ಬಾ!" ಎಂದು ಹೇಳಲು, ಸುಂದರನು ಕುಣಿಯುತ್ತ ಆಚೆ ಓಡಿದನು.

ಸ್ವಲ್ಪಹೊತ್ತಾದ ಮೇಲೆ ಕೆಂಚಗೆ ಒಬ್ಬ ಮನುಷ್ಯರು ಒಳಗೆ ಬಂದರು. ಕಂಠದಲ್ಲಿ ರುದ್ರಾಕ್ಷಿ, ಕೈಯ್ಯಲ್ಲಿ ತಿರುಪತಿ ಕಡಗ, ಬೆರಳಿನಲ್ಲಿ ಚಿನ್ನದ ಉಂಗುರ ಧರಿಸಿಕೊಂಡು, ಕೈಯ್ಯಲ್ಲಿ ಒಂದು ಗ್ರಂಥ ಹಿಡಿದುಕೊಂಡಿದ್ದರು. ಇವರು ಬಂದಕೂಡಲೆ, ಅಯ್ಯರ್ "ಬನ್ನಿ" ಎಂದು ಹೇಳಿ ಆಸನ ಕೊಟ್ಟಮೇಲೆ, ಪುರೋಹಿತರು "ಶಂಕರಾ, ಬಾ!" ಎಂದು ಹೇಳಿ "ಇಗೋ, ಈ ಜಾತಕಗಳನ್ನು ನೋಡು" ಎಂದು ಕೈಯ್ಯಲ್ಲಿ ಕೊಟ್ಟರು.

ಜೋಯಿಸರು ಕುಳಿತುಕೊಂಡು "ಮಗುವಿಗಾಗಿ ಒಂದು ಕಟ್ಟು ಜಾತಕ ವಿದೆಯೇ! ನೂರಕ್ಕೆ ಕಡಮೆ ಇಲ್ಲದಂತೆ ಕಾಣುತ್ತದೆ" ಎಂದು ಹೇಳಿದರು.

ಮುತ್ತು:- "ಇರಬಹುದು."

ಜೋಯಿಸರು:- "ನಿಮ್ಮ ಗುಣಕ್ಕೂ, ಬುದ್ಧಿಗೂ, ಐಶ್ವರ್ಯಕ್ಕೂ ಬಾಯಿಬಿಟ್ಟು ಹೇಳಿದರೆ ಸಾಲದೆ. ಲಕ್ಷ ಜಾತಕಗಳು ಬರುತ್ತವೆ. ಮಗುವಿಗೆ ಮಾತ್ರ ಏನು ಕಡಮೆ? ಎಲ್ಲರೂ ಹುಡುಗಿಯರೇ—ಅವಳಂತಹ ಹುಡುಗಿಯೆ? ಅವಳ ಬುದ್ಧಿಗೂ, ಶಾಂತ ಸ್ವಭಾವಕ್ಕೂ, ಸೌಂದರ್ಯಕ್ಕೂ, ಓದಿಗೂ..." ಇತ್ಯಾದಿಯಾಗಿ ಸ್ತೋತ್ರ ಮಾಡಿದರು.

ಮುತ್ತು ಇದನ್ನು ಸಹಿಸಲಾರದವರಾಗಿ "ಮಗುವಿಗೆ ಹತ್ತುವರ್ಷ ವಾಗುತ್ತೆ. ಈ ವರ್ಷದಲ್ಲಿಯಾಗಲಿ, ಮುಂದಿನ ವರ್ಷದೊಳಗಾಗಿ ಆಗಲಿ ಮದುವೆ ಮಾಡಿತೀರಬೇಕು."

ಜೋಯಿಸರು:- "ಇದೇ ಸರಿಯಾದ ವಯಸ್ಸು. ಇದಕ್ಕೆ ಮುಂಚೆಯೇ ಏನು ಮದುವೆ? ಅದೆಲ್ಲ ನನಗೇ ಮನಸ್ಸಿಗೆ ಸಮಾಧಾನ ಕೊಡುವುದಿಲ್ಲ" ಎಂದು ಹೇಳುತ್ತ "ಆಹಾ! ಇದು ಭೇಷಾದ ಜಾತಕ. ಪಂಚಮದಲ್ಲಿ ರವಿ; ಜನ್ಮದಲ್ಲಿ ಶನಿದಶೆ; ಅಷ್ಟಮಾಧಿಪತಿ ಗುರು; ಶುಕ್ರದಶೆಯಲ್ಲಿ ಒಳ್ಳೆಯ ಯೋಗವಿದೆ."

ಮುತ್ತು:- "ಹೊಂದುವ ಜಾತಕಗಳನ್ನೆಲ್ಲ ಒಂದು ಪಕ್ಕಕ್ಕೆ ಇಡಿ. ಆಮೇಲೆ ಅದರಲ್ಲಿ ಆರಿಸಿಕೊಳ್ಳೋಣ."

ಪುರೋಹಿತರು "ಇದಕ್ಕೂ ಎರಡು ಭಾವವಿದೆ. ಇದೂ ಭಾವ ಜಾತಕವೇ." ಎಂದು ಒಂದೊಂದಾಗಿ ತಳ್ಳಿಹಾಕುತ್ತಿದ್ದರು.

*                    *                    *

ಇಲ್ಲಿ ಹೀಗಾಗುತ್ತಿರಲು, ಮಧುರೆಯಲ್ಲಿ ವೆಳ್ಳಿಯಂಬಲ ಬೀದಿಯಲ್ಲಿ ಒಂದು ದೊಡ್ಡ ಗಾರೆಯ ಮನೆಯ ಜಗುಲಿಯ ಮೇಲೆ ಇಬ್ಬರು ಮುದುಕರು ಕುಳಿತಿದ್ದರು.

ಅವರಲ್ಲಿ ಒಬ್ಬರು: "ಮುತ್ತುಸ್ವಾಮಿ ಮಗಳ ಜಾತಕವೂ, ಹುಡುಗನ ಜಾತಕವೂ ಹೊಂದಿಕೊಳ್ಳುತ್ತವೆ. ಅದೇ ನನ್ನ ಮನಸ್ಸಿಗೆ ಹಿಡಿದದ್ದಾಗಿದೆ. ನೀವು ಇನ್ನೂ ಯೋಚನೆ ಮಾಡಿ ಹೇಳಿ" ಎಂದು ಹೇಳಿದರು.

ಮತ್ತೊಬ್ಬರು:- ಯೋಚನೆ ಏನು? ಮನಸ್ಸಿಗೂ ಹಿಡಿದು, ಜಾತಕವೂ ಹೊಂದಿದರೆ ಅದನ್ನೇ ಮಾಡಿ ಮುಗಿಸಬೇಕು. ಮುತ್ತುಸ್ವಾಮಿಯೂ ಜನಗಳ ಮೇಲೆ ಅಭಿಮಾನ ಉಳ್ಳವನು. ಅವನ ಹೆಂಡತಿಯೋ ಅದಕ್ಕಿಂತಲೂ ಹೆಚ್ಚಾಗಿ ನಾನು ಹೋದರೆ ಸಾಕು, "ಮಾವಾ, ಮಾವಾ" ಎಂದು ಹೇಳುತ್ತ ಮಾಡುವ ಉಪಚಾರಗಳು ಹೇಳತೀರದು. ಊರಿನವರ ಯೋಗಕ್ಷೇಮ ವಿಚಾರಿಸುವುದೂ, ಇನ್ನೊಬ್ಬರ ಅಭಿಪ್ರಾಯವನ್ನು ತಿಳಿದು ನಡೆದುಕೊಳ್ಳುವುದೂ ಅವಳಲ್ಲಿ ಬಹಳ ಚೆನ್ನಾಗಿದೆ. ಗಟ್ಟಿಮಾತು ಒಂದಿಲ್ಲ. ಸ್ವತ್ತಾದರೊ ಅಳವಿಲ್ಲದೆ ಬಿದ್ದಿದೆ. ಹೆಣ್ಣು ಚಿನ್ನದಲ್ಲಿ ಎರಕ ಹುಯ್ದಂತೆ ಇದ್ದಾಳೆ. ಮಿಂಚಿನಸರವೆನ್ನಬಹುದು. ಅವಳ ಸೌಂದರ್ಯ ನಮ್ಮ ಹುಡುಗನಿಗೆ ಸಹ ಇಲ್ಲ.

ಮೊದಲಿನವರು:- "ಹೋಗಲಿ, ಅದೇ ನನ್ನ ಮನಸ್ಸಿಗೂ ಹಿಡಿದಿದೆ. ರಾತ್ರಿ ಬೇಕಾದರೆ ಹೂ ಇಟ್ಟು ನೋಡೋಣ.

ಅದಕ್ಕೆ ಕೃಷ್ಣಅಯ್ಯರ್: "ಹೂವನ್ನು ಇಟ್ಟು ನೋಡೋಣ. ಶಕುನವನ್ನೂ ನೋಡೋಣ. ಮನಸ್ಸಿನಲ್ಲಿ ಸಂಶಯವೇತಕ್ಕೆ? ನಮಗೇನು ಹೆಣ್ಣಿಲ್ಲವೆ? ನಾವು ಮಾಡುವುದೆಲ್ಲವನ್ನೂ ಮಾಡಿದಮೇಲೆ ಅನಂತರ ಇದ್ದಂತೆ ಆಗುವುದು. ರಾತ್ರಿ ಗುಡಿಗೆ ನಾನೂ ಬರುತ್ತೇನೆ. ಮೀನಾಕ್ಷಿ ಅಮ್ಮನವರ

ಸಮ್ಮತಿಯನ್ನೂ ಕೇಳೋಣ. ಇದರಲ್ಲೇನು?" ಎಂದು ಹೇಳಿದರು. ರಾಮಸ್ವಾಮಿ ಶಾಸ್ತ್ರಿಗಳೂ ಸಹ "ಆಹಾ, ಸರಿ, ಹಾಗೆಯೇ ಮಾಡೋಣ." ಎಂದು ಒಪ್ಪಿದರು. ಕೃಷ್ಣಅಯ್ಯರ್ "ನಾನು ಚಿತ್ರ ಬೀದಿವರೆಗೂ ಹೋಗಿ ಆಮೇಲೆ ಬರುತ್ತೇನೆ" ಎಂದು ಅಪ್ಪಣೆ ಪಡೆದು ಜಗಲಿಯಿಂದ ಕೆಳಕ್ಕೆ ಇಳಿದರು.

## ೩. ಹರಟೆಯುವರ ಮಹಾಸಭೆ

ಅಂದು ಹಗಲು ಕೃಷ್ಣಅಯ್ಯರ್ ಅವರೂ ಅವರ ಬೀಗರಾದ ರಾಮಸ್ವಾಮಿ ಶಾಸ್ತ್ರಿಗಳೂ ಮಾತನಾಡಿಕೊಂಡಂತೆ ರಾತ್ರಿ ಮೀನಾಕ್ಷಿ ಅಮ್ಮನ ಗುಡಿಗೆ ಹೋಗಿ ಹೂವನ್ನು ಇಟ್ಟು ನೋಡಲು ಬಿಳಿಯ ಹೂ ಕೈಗೆ ಬಂದುದು ಮಾತ್ರವಲ್ಲದೆ ಅಮ್ಮನವರ ಸನ್ನಿಧಿಯಲ್ಲಿ ಗರ್ಭಗುಡಿಯಲ್ಲಿ ಬೆಳಗಿಸಿದ್ದ ದೀಪದಿಂದ ಹೂಗಳಂತೆ ಕಿಡಿಗಳು ಉದುರಿದುವು. ಇದನ್ನು ನೋಡಿದ ಇಬ್ಬರೂ ಅಡಗಿಸಲಾರದ ಆನಂದದೊಡನೆ ಮನೆಗೆ ಹಿಂತಿರುಗಿ, ಯಾವಾಗ ಬೆಳಗಾದೀತು ಎಂದು ರಾತ್ರಿಯೆಲ್ಲ ಕಾತರತೆಯಿಂದ ಇದಿರು ನೋಡುತ್ತಿದ್ದರು. ಬೆಳಗಾದ ಕೂಡಲೆ ಪ್ರಾತರ್ವಿಧಿಗಳನ್ನು ಮುಗಿಸಿಕೊಂಡು ಶಿರುಕುಳಂ ಮುತ್ತುಸ್ವಾಮಿ ಅಯ್ಯರಿಗೆ ಪತ್ರವನ್ನು ಬರೆಯಲು ಕುಳಿತುಕೊಂಡರು. ಆಗ ಅಂಚೆಯ ಆಳು ಕೃಷ್ಣಯ್ಯರ್‌ರವರ ಹೆಸರಿಗೆ ಒಂದು ಪತ್ರವನ್ನು ತಂದುಕೊಟ್ಟನು. ಅದರ ಮೇಲೆ 'ಶಿರುಕುಳ'ದ ಮುದ್ರೆ ಇದ್ದುದರಿಂದ ಅದನ್ನು ಕಾತರತೆಯಿಂದ ಬಿಚ್ಚಿ ನೋಡಿ ಪತ್ರವನ್ನು ಓದಲಾರಂಭಿಸಿದರು. ಆ ಪತ್ರ ಈರೀತಿಯಲ್ಲಿತ್ತು.

ಶಿರುಕುಳಂ

ಪಂಗುನಿ — ೧೯ ದಿನಾಂಕ

ಶ್ರೀಮತ್ ಮ. ರಾ. ರಾ. ಶ್ರೀ ಮಾಮಾ ಅವರ ದಿವ್ಯಶ್ರೀ ಪಾದಪದ್ಮಂಗಳಲ್ಲಿ— ಬಾಲಕನಾದ ಮುತ್ತುಸ್ವಾಮಿ ಸಾಷ್ಟಾಂಗಪೂರ್ವಕವಾಗಿ ನಮಸ್ಕರಿಸಿ ಮಾಡುವ ವಿಜ್ಞಾಪನೆಗಳು. ಇಲ್ಲಿ ಎಲ್ಲರೂ ಕ್ಷೇಮ. ಅಲ್ಲಿನವರ ಕ್ಷೇಮಾತಿಶಯಗಳಿಗೆ ಆಗಾಗ್ಗೆ ಬರೆಯುವಂತೆ ಅಪ್ಪಣೆ ಕೊಡಿಸಬೇಕೆಂದು ಕೋರುತ್ತೇನೆ.

ತಮ್ಮ ಆಶೀರ್ವಾದ, ಅನುಗ್ರಹ ಸಂಪೂರ್ಣವಾಗಿ ಉಳ್ಳ ನನಗೆ ಏನು ಕೊರತೆ? "ನೀರಿರಬೇಕಾದರೆ ಪೈರು ಬಾಡುವುದೆ? ಚಿ|| ಶ್ರೀನಿವಾಸನ ಜಾತಕವೂ, ಸೌ|| ಲಕ್ಷ್ಮಿ (ಕಲ್ಯಾಣಿಯ ಮತ್ತೊಂದು ಹೆಸರು) ಜಾತಕವೂ ಎಲ್ಲ ವಿಧಗಳಲ್ಲಿಯೂ ಹೊಂದಿಕೊಳ್ಳುತ್ತವೆ. ಶ್ರೀನಿವಾಸನೂ ಲಕ್ಷ್ಮಿಯೂ ಕೂಡಿಕೊಂಡು ಬಾಳಲು ಮನುಷ್ಯ ಪ್ರಯತ್ನವೂ ಬೇಕೊ? ಇನ್ನುಮೇಲೆ ನಡೆಯಬೇಕಾದ ಕಾರ್ಯಗಳೆಲ್ಲವೂ ತಮ್ಮದೇ. "ಗಾಳಿ ಇಲ್ಲದೆ ಮರದ ಎಲೆಗಳು ಆಡುವುದುಂಟೆ?"

ತಮ್ಮ ಬೀಗರಾದ ಮ. ರಾ. ರಾ. ಶ್ರೀ ರಾಮಸ್ವಾಮಿ ಶಾಸ್ತ್ರಿಗಳವರ ಅಭಿಪ್ರಾಯವನ್ನು ತಿಳಿದ ಮೇಲೆ ಅವರಿಗಾಗಿ ನೇರವಾಗಿ ಬರೆಯುತ್ತೇನೆ.

ಇಂತು ಅನೇಕ ನಮಸ್ಕಾರ. ಮುತ್ತುಸ್ವಾಮಿ.

ಈ ಪತ್ರವನ್ನು ಓದಿದ ಕೂಡಲೆ ಕೃಷ್ಣಅಯ್ಯರ್, "ಮುತ್ತುಸ್ವಾಮಿ ತುಂಬ ಓದಿದವನು. ಪತ್ರವನ್ನು ಬರೆಯುವ ರೀತಿಯನ್ನು ನೋಡಿರಿ. ಸಂಕ್ಷೇಪವಾಗಿ ಉಪಮಾನ ಉಪಮೇಯಗಳ ಸಹಿತ, ತಾನು ಏನೂ ಮೇಲೆ ಹಾಕಿಕೊಳ್ಳಬಾರದಂತೆ" ಎಂದು ಹೇಳಿದರು. ಶಾಸ್ತ್ರಿಗಳೂ ಸಂತೋಷದಿಂದ ಅರಳಿದ ಮುಖವುಳ್ಳವರಾಗಿ "ಚೆನ್ನಾಗಿದೆ" ಎಂದು ಹೇಳಿದರು. ಅನಂತರ ಸ್ವಲ್ಪಹೊತ್ತು ಕೆಲವು ಮಾತುಗಳಾದ ಮೇಲೆ, ಇಬ್ಬರೂ ಶಿರುಕುಳಕ್ಕೆ ಅಂದು ಹಗಲೇ ಹೋಗಿ ಮುಹೂರ್ತವನ್ನು ನಿಶ್ಚಯ ಮಾಡಿಕೊಂಡು ಬರಬೇಕೆಂದು ತೀರ್ಮಾನಿಸಿದರು.

* * *

ಮರುದಿನ ಬೆಳಗಾಗುತ್ತಲೆ ಶಿರುಕುಳದಲ್ಲಿ ನದಿಯ ತೀರದಲ್ಲಿ ಕೆಲವು ಹೆಂಗಸರು ಸೀರೆಗಳನ್ನು ಒಗೆಯುತ್ತಿದ್ದರು. ಅವರಲ್ಲಿ ಒಬ್ಬಾಕೆ* "ಹೌದು,

---

* ಈ ಮಹಾತಾಯಿಗೆ 'ರ' ಉಚ್ಚಾರಣೆ ಬರುವುದಿಲ್ಲ ಅದಕ್ಕೆ 'ಯ' ಎಂತಲೇ ಹೇಳುವಳು. ಮೊದಲೇ ಈ ಪರಿಭಾಷೆಯನ್ನು ಆರಂಭಿಸಿದರೆ ಲೋಕವು ಭಯ ಪಡುವುದೆಂದು ಅದಕ್ಕೆ ಉದಾಹರಣೆ ಮುಂದಿನ ಅಧ್ಯಾಯಗಳಲ್ಲಿ ಮಾತ್ರ ಕೊಡಲಾಗಿದೆ.

ಎಲ್ಲಾ ಕಾರ್ಯವಾಗುವವರೆಗೆ ಕತ್ತೆಯ ಕಾಲನ್ನೂ ಹಿಡಿಯುವುದು ತಾನೆ! ಈಗ ಎಂಟನೆಯ ಮಗುವನ್ನು ಹೆತ್ತವಳಿಗೆ ಆಚಾರ ಉಪಚಾರವಾಗಿ ಬಿಟ್ಟಿದೆ. ಇದಕ್ಕೆ ಹಿಂದೆ ನಡೆದುದೆಲ್ಲ ನಿನ್ನೆ ಹುಟ್ಟಿದ ಮಗುವಿಗೂ ಗೊತ್ತು. ಚೊಚ್ಚಲು ಮಗನನ್ನು ಹೆತ್ತಿದ್ದೆ. ಹೊತ್ತುಹೊತ್ತಿಗೆ ಔಷಧಿ ಇಲ್ಲ. ಊಟ ವಿಲ್ಲ. ತಾಯಿ ಮಗಳೂ ಒಟ್ಟಿಗೆ ಸೇರಿಕೊಂಡು ಸಂಸಾರ ಹಾಳುಮಾಡುವ ಮಾತನ್ನು ಆಡುತ್ತಿದ್ದುದು ನನಗೆ ತಿಳಿಯದೇನು? ಆಗ ಒಂದುದಿನ ವಿಳಾಚ್ಚೇರಿಯಿಂದ ಹಲಸಿನಹಣ್ಣು ಬಂತು. ಅಂದು ತಿಂಗಳಾರಂಭ. ಶಾವೆ ಗಡ್ಡೆ ಹಾಕಿ ಮಜ್ಜಿಗೆ ಹುಳಿ, ತೆಂಗಿನಕಾಯಿ ಕೋಸುಂಬರಿ, ಹಲಸಿನಕಾಯಿ ಪಲ್ಯ, ಬದನೆಕಾಯಿ ಹುರಿದುಹಾಕಿದ ಕೂಟು, ಗೆಣಸು ಪಲ್ಯ. ಯಜ ಮಾನರೂ ಊರಲಿಲ್ಲ. ಮಾನಾಮದುರೆಗೆ ಹೋಗಿದ್ದರು—ಸೋದರಳಿಯನ ಮನೆಗೆ. ಆಗ ಇಷ್ಟೆಲ್ಲ ಮಾಡಿ ತೆಗೆದುಕೊಂಡರು. ಹಲಸಿನ ಹಣ್ಣಿನ ಒಂದು ತೊಳೆಯೂ ಸಹ ನನ್ನ ಪಾಲಿಗೆ ಇಲ್ಲ. ಹಸುವಿನ ಹಾಗೆ ಸುರಿದುಕೊಂಡು, ನನ್ನ ಕಿವಿಯಲ್ಲಿ ಬೀಳುವ ಹಾಗೆ, "ಅಡವಾಗಿ ಕಾಯಿಪಲ್ಯ ಕೂಡ ಸಿಕ್ಕಲಿಲ್ಲ" ಎಂದು ಹೇಳುತ್ತ ಬೇಳೆಯ ಚಟ್ನಿಯನ್ನೂ. ಅನ್ನವನ್ನೂ ಒಳ್ಳೆಯದಿನ, ತಿಂಗ ಳಾರಂಭವೆಂದು ಕೂಡ ಎಣಿಸದೆ ಹಾಕಿದಳಲ್ಲ! ಅದೆಲ್ಲ ಮರೆತುಹೋಗು ತ್ತೇನೆಂದು ತಿಳಿದೆಯಾ? ಅದೂ ಮನಸ್ಸಿನಲ್ಲಿ ಒಂದು ಪಕ್ಕಕ್ಕೆ ಇರುತ್ತದೆ" ಎಂದು ಹೇಳುತ್ತ ನೆಟ್ಟಗೆ ನಿಂತಾಗ, ಆ ಹೊತ್ತಿಗೆ ಪೊನ್ನಂಬಾಳ್ ಎಂಬ ಹೆಂಗಸು ಕೈಯ್ಯಲ್ಲಿ ಬಿಂದಿಗೆಯನ್ನು ಹಿಡಿದುಕೊಂಡು ಎದುರಿಗೆ ಬಂದಳು.

ಅವಳು ಮುತ್ತುಸ್ವಾಮಿ ಅಯ್ಯರವರ ತಮ್ಮ ಸುಬ್ರಹ್ಮಣ್ಯಅಯ್ಯರವರ ಹೆಂಡತಿ. ತಂಜಾವೂರಿನ ಹುಡುಗಿ. ಈ ಭೂಮಂಡಲದಲ್ಲಿ ಅವಳಿಗೆ ಸರಿಯಾದ ವರು ಯಾರೂ ಇಲ್ಲ. ಎಲ್ಲರನ್ನೂ ಲಕ್ಷ್ಯ ಮಾಡದೆ ಹೀಯಾಳಿಸಿ ಮಾತಾಡು ವಳು. ಪಾಪ! ಸುಬ್ರಹ್ಮಣ್ಯಅಯ್ಯರವರನ್ನು ಬುಗುರಿಯಂತೆ ಆಡಿಸುತ್ತಿ ರುವಳು.

(ಈ ಪತಿವ್ರತಾ ಶಿರೋಮಣಿಯಲ್ಲಿ ಅವರು ನಿಜವಾಗಿಯೂ ಬಹಳ ಭಯಗೊಂಡವರಾಗಿದ್ದಾಗ್ಯೂ ಹೊರಕ್ಕೆ ಮಾತ್ರ ಹೆಂಡತಿ ತನ್ನ ಮಾತನ್ನು ಮೀರುವುದಿಲ್ಲವೆಂದು ಆಗಾಗ್ಗೆ ಹೆಮ್ಮೆಯಿಂದ ಹೇಳಿಕೊಳ್ಳುವರು. ಆದರೂ ಈ

ಹೇಗಸು ಅವರಿಗೆ ಕೊಡುವ ಕಷ್ಟಕ್ಕೆ ಅವರು ಪ್ರಾಣ ಬಿಡದೆ ಪೇಚಾಡಿಕೊಂಡಿದ್ದಾರೆಂಬ ಸಂಗತಿ ಶಿರುಕುಳ ಊರಿಗೆ ಊರೇ ತಿಳಿದಿರುವ ವಿಷಯ. ಅವರಿಗೆ ರೋಷ ಬರುವಂತೆ ಅವರನ್ನು ಬೈಯ್ಯಬೇಕಾದರೆ "ಹೆಂಡತಿಯ ತಾಯಿ ದೊಡ್ಡ ತಾಯಿ" ಎಂದು ಹೇಳಿದರಾಯಿತು. ಅವರ ಮುಖ ಕೆಂಪೇರಿ ಕಣ್ಣಿನಲ್ಲಿ ರಕ್ತ ಸೋರಿಬಿಡುವುದು.

ಪೊನ್ನಮ್ಮಾಳ್ ಬಹಳ ಅಲಂಕಾರ ಪ್ರಿಯೆ. ಅವಳು ನಡೆದುಹೋದಾಗ ಲೋಕವೆಲ್ಲವೂ ತನ್ನ ಚೆಲುವನ್ನೇ ಎವೆಯಿಕ್ಕದೆ ಚಿತ್ರದಂತೆ ಅಲುಗಾಡದೆ ಬಿರಿಬಿರಿ ನೋಡುತ್ತಿರುವುದೆಂದು ಅವಳ ಎಣಿಕೆ. ಹೋಗುತ್ತಿರುವಾಗಲೆಲ್ಲ ನಾನು ಹಂಸಗತಿಯಿಂದ ನಡೆಯುತ್ತಿದ್ದೇನೆ ಎಂಬ ಭಾವನೆ ತಟ್ಟನೆ ಬಂದುಬಿಡುವುದು. ಕೂಡಲೆ ಅವಳಿಗೆ ಗರ್ವವೂ ಲಜ್ಜೆಯೂ ಏಕಕಾಲದಲ್ಲಿ ಉಂಟಾಗಿ, ಕಾಲು ಬೆಂಕಿ ಕಿಡಿಗಳ ಮೇಲೆ ಹಾದುಹೋಗುವಂತೆ ಕೆಳಗೆ ನೋಡದೆ, ವಿಕಾರವಾದ ನಡಿಗೆಯಿಂದ ಅವಳು ಏನಾದರೂ ನೆಪವನ್ನು ತೆಗೆದು ಅಲ್ಲಲ್ಲಿ ನಿಂತೋ, ಅಥವಾ ವಯ್ಯಾರದಿಂದ ಓಡಾಡುತ್ತಲೋ ಮನೆಗೆ ಹೋದುದನ್ನು ಅನೇಕರು ನೋಡಿದ್ದಾರೆ.

ಈ ಪರದೇವತೆ ನೀರಿನಲ್ಲಿ ಇಳಿದ ಕೂಡಲೆ ಮೇಲೆ ಹೇಳಿದ ಪ್ರಸಂಗವನ್ನು ಮಾಡುತ್ತಿದ್ದಾಗ ಒಬ್ಬಾಕೆ ಅವಳನ್ನು ನೋಡಿ "ಪೊನ್ನಮ್ಮಾ! ಏನು ಇಷ್ಟು ತಡ! ಮದುವೆಯ ಸಂಭ್ರಮವೊ? ಅದು ಯಾರೇ ನಿಮ್ಮ ಭಾವನ ಮನೆಯ ಜಗುಲಿಯ ಮೇಲೆ ಇಬ್ಬರು ಮುದುಕರು ಕುಳಿತಿರುವರಲ್ಲಾ? ಅವರು ಯಾರು?" ಎಂದು ಕೇಳಿದಳು.

ಪೊನ್ನಮ್ಮಾಳ್ ಬಹಳ ಉದಾಸೀನತೆಯಿಂದ "ಯಾರೋ! ಬಾವಿಯ ಕಪ್ಪೆಗೆ ನಾಡಿನ ಗೋಜೇಕೆ? ಲೋಕದಲ್ಲಿ ಅವರವರ ಪಾಡನ್ನು ಅವರವರು ಗಮನಿಸಿದರೆ ಸಾಲದೆ!" ಎಂದು ಬಹಳ ಅಚ್ಚುಕಟ್ಟಾದ ಮಾತಿನ ವರಸೆಯಲ್ಲಿ ಉತ್ತರ ಕೊಟ್ಟಳು.

ಪೊನ್ನಮ್ಮಾಳ್ ನಿಜವಾಗಿಯೂ ಕಮಲಾಂಬಾಳ್ ಓದಿರುವುದರಲ್ಲಿ ಅರ್ಧ ಭಾಗವೂ ಸಹ ಓದದವಳಾಗಿದ್ದರೂ ತನ್ನಲ್ಲಿದ್ದ ಅಲ್ಪ ಸ್ವಲ್ಪ ಸರಕನ್ನು ಇಟ್ಟುಕೊಂಡು ಎಲ್ಲವನ್ನು ಓದಿದವಳಂತೆ ಭಾವನೆ ಉಂಟುಮಾಡು

ವಳು. ಕಮಲಾಂಬಾಳ್ ಬಹಳ ಸೊಗಸಾಗಿ ಮಾತನಾಡುತ್ತಾಳೆ ಎಂಬ ವಿಷಯದಲ್ಲಿ ಅವಳಿಗೆ ಅಡಗಿಸಲಾರದಷ್ಟು ಮತ್ಸರ. "ನವಿಲಾಡುವುದನ್ನು ಕಂಡ ಬಾತು ಪುಕ್ಕ ಕೆದರಿಕೊಂಡು ತಾನೂ ಅದರಂತೆಯೇ ಎಂದು ಭಾವಿಸಿ ಆಡಿದಂತೆ ಕಮಲಾಂಬಾಳನ್ನು ನೋಡಿ ತಾನೂ ಪ್ರೌಢವಾದ ಭಾಷಾ ಶೈಲಿಯನ್ನು ಪ್ರಯೋಗ ಮಾಡಲು ಆರಂಭಿಸುವಳು. ಬ್ರಾಹ್ಮಣರು ತಾವು ಆಡುವ ಭಾಷೆಯಲ್ಲಿ ಸಂಸ್ಕೃತ ಪದಗಳನ್ನು ಮಧ್ಯೆ ಮಧ್ಯೆ ಸೇರಿಸಿ ಮರದ ಎಲೆಗಳ ಮಧ್ಯೆ ಹೂಗಳು ಸೇರಿಕೊಂಡಿರುವಂತೆ ಪ್ರಯೋಗ ಮಾಡುವರು. ಇದನ್ನು ಕಂಡ ಕುರುಬನೊಬ್ಬನು ತಾನೂ ಅವರಂತೆ ಮಾತನಾಡಬೇಕೆಂದು ಬಯಸಿ ಮನೆಗೆ ಹೋಗಿ ತಾಯಿಯನ್ನು ಕರೆದು "ಅಮ್ಮಾ! ಅಷ್ಟ (ಆಡು) ಮರಿಗಳು ಬಷ್ಟೆ (ಬಟ್ಟೆ) ಯನ್ನು ತಿನ್ನುತ್ತವೆ! ಓಂಡ್ರಿಸು (ಓಡಿಸು)!" ಎಂದನಂತೆ. ಹಾಗೆಯೇ ಪೊನ್ನಮ್ಮಾಳ್ ಕೂಡ ವ್ಯಾಕರಣಬದ್ಧವಾಗಿ ಅಲಂಕಾರಯುತವಾಗಿ ಮಾತನಾಡುವ ಕೆಲವು ಸಂದರ್ಭಗಳಲ್ಲಿ ಸಂವಾದ ಬಹಳ ಪ್ರೌಢವಾಗಿ ಬಿಡುವುದು. ಆದರೂ ಯಾವ ವಿದ್ಯೆಯೂ ಇಲ್ಲದ ಆ ಊರಿನ ಹೆಂಗಸರಿಗೆ ಕಮಲಾಂಬಾಳ್‌ಗಿಂತಲೂ ಅವಳೇ ಬಹಳ ಓದಿದವಳೆಂಬ ಭಾವನೆ.

ಅವಳ ಉತ್ತರವನ್ನು ಕೇಳಿದ ಸುಬ್ಬು ಎನ್ನುವವಳು, "ನಿನಗೆ ತಿಳಿಯದೇ? ಹೇಳದೆ ಹೋದರೂ ಊಹಿಸಿಕೊಳ್ಳಬಾರದೇ—ಏನು ಹಾಳೊ ಸುಡುಗಾಡು—ಮನೆಗೆ ಹೋದರೆ ಗೊತ್ತಾಗುತ್ತದೆ." ಎಂದು ಕೋಪದಿಂದ ಹೇಳಿದಳು.

ಪೊನ್ನಮ್ಮಾಳ್:- "ಏನ್ರೀ — ಅವರು ಮದುವೆಯ ಮಾತನಾಡುತ್ತಿರುವರು. ತಾವು 'ಹಾಳು, ಸುಡಗಾಡು' ಎನ್ನುತ್ತೀರಲ್ಲಾ !"

ಸುಬ್ಬು:- "ನಾನು 'ಹಾಳು, ಸುಡುಗಾಡು' ಎಂದು ಹೇಳಿದೆನೇ? ಚೆನ್ನಾಗಿದೆಯಮ್ಮಾ! ಕಲಹ ಮಾಡುತ್ತೀಯೆಂದು ತೋರುತ್ತೆ !"

ಪೊನ್ನಮ್ಮಾಳ್:- "ಏನು ತಮಗೆ ಇಷ್ಟು ಕೋಪ ? ನಾನು ಹೊತ್ತು ಹೋಗಲು ಏನೋ ಪರಿಹಾಸ್ಯವಾಗಿ ಹೇಳಿದೆ. ಅವರ ಮನೆಯಲ್ಲಿ ಮದುವೆಯೆಂದು ತಮಗೆ ಜ್ಯೋಷ್ಯ (ಜ್ಯೋತಿಷ) ಗೊತ್ತೋ? ಅವರು ಮಧುರೆ

ಯುವರಂತೆ. ಭಾವನವರ ಹೆಣ್ಣನ್ನು ನಿಶ್ಚಿಶ್ರಾದ್ಧ* ಮಾಡಲು ಬಂದಿರುವರಂತೆ."

ಸುಬ್ಬುವಿಗೆ ಅವರು ಇಂತಹವರೆಂದು ಗೊತ್ತಿತ್ತು. ಇದ್ದರೂ ಪೊನ್ನಮ್ಮಾಳನ್ನು ಕೆರಳಿಸಿದರೆ ಕಮಲಾಂಬಾಳಿಗೂ ಅವಳಿಗೂ ಕಲಹವನ್ನುಂಟುಮಾಡಿ ತಮಾಷೆ ನೋಡೋಣವೆಂದು ಎಣಿಸಿ ಮತ್ತೆ ಅವಳು, "ಓಹೋ! ಓಹೋ! ನಿಮ್ಮ ಮಾವಂದಿರು ಬರುವವರಿದ್ದಾರೆಂದು ಹೇಳಿದರಲ್ಲಾ, ಅವರು ಬಂದಿದ್ದಾರೆಯೆ? ನಾನು ಚೆನ್ನಾಗಿ ನೋಡಲಿಲ್ಲ. ನಾನೇನು ಅವರ ಮನೆಗಳಿಗೆ ಹೋಗಿ ಬರುವುದೂ ಅಷ್ಟರಲ್ಲಿಯೇ ಇದೆ." ಎಂದು ಹೇಳಲು, ಪೊನ್ನಮ್ಮಾಳ್— "ಅವರೇ ಎಂದು ಕಾಣುತ್ತದೆ." ಎಂದು ನೀರಸ ಧ್ವನಿಯಲ್ಲಿ ಹೇಳಿ, ಮೆತ್ತಗೆ ಲಟ್ಟಿಗೆ ಮುರಿದು ಮೌನ ತಾಳಿದಳು.

ಸುಬ್ಬು ಇದೇ ಸಮಯವೆಂದು ತಿಳಿದು, "ಏನು? 'ಕಾಣುತ್ತದೆ' ಎನ್ನುತ್ತೀಯ. ನಿಮ್ಮ ಮಾವಂದಿರು ನಿಮ್ಮ ಮನೆಗೆ ಬಂದದ್ದಿಲ್ಲವೆ? ನಿನಗೇನು ಅವರು ಗೊತ್ತಿಲ್ಲವೆ? ಬಹಳ ಒಳ್ಳೆಯ ಬ್ರಾಹ್ಮಣ."

ಪೊನ್ನಮ್ಮಾಳ್:- "ನಮ್ಮ ಮನೆಗೆ ಬರಬೇಕೆಂದು ಯಾವ ಶಾಸ್ತ್ರದಲ್ಲಿ ಹೇಳಿದೆ? ಲೋಕದಲ್ಲಿ ಒಳ್ಳೆಯವರಿಗೇನು ಕ್ಷಾಮವೇ? ಅದರಲ್ಲಿಯೂ ಈ ಸಂದರ್ಭದಲ್ಲಿ ಬರಲಾರರು. ಮನುಷ್ಯರಲ್ಲಿರುವ ಒಳ್ಳೆಯ ಬುದ್ಧಿ ಇಲ್ಲದಿದ್ದರೂ ಅವರಲ್ಲಿರುವ ಸಂಕೋಚ ಸುಲಭದಲ್ಲಿ ಹೋಗುತ್ತೇನೆನ್ನುತ್ತದೆಯೆ?"

ಸುಬ್ಬು:- "ಅದೇನು? ಹಾಗೇನು ಬಂದಿದೆ! ಓಹೋ! ಅವರೇನೋ ಲಕ್ಷ್ಮಿಯನ್ನು ಮದುರೆಯಲ್ಲಿ ಕೊಡಲು ಕಾರಣ? ಏನೇ! ಹೀಗೆ ತಾನೇ ಮಾಡಬಹುದೆ? ನೀನೂ, ನಿನ್ನ ವಾರಿಗಿತ್ತಿಯೂ ಇರುವ ಅನ್ಯೋನ್ಯಕ್ಕೆ ಶಿವನೇ ಎಂದು ನಿನ್ನ ತಮ್ಮನ ಮಗನಿಗೆ ಕೊಡಬಹುದಾಗಿತ್ತು. ಅವರಿಗೇನು ಆಸ್ತಿ ಇಲ್ಲವೆ, ಗೌರವವಿಲ್ಲವೆ?"

---

* "ನಿಶ್ಚಿತಾರ್ಥ" ಎಂಬುದು ಸರಿಯಾದ ಶಬ್ದ. ಪೊನ್ನಮ್ಮಾಳ್ ಸಂಸ್ಕೃತ ಮಿಶ್ರಿತ ಭಾಷೆಯನ್ನಾಡುವ ಹೆಮ್ಮೆಯಲ್ಲಿ ಪದಗಳ ಬೇದ ತಿಳಿಯದೆ ಈರೀತಿ ಬದಲಾಯಿಸಿರಬಹುದು. ಅಥವಾ ವಿಷಮ ರೀತಿಯಲ್ಲಿ 'ಶ್ರಾದ್ಧ'ವೆಂದು ಅಮಂಗಲವಾಗಿ ಹೇಳಿರಲೂಬಹುದು.

ಪೊನ್ನಮ್ಮಾಳ್:- "ಅವರಿಗೆ ಯಾವುದು ಆಸ್ತಿ, ಗೌರವ? ಇವರ ಮನೆಯ ಬಾಗಿಲಲ್ಲಿ ತಾನೆ ರಾತ್ರಿ ಹಗಲೂ ಅನ್ನಕ್ಕಾಗಿ ಕಾದುಬಿದ್ದಿದ್ದಾರೆ. ಅವರ ಮನೆಗಳಲ್ಲೆಲ್ಲಾ ಇವರು ಬೆಳಗಿಸಿದ ದೀಪವೇ ಪ್ರಕಾಶ ಕೊಡುತ್ತ ದೆಂದು ಉತ್ತರ ಭಾಗದಲ್ಲೆಲ್ಲ ಪ್ರಸ್ತಾಪ ಉಂಟು. ನಾನೊಬ್ಬಳು ಇಲ್ಲಿ ಬಂದು ಸಿಕ್ಕಿಕೊಂಡುದು ಸಾಲದೆ? ಈ ಕುಗ್ರಾಮದಲ್ಲಿ ಸಂಬಂಧ ಮಾಡದಿದ್ದರೆ ಊರುಗಳಲ್ಲಿ ಅವರಿಗೂ ಹೆಣ್ಣುಗಳಿಲ್ಲ. ಪಾಪ! ಮಗು — ಚೆಲುವಿನಲ್ಲಿ ಊರ್ವಶಿಯಂತಿರುವ ಹೆಣ್ಣು!"

ಈವರೆಗೆ ನಡೆದ ಸಂಭಾಷಣೆ ಎಲ್ಲವನ್ನೂ ಕಿವಿಗೊಟ್ಟು ಗಮನಿಸುತ್ತಿದ್ದ ನಾಗು ಎಂಬಾಕೆ "ಹಣವಂತೆ ಹಣ! ಈ ಊರಿಗೆ ಮಾತ್ರ ಅಪರೂಪ. 'ಆಲೆಯಾಡದ ಊರಲ್ಲಿ ಇಪ್ಪೆ ಹೂ ಸಕ್ಕರೆ' ಎಂಬಂತೆ ಪೊನ್ನಮ್ಮಾಳ್ ಸೋದರಳಿಯನಿಗೆ ಕೊಟ್ಟರೆ ಏನಂತೆ? ಅಬ್ಬಬ್ಬಾ—ಇಲ್ಲ—ಅವರೇ ಇಟ್ಟು ಕೊಳ್ಳಲಿ. (ಪೊನ್ನಮ್ಮಾಳನ್ನು ನೋಡಿ) ನೀನೇ ಬರೆದು ಹಾಕಬಾರದೆ? ಈ ಊರಿನ ಸಂಬಂಧ ಬೇಡವೆಂದು, ನಿನ್ನೊಡಹುಟ್ಟಿದವನಿಗೆ?" ಎಂದು ಹೇಳಿದಳು. ಆದಕ್ಕೆ ಪೊನ್ನಮ್ಮಾಳ್ "ಛೀ, ಇಷ್ಟು ದಿನಗಳು ತಡೆದೆ? ಅಂದೇ ಟೆಲಗರಾಫ್ ಕೊಟ್ಟುಬಿಟ್ಟೆ." ಎಂದಳು.

ಸುಬ್ಬು:- (ತನ್ನ ಮನಸ್ಸಿನಲ್ಲಿ "ಎಷ್ಟು ಗರ್ವ! ತಲೆ ಕತ್ತಿನ ಮೇಲೆ ನಿಲ್ಲುತ್ತಿಲ್ಲ." ಎಂದು ಹೇಳಿಕೊಳ್ಳುತ್ತ) "ಮುತ್ತುಸ್ವಾಮಿ ನಿಮ್ಮ ವಿಷಯದಲ್ಲಿ ಇಟ್ಟಿರುವ ಅಭಿಮಾನಕ್ಕೆ ಜಾತಕ ಹೊಂದಲಿಲ್ಲವಂತೆ. ಇಲ್ಲದಿದ್ದರೆ ನಿನ್ನ ಸೋದರಳಿಯನಿಗೇ ಹೆಣ್ಣನ್ನು ಕೊಡುತ್ತಿದ್ದ."

ನಾಗು:- "ಹೌದು, ಹೌದು! ಜಾತಕ ಒಂದು ನೆಪ. ಶಕುನ ನೋಡಿ ಎಷ್ಟು ಕಡೆಗಳಲ್ಲಿ ನಡೆಯುವುದಿಲ್ಲ! ಏನೋ 'ವೈದ್ಯನ ಹೆಂಡತಿಗೆ ಸಾವಿಲ್ಲ— ಜೋತಿಷನ ಹೆಂಡತಿಗೆ ವೈಧವ್ಯವಿಲ್ಲ.' ಎಂದು ಹೇಳಿದ ಹಾಗೆ ಇದೆ. ಮನ ಒಪ್ಪಿದ್ದು ಮಾಂಗಲ್ಯ. ಮನಸ್ಸಿನ ಹೊಂದಿಕೆಯೊಂದಿದ್ದರೆ ಎಲ್ಲಾ ಹೊಂದಿಕೆ ಗಳೂ ಇರುತ್ತವೆ. ನಿನ್ನೆ ಮೀನಾಕ್ಷಿಸುಂದರಂ ಮಗಳನ್ನು ಶಂಕರಪಿಳ್ಳೆಗೆ ಕೊಟ್ಟರಲ್ಲಾ — ಯಾವ ಜಾತಕವನ್ನು ನೋಡಿದರಂತೆ? ಸಂಭ್ರಮವಾಗಿ ಮದುವೆ ಆಗಿಲ್ಲವೆ? ಅವರಿಗೇನು ಕಡಮೆ? ಕುಂಟು ಕತ್ತೆಗೆ ಜಾರಿದ್ದೇ ನೆಪ."

ಪೊನ್ನಮ್ಮಾಳ್:- "ಬಿಳಿಯ ಜನಗಳಲ್ಲಿ ಜಾತಕ ನೋಡುತ್ತಾರೆಯೆ ?"

ಸುಬ್ಬು ಮತ್ತು ನಾಗು:- "ಆಂ! ಅವರೂ ಜಾತಕವನ್ನು ನೋಡಿಯೇ ನೋಡುತ್ತಾರೆ."

ಪೊನ್ನಮ್ಮಾಳ್:- (ಇವರ ಮೌಢ್ಯವನ್ನು ನೋಡಿ ತನ್ನೊಳಗೆ ತಾನು ನಗುತ್ತ) "ಅವರು ಜೋಷ್ಯವನ್ನೇ ನಂಬುವುದಿಲ್ಲ."

ನಾಗು:- "ಸೋಸ್ಯ ಅವರಿಗೆ ಗೊತ್ತಿಲ್ಲವೆ ?"

ಪೊನ್ನಮ್ಮಾಳ್:- "ಸೋಸ್ಯವೇ" ಎಂದು ಬಿದ್ದು ಬಿದ್ದು ನಗುತ್ತಾ- "ಜೋಷ್ಯಂ" ('ಜ್ಯೋತಿಷ್ಯ'ವೆಂಬುದು ಸರಿಯಾದ ಪದ) ಎಂದು ಹೇಳಿರಿ. ನೀವು ಮಾತಾಡುವುದು ಶೂದ್ರರ ಮಾತಾಗಿದೆಯಲ್ಲ !"

ನಾಗು ಸ್ವಲ್ಪ ಅಸಮಾಧಾನದೊಡನೆ "ನಾವು ಓದದವರು. ಯಾವುದಕ್ಕೆಸೇರುತ್ತೇವೆ" ಎಂದಳು.

ಕೂಡಲೆ ಸುಬ್ಬು ಪೊನ್ನಮ್ಮಾಳನ್ನು ನೋಡಿ "ಅದಿರಲಿ. ಈಗಲಾದರೂ ಏನು. ಒಂದು ಶಕುನವನ್ನು ನೋಡಿ ನಿನ್ನ ಸೋದರಳಿಯನಿಗೇ ಮಾಡಿಬಿಡಬಹುದಲ್ಲ !"

ಪೊನ್ನಮ್ಮಾಳ್:- "ಊರಲ್ಲಿರುವ ದೇವತೆಗಳಿಗೆಲ್ಲ ನಮಸ್ಕಾರ. ಇನ್ನು ಅದನ್ನು ನೆನಸುವುದೂ ಬೇಡ. ಸಾವಿರ ಹೊನ್ನು ಕೊಟ್ಟು ಹೆಣ್ಣು ಕಟ್ಟಿದರೂ ಬೇಡ. ಹಾಗೆಲ್ಲ ನಾಚಿಕೆಗೆಟ್ಟ ಜನವಲ್ಲ ನಾವು."

ಸುಬ್ಬು:- "ಆದಕ್ಕೇನಂತೆ. ನಿಮ್ಮ ಯಜಮಾನರ ಹತ್ತಿರ ಹೇಳಿ ಏರ್ಪಾಡು ಮಾಡಿದರೂ ಮಾಡಬಹುದು."

ಪೊನ್ನಮ್ಮಾಳ್:- "ಅಯ್ಯೋ! ಅವರಿಂದ ಏನಾದೀತು. ನಾನು ಹೇಳಿದ್ದನ್ನು ಅವರು ಕೇಳುವುದು, ತಮ್ಮನ ಮಾತನ್ನು ಅಣ್ಣನಾದವನು ಕೇಳುವುದು —ಏನೋ ಹೇಳುತ್ತಾರಲ್ಲಾ, ಹಾಗಿದೆ. ಇವರು ಯಾರೊ ಅವರು ಯಾರೊ-"

ನಾಗು:- "ಅದೇನು ಹಾಗೆ ಹೇಳುತ್ತೀಯ, ಮುತ್ತುಸ್ವಾಮಿ ಹಾಗೆ ಎಣಿಸುವವನಲ್ಲ. ನಿನ್ನ ಮಗ ಸುಂದರನನ್ನು ಕಣ್ಣಲ್ಲಿ ಕಣ್ಣಿಟ್ಟು ಬೆಳಸುತ್ತಿಲ್ಲವೆ? ಅವನ ಮೇಲೆ ಗಾಳಿ ಬೀಸಿದರೂ ಸಹಿಸಲಾರ !"

ಪೊನ್ನಮ್ಮಾಳ್: "ಅದಕ್ಕೇನಂತೆ? ಅವರಿಗೆ ಮಗ ಬೇಕಾಗಿದ್ದಾನೆ. ದೇವರು ಕಣ್ಣುಬಿಟ್ಟು ನೋಡಲಿಲ್ಲವಲ್ಲ! ಅದಕ್ಕೆ ಅವರನ್ನೇಕೆ ಹೊಗಳಬೇಕು! ಅದಲ್ಲದೆ ನನ್ನ ಮಗುವಿಗೆ ಬಹಳ ಸಲಿಗೆ ಮಾಡಿ, ತಾಯಿಗೆ ಮಗನಾಗಿರದಂತೆ ಗೂಳಿಯ ಹಾಗೆ ಬೆಳೆಸಿದ್ದಾರೆ." ಎಂದು ಸಿಡುಕಿನಿಂದ ಹೇಳಿ 'ಗಂಡು-ವಿಧವೆ' ಎಂಬ ಪದವನ್ನು ಮತ್ತೆ ಮೆಲಕುಹಾಕಿದಳು. ಇದನ್ನು ಕೇಳಿ ಸುಬ್ಬುವಿಗೆ ಆದ ಸಂತೋಷಕ್ಕೆ ಮೇರೆ ಇಲ್ಲದಾಯಿತು. "ಇಂತಹ ಮಾತುಗಳಿಗಾಗಿ ತಾನೆ ಇಷ್ಟುಹೊತ್ತು ಕಾದಿದ್ದೆ." ಎಂದುಕೊಳ್ಳುತ್ತ ತನ್ನ ಬಟ್ಟೆಗಳನ್ನು ಗಂಟು ಕಟ್ಟಿಕೊಂಡು ಮನೆಗೆ ಹೊರಟಳು.

ಮನೆಯಲ್ಲಿ ಕೊಡವನ್ನು ಇಳಿಸಿದ್ದೇ ತಡ, ಒದ್ದೆಯ ಸೀರೆಯನ್ನುಟ್ಟು ಕೊಂಡೇ ಬೆರಣಿಯನ್ನು ಕೈಯ್ಯಲ್ಲಿ ಹಿಡಿದುಕೊಂಡು ಕಮಲಾಂಬಾಳ್ ಮನೆಯ ಕಡೆಗೆ ಒಲೆ ಹೊತ್ತಿಸಲು ಬೆಂಕಿಗಾಗಿ ಹೊರಟಳು. ನಿಜವಾಗಿ ಅವಳ ಮನೆಯಲ್ಲಿಯೇ ಬೆಂಕಿ ಇತ್ತು. ಆದರೆ ಪೊನ್ನಮ್ಮಾಳ್ ಹೇಳಿದ ಮಾತುಗಳನ್ನು ಕಮಲಾಂಬಾಳ್ ಬಳಿ ಒಂದಕ್ಕೆ ಹತ್ತಾಗಿ ಹೇಳುವುದು ಬಹಳ ಅವಶ್ಯ ವಾಗಿತ್ತು.

## ೪. ಸಭೆಯ ಸತ್ಕಾರ್ಯ

ಸುಬ್ಬು ಅಷ್ಟು ಕೆಟ್ಟವಳಲ್ಲ. ಸ್ವಲ್ಪಮಟ್ಟಿಗೆ ಒಳ್ಳೆಯ ಗುಣವುಳ್ಳವಳು. ಹಳ್ಳಿಯ ಹುಡುಗಿಯರು ಕೆಲವರು ಅತ್ತೆಯ ಮನೆಗೆ ಬಂದ ದಿನದಿಂದಲೇ ಅತ್ತೆಯೊಡನೆ ಕಲಹಕ್ಕಿಳಿಯುತ್ತಾರೆ. ಇವಳು ಹಾಗಲ್ಲ. ಶುಕ್ರವಾರ, ಯುಗಾದಿ ಮುಂತಾದ ದಿನಗಳಲ್ಲಿ ತನ್ನ ಅತ್ತೆ ಏನು ಹೇಳಿದರೂ ಅವಳೊಡನೆ ವ್ಯಾಜ್ಯಕ್ಕೆ ಹೋಗುವುದಿಲ್ಲ. ಆದರೆ ಮರುದಿನ ಅಸಲು ಬಡ್ಡಿ ಸಹಿತ ವ್ಯಾಜ್ಯವಾಗುವುದು. ಕೆಲವು ಸ್ತ್ರೀಯರಂತೆ ಕುಟುಂಬದ ವ್ಯಾಜ್ಯಗಳಲ್ಲಿ ಅವಳು ಇಪ್ಪತ್ತು ವರ್ಷಗಳ ತಪ್ಪುಗಳ ಲೆಕ್ಕವನ್ನೆತ್ತಿ ಆಡುವುದಿಲ್ಲ. ಹದಿನೈದು ವರ್ಷಕ್ಕೆ ಹಿಂದೆ ಒಂದು ದಿನವನ್ನು ಸೂಚಿಸಿ ಅಂದು ನಿನಗೂ ನಿನ್ನ ಅತ್ತೆಗೂ ಏನು ನಡೆಯಿತು ಎಂದು ಕೇಳಿದರೆ ಅವಳು ಖಚಿತವಾಗಿ

ಹೇಳಲಾರಳು. ಆದರೆ ಹದಿನೈದು ವರ್ಷಕ್ಕೆ ಈಚೆಗೆ ಆದ ವಿಷಯವಾದರೆ ಸಮಸ್ತ ವಿಷಯಗಳೂ ಅವಳ ಮನಸ್ಸಿನಲ್ಲಿ ಅಚ್ಚಳಿಯದೆ ನಿಂತಿರುತ್ತವೆ. ಆದುದರಿಂದ ಹದಿನಾಲ್ಕು ವರ್ಷಕ್ಕೆ ಹಿಂದೆ ಅವಳ ಅತ್ತೆ ಅವಳನ್ನು 'ಸಾಹಸಿ' ಎಂದು ಬೈದ ದಿನ ನಡೆದ ವೃತ್ತಾಂತವನ್ನು ಹೇಳೆಂದು ಕೇಳಿದರೆ ಅಂದು ಇಂತಹ ಪಲ್ಯ, ಇಂತಹ ಕೂಟು, ಮಜ್ಜಿಗೆ ಹುಳಿಯಾಗಿತ್ತೋ ಇಲ್ಲವೆ, ಇಂತಹ ಚಟ್ಟಣಿ, ಯಾರ ಅಡಿಗೆ, ಅದರಲ್ಲಿ ಏನು ಲೋಪ ಎಂಬುದೆಲ್ಲವನ್ನೂ ಸಾಂಗೋ ಸಾಂಗವಾಗಿ ಅದರ ಮೇಲೆ ಅಪೀಲಿಲ್ಲದಂತೆ ಹೇಳುವ ಸಾಮರ್ಥ್ಯ ಅವಳಲ್ಲಿತ್ತು. ಇಂಗ್ಲೀಷು ಓದುವವರಿಗೆ ಸುಬ್ಬಮ್ಮಾಳಿಗಿದ್ದ ಜ್ಞಾಪಕ ಶಕ್ತಿಯಲ್ಲಿ ಹತ್ತರಲ್ಲಿ ಒಂದು ಪಾಲಿದ್ದರೆ ಎಂ. ಎ. ಎಂ. ಎಲ್. ಪರೀಕ್ಷೆಗಳಲ್ಲಿ ನಿಶ್ಚಯವಾಗಿ ತೇರ್ಗಡೆಯಾಗಿಬಿಡಬಹುದು. ಸುಬ್ಬಮ್ಮಾಳಿಗೆ ಯಾರ ಮನೆಯಲ್ಲಿಯಾದರೂ ಕಲಹವುಂಟಾದರೆ ಸಾಕು, ತನಗೆ ಊಟ ಕೂಡ ಬೇಡ!

ಹಗಲು ಹನ್ನೆರಡು ಗಂಟೆಗೆ ಅವಳ ಮನೆಯಲ್ಲಿ ಒಂದು 'ಮಹಿಳಾ ಕಾಂಗ್ರೆಸ್' ಮಹಾಸಭೆ ಸೇರುವುದು. ಅದು ಸಂಜೆ ೬ ಗಂಟೆಗೆ ಮುಕ್ತಾಯ ಗೊಂಡು ಮತ್ತೆ ರಾತ್ರಿ ೮ ಗಂಟೆಗೆ ಸೇರುವುದು. ಅದಕ್ಕೆ ರಜಾದಿನಗಳೇ ಇಲ್ಲ. ಆ ಮಹಾಸಭೆಗೆ ಸುಬ್ಬಮ್ಮಾಳ್ ಅವರೇ ಗೌರವಯುತರಾದ ಅಧ್ಯಕ್ಷಿಣಿಯರು. ಆಕೆಗೆ ಆ ಪಟ್ಟವನ್ನು ಯಾರೂ ಬಹಿರಂಗವಾಗಿ ಕಟ್ಟಿದುದಿಲ್ಲ. ತಾನೇ ಆ ಪೀಠವನ್ನು ಅಲಂಕಿಸಿದ್ದಾಳೆ. ಆ ಸ್ಥಾನಕ್ಕೆ ಇರುವ ಗೌರವವನ್ನು ಎಲ್ಲರೂ ತುಟಿಪಿಟಕ್ಕೆನ್ನದೆ ಆಕೆಗೆ ಸಲ್ಲಿಸುತ್ತ ಬಂದಿದ್ದಾರೆ. ಆ ಮಹಾ ಸಭೆಗೆ ಯಾವುದಾದರೂ 'ಸಮಾಚಾರ ಪತ್ರಿಕೆ' ಉಂಟೋ ಎಂದು ಕುತೂಹಲ ದಿಂದ ಕೆಲವರು ಪ್ರಶ್ನೆ ಮಾಡಬಹುದು. ಆದರೆ ಮುದ್ರಿಸಲಾಗದ ಅನೇಕ ಸಂಗತಿಗಳೂ, ಮುದ್ರಿಸಬಾರದಂತಹ ಅನೇಕ ರಹಸ್ಯಗಳೂ ಆ ಸಭೆಯಲ್ಲಿ ಮುಖ್ಯವಾಗಿ ನಡೆಯುವುದರಿಂದ ಅದಕ್ಕೆ ಸಮಾಚಾರ ಪತ್ರಿಕೆ ಯಾವುದೂ ಇಲ್ಲ. ಅವಕ್ಕೆ ಬದಲಾಗಿ "ಸಮಾಚಾರ ಸ್ತ್ರೀಯರು" ಎಂದು ಹೇಳಬಹು ದಾದ ಕೆಲವು ಮಹಿಳೆಯರುಂಟು. ಅವರ ಕೆಲಸವೇನೆಂದರೆ ಹೊತ್ತು ಹುಟ್ಟಿ ದಾಗಿನಿಂದ ಹೊತ್ತು ಮುಳುಗುವವರೆಗೂ ಊರು ಸುತ್ತಿ ಕನಿಷ್ಠಪಕ್ಷ ನೂರುಸಲವಾದರೂ ಸಂದು ಗೊಂದು ಬಾಕಿ ಬಿಡದೆ ಗಾಳಿಯಂತೆ

ನುಸುಳಿಹೋಗಿ ಗ್ರಾಮಪ್ರದಕ್ಷಿಣೆಯನ್ನು ಮಾಡಿ, ಯಾರಾದರೂ ಹೊ
ದಾಗಿ ಆ ಊರಿಗೆ ಬಂದಿದ್ದರೂ ಸರಿಯೆ, ಯಾರ ಮನೆಯಲ್ಲಿಯಾದರ
ಗಟ್ಟಿಯಾಗಿ ಕೂಗಿಕೊಂಡು ಮಾತನಾಡಿದ್ದರೂ ಸರಿಯೆ, ಯಾರು ರಹಸ
ವನ್ನು ಮಾತನಾಡಿದರೂ ಸರಿಯೆ, ಯಾರಾದರೂ ನಕ್ಕರೂ ಸರಿಯೆ, ಅತ್ತರ
ಸರಿಯೆ, ಎಲ್ಲಿ ಏನು ನಡೆಯುತ್ತದೆಯೆಂದು ಜಾಗ್ರತೆಯಾಗಿ ಗಮನಿಸಿ
ಜೇನಿನ ನೊಣಗಳು ಹಲವು ಕಡೆಗಳಲ್ಲಿ ಸುತ್ತಾಡಿ ಜೇನನ್ನು ಸಂಗ್ರಹಿ
ಒಂದು ಕಡೆ ತಂದು ಶೇಖರಿಸಿ ಉಣ್ಣುವಂತೆ ತಮ್ಮ ಸಮಾಚಾರಗಳ ಸರಕ
ಮೂಟೆಗಳನ್ನು ಆ ಮಹಿಳಾ ಮಹಾಸಭೆಯಲ್ಲಿ ಹಾಜರು ಮಾಡುವುದೇ
ಇದೇ ಅವರ ಕಸಬು. ಈ ಉದ್ಯೋಗಸ್ಥರ ಸಾಮರ್ಥ್ಯ ಅತ್ಯದ್ಭುತವಾದುದ

ಹಿಂದೊಂದು ಕಾಲದಲ್ಲಿ ಸ್ಪೇನ್ ಮುಂತಾದ ಕ್ರೈಸ್ತ ದೇಶಗಳಲ್ಲಿ ಮ
ಸಂಬಂಧವಾದ ಒಂದು ಸಂಸ್ಥೆ ಇತ್ತು. ಅದರ ಉದ್ಯೋಗಸ್ಥರ ಕಸಬ
ಏನೆಂದರೆ ಸಾಮಾನ್ಯ ಉದ್ಯೋಗದ ಚಿನ್ಹೆಗಳಾವುದೂ ಇಲ್ಲದೆ ಒಬ್ಬ ಮನುಷ
ನೊಂದಿಗೆ ಸಹಜವಾಗಿ ಮಾತನಾಡಿದಂತೆ ಮಾಡಿ, ಸರಕಾರದ ಮತಕ್ಕೆ ಸ್ವಲ
ವಾದರೂ ಅವನು ವಿರೋಧವಾಗಿ ಮಾತನಾಡಿದರೂ ಸರಿ, ಹಾಗೆ ವರ್ತಿಸಿದರ
ಸರಿ, ಅವನನ್ನು ವಿಚಾರಣೆಗೆ ಗುರಿಪಡಿಸುವುದೇ ಆಗಿತ್ತು. ತಂತ್ರ ಶಕ್ತಿಯ
ಆ ಪ್ರಬಲವಾದ ಉದ್ಯೋಗಸ್ಥರೂ ಸಹ ಕೆಲಸವಿಲ್ಲದ ಈ ಮಹಿಳ
ಮಹಾಸಭೆಯ 'ಸಮಾಚಾರ ಸ್ತ್ರೀ'ಯರ ಪಾದ ಧೂಳಿಯಷ್ಟು ಬೆಲೆ ಬಾ
ಳಾರರು. ರಾಜ್ಯವನ್ನಾಳುವ ಮಂತ್ರಿಯೂ ಇವರ ಕಡೆಯಿಂದ ಎರಡ
ಮೂರು ತಿಂಗಳು ತರಬೇತನ್ನು ಪಡೆದರೆ ಒಳ್ಳೆಯದೆ! ಅವರಿಗೆ ತಿಳಿಯಬ
ಸಂಪ್ರದಾಯಗಳೂ, ನಾಣ್ನುಡಿಗಳೂ ಬೇರೆ ಯಾರಿಗೂ ಗೊತ್ತಿಲ್ಲ. ಮಂತ್
ತಂತ್ರಗಳಲ್ಲಿ ಪ್ರವೀಣರು. ಯಾವ ಕೆಲಸಕ್ಕೆ ಏನು ತಂತ್ರ ಹೂಡಬೇಕು
ಯಾರಿಗೆ ಯಾವ ಬಲೆ ಬೀಸಬೇಕು, ಎಂಬುದು ಅವರಿಗೆ ಚೆನ್ನಾಗಿ ಗೊತ್ತಿತ್ತು
ಸ್ತ್ರೀಯರಾಗಲಿ, ಪುರುಷರಾಗಲಿ — ಎಷ್ಟು ರಹಸ್ಯವಾಗಿ ತಮ್ಮ ಗುಟ್ಟ
ಬಚ್ಚಿಟ್ಟುಕೊಂಡರೂ, ಅವನ್ನು ಇವರು ಹೇಗೋ ಕಂಡುಕೊಂಡು ಬಿಡುವರ
ಈ ಗ್ರಹಣ ಮಾಡುವ ಶಕ್ತಿಯೊಂದು ಮಾತ್ರವೇ ಅವರಲ್ಲಿತ್ತೆಂದು ಭಾವಿ
ಬೇಡಿ. ಕಲ್ಪನಾಶಕ್ತಿ ಕಡಮೆ ಇರುವ ನಮ್ಮ ದೇಶದ ವಿದ್ವಾಂಸರಂತೆ ಒಬ್ಬರ

ಹೇಳಿದುದನ್ನೇ ಮತ್ತೊಬ್ಬರು ಹೇಳುವುದರಲ್ಲಿ ಅವರಿಗೆ ಸ್ವಲ್ಪವೂ ತೃಪ್ತಿ ಇಲ್ಲ. ಸುಳ್ಳನ್ನು ನಿಜ ಮಾಡುವುದರಲ್ಲಿಯೂ, ನಿಜವನ್ನು ಸುಳ್ಳು ಮಾಡುವುದರಲ್ಲಿಯೂ, ನರಿಯನ್ನು ಕುದುರೆಯನ್ನಾಗಿ, ಕುದುರೆಯನ್ನು ನರಿಯನ್ನಾಗಿ ಮಾರ್ಪಡಿಸುವುದರಲ್ಲಿಯೂ ಪರಶಿವನಿಗಿಂತಲೂ ಸಮರ್ಥರು. ಯದ್ವಾ-ತದ್ವಾ ಮಾತನಾಡದೆ, ಕಲ್ಲೂ ಹುಲ್ಲೂ ಕರಗುವಂತೆ ಮಾತನಾಡುವರು. ರಾಮಾಯಣ ಕಥೆಯನ್ನು ವಿವರಿಸಿ, ಹಿಗ್ಗಿಸಿ ಬರೆದಿರುವ ಕಂಬರ್ ಕವಿಯಲ್ಲಿದ್ದ ಕಲ್ಪನಾಶಕ್ತಿಗಿಂತಲೂ ಶ್ರೇಷ್ಠವಾದ ಕಲ್ಪನಾಶಕ್ತಿ ಇವರಲ್ಲಿ ಉಂಟು. ವ್ಯಾಸ ಮಹರ್ಷಿಗಳು ರಚಿಸಿದ ಪುರಾಣಗಳು ಹದಿನೆಂಟು ಮಾತ್ರ. ಇವರಾದರೊ ಪ್ರತಿಯೊಂದು ಮನೆಗೂ ಒಂದೊಂದು ಸ್ಥಲಪುರಾಣವನ್ನು ಸೃಷ್ಟಿ ಮಾಡುವರು. ಪ್ರೀತಿ, ಬುದ್ಧಿ, ಚಿತ್ತ ಇವುಗಳನ್ನು ಮಾರ್ಪಡಿಸುವುದರಲ್ಲಿ ಷೇಕ್ಸ್‌ಪಿಯರ್ ಮಹಾಕವಿ ರಚಿಸಿದ 'ಮಿಡ್ ಸಮ್ಮರ್ ನೈಟ್ಸ್ ಡ್ರೀಂ' (ನಡು ಬೇಸಿಗೆಯ ಕಾಲದ ರಾತ್ರಿ ಕನಸು) ಎಂಬ ನಾಟಕದಲ್ಲಿ ಬರುವ 'ಪಕ್' —ಈ ಪಾತ್ರ ಈ ಬಗೆಯಲ್ಲಿ ತನ್ನ ಶಕ್ತಿಯಿಂದ ಎಲ್ಲರ ಮನಸ್ಸನ್ನೂ ತಿರುಗಿಸುತ್ತಾನೆ—ಎಂಬನಿಗಿಂತಲೂ ಸಮರ್ಥರು ಇವರು. ಇವರೆಲ್ಲರೂ ಸ್ವಯಂ ನಿಯೋಜಿತ ಉದ್ಯೋಗಸ್ಥರು—ಬೇರೊಬ್ಬರೂ ಇವರಿಗೆ ಈ ಕೆಲಸ ಕೊಡಲಿಲ್ಲ. ಇವರು ಆ ಮಹಾಸಭೆಯ ಮುಖ್ಯ ಸದಸ್ಯರು.

## ೫. ಕಲಹದ ಬೆಂಕಿ

ಈ ಹರಟೆ ಮಲ್ಲಿಗಳ ಮಹಾಸಭೆಯ ಅಧ್ಯಕ್ಷಿಣಿಯರಾದ ಸುಬ್ಬಮ್ಮಾಳನ್ನು ಕಮಲಾಂಬಾಳ್ ಮನೆಗೆ ಬೆಂಕಿಯನ್ನು ತರಲು ಹೋದ ದಾರಿಯಲ್ಲಿ ಇಷ್ಟು ಹೊತ್ತು ಗೌರವಹೀನವಾಗಿ ನಿಲ್ಲುವಂತೆ ಮಾಡಿ ಅಪರಾಧವನ್ನು ಎಸಗಿದ್ದೇವೆ. ಇದನ್ನು ವಾಚಕರು ದಯೆಯಿಟ್ಟು ಕ್ಷಮಿಸಬೇಕು. ಎಲ್ಲಿ ಸುಬ್ಬಮ್ಮಾಳನ್ನು ಸಾಧಾರಣ ಸುಬ್ಬಮ್ಮಾಳಾಗಿ ಎಣಿಸಿಬಿಡುತ್ತಾರೆಯೋ ಎಂದು ಹೆದರಿ ಆಕೆಯ ಅಂತಸ್ತನ್ನೂ ಅಧಿಕಾರವನ್ನೂ ಕುರಿತು ವಿಸ್ತರಿಸಿ ಬರೆಯಬೇಕಾಯಿತು. ಜಗುಲಿಯ ಮೇಲೆ ಕುಳಿತಿದ್ದ ಕೃಷ್ಣಅಯ್ಯರ್ ಮತ್ತು ರಾಮಸ್ವಾಮಿ ಶಾಸ್ತ್ರಿ

ಗಳನ್ನು ಸುಬ್ಬಮ್ಮಾಳ್ ಕಂಡು ನಾಚಿಕೆಗೊಂಡವಳಂತೆ ಒಂದು ಓರೆಗೆ ಸರಿ ಸೆರಗನ್ನು ಎಳೆದು ಹೊದ್ದುಕೊಂಡು ಬಹಳ ಮರ್ಯಾದೆಯಿಂದ ತಲೆಯನ್ ಬಗ್ಗಿಸಿಕೊಂಡು ಒಳಗೆ ಪ್ರವೇಶಿಸಿ ಕಮಲಾಂಬಾಳನ್ನು ನೋಡಿ ಏನೋ ರಹಸ್ಯವನ್ನು ಹೇಳುವವಳಂತೆ ಮೆತ್ತಗೆ "ಅವರು ನಿಮ್ಮ ಮಾವ, ಪಕ್ಕದಲ್ಲಿದ ವರು ಅವರ ಬೀಗರು ಎಂದು ಕಾಣುತ್ತೆ. ಅಲ್ಲವೆ?" ಎಂದು ಕೇಳಿದಳ ಕಮಲಾಂಬಾಳ್, "ಹೌದು, ಅವರೇ. ಈಹೊತ್ತೇ ಬಂದರು... ಒಳಗೆ ಬನ್ ಸುಬ್ಬಮ್ಮ. ಹೊರಗೇ ನಿಂತು ಮಾತಾಡುತ್ತಿದ್ದೀರಲ್ಲ!" ಎಂದಳು.

ಸುಬ್ಬಮ್ಮಾಳ್ ಒಳಗೆ ಪ್ರವೇಶಿಸುವಾಗ ತಲೆಯನ್ನು ಬಗ್ಗಿಸಿಕೊಂಡ ಹೋದಳಲ್ಲಾ, ಅವಳು ಹೇಗೆ ಜಗುಲಿಯ ಮೇಲೆ ಕುಳಿತಿದ್ದವರನ್ನು ನೋಡಿ ದಳು, ಎಂದು ಕೆಲವರು ಶಂಕಿಸಬಹುದು. "ವಯಸ್ಸಿಗೆ ಬಂದ ಹುಡುಗಿಯ ಕಣ್ಣು ಹೆಬ್ಬೆರಳನ್ನು ನೋಡುತ್ತಿರುವಾಗಲೇ ಕಡೆಗಣ್ಣು ಲೋಕವೆಲ್ಲ ಸುತ್ತುವುದು" ಎಂದು ನಾಣ್ಣುಡಿ. ಹಾಗೆಯೇ ಸುಬ್ಬು ಸಹ ಗೂಬೆಯ ಕಣ್ಣುಳ್ಳವಳಾದರೂ ಗರುಡನಿಗಿಂತಲೂ ಅತಿ ತೀಕ್ಷ್ಣವಾದ ಕಡೆಗಣ್ಣೋಟ ಉಳ್ಳವಳು. ಇಷ್ಟು ವಿಶೇಷ ಶಕ್ತಿ ಇರುವುದರಿಂದಲ್ಲವೆ ಅವಳು ಹರಟೆಮಲ್ಲಿ ಗಳ ಮಹಾಸಭೆಗೆ ಅಧ್ಯಕ್ಷಿಣಿಯಾದಳು! ಅವಳನ್ನು ಕುರಿತೂ, ಅವಳ ಸಭೆ ಯನ್ನು ಕುರಿತೂ ನಾವು ಮುಂದೆ ಹಲವು ಸಲ ಹೇಳಬೇಕಾಗಿ ಬರುತ್ತದೆ ಸುಬ್ಬು ನಮಗೆ ಮುಖ್ಯ ಸಖಿ. ಹೇಗೆ ಗೂನಿಯಾದ ಮಂಥರೆ, ಶೂರ್ಪನಖಿ ಮೊದಲಾದ ಉತ್ತಮ ಸ್ತ್ರೀಯರು ಇಲ್ಲದಿದ್ದರೆ ರಾಮಾಯಣ ಸಾಗಿರಲಾರದೋ ಹಾಗೆಯೇ ನಾವು ಬರೆಯುತ್ತಿರುವ ಅದ್ಭುತ ಚರಿತ್ರೆಯೂ ಸುಬ್ಬಮ್ಮಾಳ್ ಇಲ್ಲದಿದ್ದರೆ ನಡೆದಿರಲಾರದು. ಆದುದರಿಂದ ದೇವತೆಗಳು, ಋಷಿಗಳು ಮುಂತಾದ ಸಾಧುಗಳೆಲ್ಲರೂ ಗೂನಿ, ಶೂರ್ಪನಖಿ ಇವರಿಗೆ ಕೃತಜ್ಞರಾಗಿರು ವಂತೆ ನಾವೂ ಸುಬ್ಬಮ್ಮಾಳ್ ವಿಷಯದಲ್ಲಿ ಹೆಚ್ಚು ವಿಶ್ವಾಸವುಳ್ಳವರಾಗುವ!

ಕಮಲಾಂಬಾಳ್ "ಬನ್ನಿ" ಎಂದ ಕೂಡಲೆ ಸುಬ್ಬು ಅವಳನ್ನು ದೃಷ್ಟಿಸಿ ನೋಡಿ, "ಮಧುರೆಯಲ್ಲಿ ತಾನೆ ಮದುವೆ. ಒಳ್ಳೆಯದಾಯಿತಮ್ಮಾ. ಮನಸ್ಸಿಗೆ ಈಗ ಸಮಾಧಾನವಾಯಿತು." ಎಂದಳು.

ಕಮಲಾಂಬಾಳ್:- "ಏನೋ ದೈವಸಂಕಲ್ಪ. ನಾವು ಮಾಡುತ್ತೇವೆ, ನಾವು ಹೋಗುತ್ತೇವೆ ಎಂದು ನಾವು ಎಣಿಸುತ್ತೇವೆಯೇ ಹೊರತು ನಿಜವಾಗಿಯೂ ನಾವು ಮಾಡುವುದು ಏನೂ ಇಲ್ಲ. ಎಲ್ಲ ಭಗವಂತನ ದಯೆ." ಎಂದಳು.

ಸುಬ್ಬು:- "ಅಲ್ಲವೆ! ಹಾಗೆಯೇ ನಡೆಯಬೇಕು. ಅದನ್ನು ಬಿಟ್ಟು ಕೆಲಸಕ್ಕೆ ಬಾರದ ಮಾತುಗಳನ್ನಾಡಿದರೆ ಕಲಹವಲ್ಲದೆ ಬೇರೇನು ಲಾಭ?"

ಕಮಲಾಂಬಾಳ್:- "ನಾವು ಏನಾದರೂ ತಪ್ಪು ಮಾಡಿ, ಯಾರನ್ನು ಕುರಿತಾದರೂ ಏನಾದರೂ ಹೇಳಿರಬಹುದೇ?" ಎಂದು ಶಂಕಿಸಿ, "ಮಾತೇ? ಯಾವ ಮಾತು? ಯಾವಾಗ ಆಡಿದ್ದೇನೆ?" ಎಂದು ಕೇಳಿದಳು.

ಸುಬ್ಬು:- "ನೀನೇ? ಚೆನ್ನಾಗಿದೆ! ನಿನ್ನ ಮಾತು ನಿನಗೇ ಸಲ್ಲುವುದು!" ಎಂದಳು. ಕಮಲಾಂಬಾಳ್, "ಇವಳು ಯಾರೋ ಹೇಳಿದ ಮಾತನ್ನು ನಮ್ಮೊಡನೆ ಹೇಳಲು ಬಂದಿದ್ದಾಳೆ. ಇದಕ್ಕೆ ಅವಕಾಶ ಕೊಡಬಾರದು." ಎಂದು ಭಾವಿಸಿ, ಬೇಗ ಒಳಗೆ ಹೋಗಿ ಸುಬ್ಬಮ್ಮಾಳಿಗೆ ಬೆಂಕಿಯನ್ನು ತಂದು ಕೊಟ್ಟು, "ಹಲವರು ಹಲವಾರು ಮಾತನಾಡಿಕೊಳ್ಳುವರು. ಊರಿನವರ ಬಾಯನ್ನು ಮುಚ್ಚಲು ನಮ್ಮಿಂದ ಸಾಧ್ಯವೆ? ಒದ್ದೆಯ ಸೀರೆಯನ್ನುಟ್ಟು ನಿಂತಿರುವಿರಲ್ಲಾ!" ಎಂದಳು.

ಸುಬ್ಬಮ್ಮಾಳ ಕಸಬೂ, ಸಾಮರ್ಥ್ಯವೂ ಅವಳಿಗೆ ಚೆನ್ನಾಗಿ ತಿಳಿದ ವಿಷಯ. ಆದುದರಿಂದ ಅವಳನ್ನು ಬೇಗ ಹೊರಕ್ಕೆ ಕಳುಹಿಸಿಕೊಟ್ಟರೇನೇ ಕ್ಷೇಮವೆಂದು ಭಾವಿಸಿ, ಸೂಕ್ಷ್ಮವಾಗಿ "ಒದ್ದೆಯ ಸೀರೆಯನ್ನುಟ್ಟು ನಿಂತಿರುವಿರಲ್ಲಾ!" ಎಂದಳು. ಸುಬ್ಬು ಈ ಸೂಚನೆಯನ್ನು ಗ್ರಹಿಸಿದರೂ ಪೊನ್ನಮ್ಮಾಳಿಗೂ ಅವಳಿಗೂ ಕಲಹವನ್ನುಂಟುಮಾಡುವುದು ಹೆಚ್ಚು ಆವಶ್ಯ ವಾಗಿದ್ದುದರಿಂದ ಅವಳು ಹೊರಕ್ಕೆ ಹೋಗೆಂದು ತಳ್ಳಿದರೂ ಹೋಗಬಾರ ದೆಂದು ತೀರ್ಮಾನ ಮಾಡಿಕೊಂಡು ಪಕ್ಕದಲ್ಲಿದ್ದ ಬೆರಣಿಯನ್ನು ತೆಗೆದು ಕೊಂಡು ಬೆಂಕಿಯನ್ನು ಹತ್ತಿಸಿಕೊಂಡು ಕುಳಿತುಬಿಟ್ಟಳು. ಸುಬ್ಬಮ್ಮಾಳಿಗೂ ಅವಳ ಸಭೆಯವರಿಗೂ ಕಮಲಾಂಬಾಳ್ ವಿಷಯದಲ್ಲಿ ಬಹಳ ಬೇಸರ ಉಂಟು. ಏಕೆಂದರೆ ಈ ಹರಟೆಮಲ್ಲಿಗಳ ಮಹಾಸಭೆಯನ್ನು ಅವಳು ಸ್ವಲ್ಪವೂ ಗಮನಿ

ಸುವುದೇ ಇಲ್ಲ. ಅದರಲ್ಲಿ ಅರ್ಧ ಘಳಿಗೆಯಾದರೂ ಸೇರುವುದಿಲ್ಲ. ಅದನ್ನು ಸ್ವಲ್ಪವೂ ಲಕ್ಷ್ಯ ಮಾಡದವಳಂತೆ ಅವಳು ನಡೆದುಕೊಳ್ಳುತ್ತಿದ್ದಳು. ಅಲ್ಲದೆ ಗಣಿತ ಶಾಸ್ತ್ರದಲ್ಲಿ ನಿಷ್ಣಾತರಾದವರಿಗೆ ಕಠಿನವಾದ ಲೆಕ್ಕಗಳನ್ನು ಮಾಡುವುದ ರಲ್ಲಿ ವಿಶೇಷ ತೃಪ್ತಿ. ಕಾಮವಿಷಯಗಳಲ್ಲಿ ಲೋಲುಪರಾಗಿ ಗೌರವ ಪಟ್ಟ ವನ್ನು ಗಳಿಸಿದ ವಿಟಪುರುಷರಿಗೆ ಅನುಭವಿಸಲು ಸಿದ್ಧವಾಗಿರುವ ತಮ್ಮ ವಶದಲ್ಲಿರುವ ಸ್ವಂತ ಸ್ತ್ರೀಯರಿಗಿಂತಲೂ ಹಾಳುಗೋಡೆಯನ್ನು ಹಾರಿ ಚೇಡಿಗೆಯನ್ನು ಕಳೆದುಕೊಂಡು ಬಹಳ ಕಷ್ಟಸಾಧ್ಯದಿಂದ ಪಡೆದ ಪರಸ್ತ್ರೀಯ ರನ್ನು ಅನುಭವಿಸುವುದು ಹೆಚ್ಚು ತೃಪ್ತಿ. ಅದರಂತೆಯೇ ಸಕಲ ವಿದ್ಯೆಗಳಲ್ಲಿ ಪಾರಂಗತರಾದ ನಾರದರಿಗೂ ಒಂದು ಕೈ ಮೇಲಾದವಳೆಂದು ಪ್ರಸಿದ್ಧಿಯನ್ನು ಪಡೆದ ಸುಬ್ಬಮ್ಮಾಳಿಗೆ ಸುಲಭದಲ್ಲಿ ಜಗಳವಾಡುವ ಸಾಮಾನ್ಯ ಜನಗಳ ಮಧ್ಯೆ ಜಗಳವನ್ನು ತಂದೊಡ್ಡುವುದಕ್ಕಿಂತಲೂ ಜಗಳ ಮಾಡುವುದನ್ನೇ ಅರಿಯದ ಸಾಧುವಾದ ಕಮಲಾಂಬಾಳನ್ನು ಕಲಹದಲ್ಲಿ ಎಳೆದುಹಾಕುವುದರಲ್ಲಿ ಅಧಿಕ ತೃಪ್ತಿ. ಯಾವಾಗ ತನಗೆ ಸಮಯ ಸಿಕ್ಕೀತೆಂದು ಹೆಚ್ಚು ಕುತೂಹಲ ದಿಂದ ಎದುರು ನೋಡುತ್ತಿದ್ದ ಅವಳು ಸಾಧಾರಣ ಬೆಂಕಿಯನ್ನು ಹೊತ್ತಿಸು ವುದರ ಜೊತೆಗೆ ಕಲಹವೆಂಬ ಬೆಂಕಿಯನ್ನೂ ಸಹ ಈ ಕೆಳಗೆ ವಿವರಿಸುವಂತೆ ಉದ್ದೀಪನಗೊಳಿಸತೊಡಗಿದಳು.

ಸುಬ್ಬು:- "ನಾನು ನದಿಯ ದಡದಲ್ಲಿ ಸೀಯೆ (ಸುಬ್ಬು ಬಾಯಲ್ಲಿ 'ರ' ಕಾರ ಹೊರಡುವುದಿಲ್ಲ. ಅದಕ್ಕೆ ಬದಲಾಗಿ 'ಯ'ಕಾರ ಪ್ರಯೋಗವೆಂದು ಹಿಂದೆಯೇ ಹೇಳಲಾಗಿದೆ. ಆ ಪರಿಭಾಷೆಯನ್ನು ಸ್ವಲ್ಪ ನೋಡೋಣ) ಒಗೆ ಯುತ್ತಿದ್ದೆ. ಅಲ್ಲಿ ಕುಲುಕುತ್ತ ಮಿನುಗುತ್ತ ತಂಜಾವೂಯವಳು ಬಂದಳು, ನಿನ್ನ ವಾಯಿಗಿತ್ತಿ. ನನ್ನ ಬಾಯಲ್ಲಿ ಶನಿ ವಕ್ಕಸಿತ್ತು. ಸುಮ್ಮನೆ ಇಯಲಾ ಯದೆ ಅವಳನ್ನು ನೋಡಿ ನಿಮ್ಮ ಭಾವನ ಮನೆಯ ಜಗುಲಿಯಲ್ಲಿ ಯಾಯು ಕುಳಿತಿದ್ದಯು ಎಂದು — ನಿನ್ನನ್ನು ಕೇಳಲಿಲ್ಲವೆ ಹಾಗೆಯೇ — ಅವಳನ್ನು ಕೇಳಿದೆ. ಅದಕ್ಕೆ ಅವಳು "ಅದು ಯಾಯಿಗೆ ಗೊತ್ತು—ಯಾಯಿಗೆ ಬೇಕು. ಬಾವಿಯ ಕಪ್ಪೆಗೆ ನಾಡಿನ ಗೋಜೇಕೆ—ಊಯಿನ ಸುಡುಗಾಡಿನ ಮಾತೆಲ್ಲಾ ನಮಗೇತಕ್ಕೆ?" ಹಾಗೇಂತ ಹೇಳಿದಳು. ನಾನು "ಏನೇ..." ಎಂದೆ.

ಕಮಲಾಂಬಾಳ್:- "ಅದೊಂದು ಹುಚ್ಚು. ಬಾಯಿಗೆ ಬಂದದ್ದು ಅನ್ನುತ್ತಾಳೆ. ಅದನ್ನೂ ಒಂದು ಮಾತೆಂದು ನೀವು ಹೇಳಬೇಕೆ?"

ಸುಬ್ಬು:- "ಹೌದೇಳು. ಈ ಸಾಮ್ರಾಜ್ಯವನ್ನು ಹೇಳುವುದಕ್ಕಾಗಿಯೇ ಮನೆ ಬಿಟ್ಟು ಇಲ್ಲಿಗೆ ಬಂದೆ. ಹೇಳುತ್ತೇನೆ—ಪೂರ್ತಿಯಾಗಿ ಕೇಳು! ಆಮೇಲೆ ನೀನೇ ಹೇಳುವೆ. ಅವಳಾ—ಹುಚ್ಚಿ? ಹಲ್ಲಿಗೆ ಹಾವಿನಲ್ಲಿ ವಿಷ (ಹಾವಿಗೆ ಹಲ್ಲಿನಲ್ಲಿ ವಿಷವೆನ್ನುವುದಕ್ಕೆ ಬದಲಾಗಿ) ಅವಳಿಗೆ ಮೈಯ್ಯೆಲ್ಲ ವಿಷ. ನಿನಗೂ ಮುತ್ತುಸ್ವಾಮಿಗೂ ಬೆಳ್ಳಗಿರುವುದೆಲ್ಲಾ ಹಾಲು. ಭಾಗವಾದಾಗ ಅವಳು ನಗವನ್ನು ಕದ್ದದ್ದು — ಕೋರ್ಟಿಗೆ ಎಳೆದಾಗ ತಿಳಿಯಿತು... ಮಾಯಿ ಬಡ್ಡಿಗೆ ಹಾಕಿದ್ದು—ಎಲ್ಲಾ ಮಯೆತುಹೋಯಿತೇ? ಅದೆಲ್ಲಾ ಆ ತಂಜಾವೂರಿನ ಹೆಣ್ಣಿನ ಪದ್ಧತಿ— ಅವಳೇ ಹುಚ್ಚಿ?"

ಕಮಲಾಂಬಾಳ್:- "ಅವಳು ಬುದ್ಧಿಶಾಲಿಯಾಗಿರುವುದು ಒಳ್ಳೆಯದೆ ತಾನೆ. ಅದರಿಂದ ನಮಗೇನು ದೋಷ? ಆದದ್ದಾಗಿ ಹೋಯಿತು. ಈಗ ನಾವಿಬ್ಬರೂ ಸ್ನೇಹದಿಂದ ಇರುವಷ್ಟು ಲೋಕದಲ್ಲಿ ಯಾವ ವಾರಿಗಿತ್ತಿಯರಿದ್ದಾರೆ?"

ಸುಬ್ಬು:- "ಆ! ಏನೋ ಹೇಳುತ್ತಾಯಲ್ಲ. ಯಾಜಾ ಹೆಣ್ಣನ್ನು ಸಂಬಂಧ ಮಾಡಿಕೊಂಡಂತೆ ಆಗಿದೆ. ನೀನು ಒಳ್ಳೆಯವಳೇ. ನಿನ್ನನ್ನು ಸುಮ್ಮನಿರಲು ಬಿಟ್ಟಿಯೆ ತಾನೆ. ಏನು ಗರ್ವ! ಏನು ಠೀವಿ—ತಲೆ ಕತ್ತಿನ ಮೇಲೆ ನಿಲ್ಲಲಾಯೆ ಎನ್ನುತ್ತದೆ. ಏನೋ ಓದಿದ್ದಾಳಂತೆ ಓದನ್ನು—ವಿಚಿತ್ರ ಓದು—ಏನು ಗೇಲಿ—ನಮ್ಮನ್ನು...

ಕಮಲಾಂಬಾಳ್:- "ಏನು ಹಾಗೆ ಹೇಳುತ್ತೀರಿ. ನೀವು ಹೇಳುವುದು ಹೊಸದಾಗಿದೆ ನನಗೆ. ಹಾಗೆಲ್ಲಾ ಇರಲಾರಳಲ್ಲಾ!"

ಸುಬ್ಬು:- "ನೀನು ಹಾಗೆಯೇ ಎಣಿಸುತ್ತೀಯ. ಅವಳ ಮಾತನ್ನು ಕೇಳಿದರೆ—ಹುಳ ಬಿದ್ದ ನಾಯಿ ಕೂಡ ಅಡ್ಡ ಬರಲಾರದು. ನೀನು ಸಾವಿರ ಹೊನ್ನು ಕೊಟ್ಟರೂ ನಿನ್ನ ಹೆಣ್ಣು ಬೇಡವಂತೆ. ಏನು ಒಕ್ಕಣೆ! ಕುಗ್ರಾಮದ ಹುಡುಗಿಯಂತೆ—ಸೌಂದರ್ಯವಿಲ್ಲವಂತೆ—ಮೂಗೂ ಮುಖವೂ ಅವಲಕ್ಷಣವಾಗಿದೆಯಂತೆ. ಮಕ್ಕಳು ನೋಡಿದರೆ, ಯಾತ್ರೆ ವೇಳೆ

ಯಲ್ಲಿ ಹೆದಯಿಕೊಂಡು ಬಿಡುವುವಂತೆ. (ಇದೆಲ್ಲ ಸುಬ್ಬಮ್ಮಾಳಿನ ಸ್ವಂತ ಕಲ್ಪನೆಗಳು.) ನಾವೆಲ್ಲರುೂ, ಹಳ್ಳಿಯ ಕತ್ತೆಗಳಂತೆ. ಮುತ್ತುಸ್ವಾಮಿಗೆ ಏನೋ ಇದ್ದಾನೆ ಒಬ್ಬ ತಮ್ಮ ಎನ್ನುವ ವಿಶ್ವಾಸವೇ ಇಲ್ಲವಂತೆ. ಅವನು ಯಾರೋ—ನಾವು ಯಾರೋ—ಎಂದಿದ್ದಾನಂತೆ. ಇಷ್ಟೇನೇ? ನಿನಗೆ ಒಂದು ಒಳ್ಳೆ ದೊಡ್ಡ ಬಿರುದು ಕೊಟ್ಟಿದ್ದಾಳೆ. ಆ ಬೈಯ್ಯನ್ನು ಕಿವಿಯಲ್ಲಿ ಕೇಳಲಾಗದು. ಹೇಳಿದ ಪಾಪಕ್ಕೆ ಆ ಮುಂಡೆ ಗುರಿಯಾಗುತ್ತಾಳೆ. ಕಳ್ಳನಿಗೆ ತೋರುವ ಕದಿರುವ ಬುದ್ಧಿ. ಸುಬ್ರಹ್ಮಣ್ಯನ ಬುದ್ಧಿಯನ್ನು ಚಪ್ಪಲಿಯಿಂದ ಹೊಡೆಯಬೇಕು. ಬೇಡ, ಬೇಡ ಎನ್ನುತ್ತಿರುವಾಗಲೆ ಉತ್ತರಕ್ಕೆ ಹೋಗಿ ಮದುವೆ ಮಾಡಿಕೊಂಡು ಬಂದನಲ್ಲಾ!"

ಕಮಲಾಂಬಾಳ್:- "ಏನು ಹೀಗೆ ಬೈಯ್ಯುತ್ತೀರಲ್ಲ? ಏನು ಹೇಳಿದಳು ನನ್ನನ್ನು?"

ಸುಬ್ಬು:- "ನನಗೆ ಹೊಟ್ಟೆ ಉರಿಯುತ್ತದೆ. ಮುತ್ತುಸ್ವಾಮಿ ಕೇಳಿದನೆಂದರೆ ಹುರಿಯನ್ನು ಕಟ್ಟಿ ಅವಳನ್ನು ಎಳೆದು ಹಾಕಿಬಿಡುವನು. ಅವಳ ಮಗನಿದ್ದಾನಲ್ಲ ಅವನನ್ನು ಬಹಳ ಸಲಿಗೆ ಕೊಟ್ಟು ಗೂಳಿಯನ್ನಾಗಿ ಮಾಡಿರುವಿರಂತೆ. ತಾಯಿಗೂ ಮಗನಿಗೂ ಆಗದಂತೆ ಮಾಡಿರುವಿರಂತೆ. (ಇದೂ ಸುಬ್ಬಮ್ಮನ ಕಲ್ಪನೆ). ಚೆನ್ನಾಗಿಯೇ ಬೈದಳು. ಹಾಗೆ ಹೇಳಿದ ಮುಂಡೆಯ ನಾಲಿಗೆಯನ್ನು ಕುಯ್ದರೆ ಏನು? ನೀನು ಮದುವೆಯನ್ನು ಮಾಡಲು ಆರಂಭಿಸಿರುವುದು. ನಿನ್ನ ಮಗು ಸಾಸಿವೆಯಷ್ಟು ಕಪ್ಪಗಿರುವ ಅವಲಕ್ಷಣದ ರೂಪ. ನಿನ್ನ ಮದುವೆ—ಸುಡುಗಾಡು—ನೀನು ಅವಿಚಾರಿ ಮುಂಡೆ—ಏನಾಗಿದೆ ಮಾತುಗಳು—ಆ ಮುಂಡೆ ತಲೆಯಲ್ಲಿ ಬೆಂಕಿ ಇಟ್ಟು ಸುಡಬೇಕು."

ಕಮಲಾಂಬಾಳ್:- "ಅತ್ತಿಗೆ! ಹಾಗೆ ಹೇಳಿದಳೇ? ನನ್ನನ್ನೇ? ಅವಳೆದುರಿಗೆ ಹೇಳುತ್ತೀರಾ?"

ಸುಬ್ಬು:- "ನಿನ್ನ ಬುದ್ಧಿಗೆ! ಅವಳು ಅಷ್ಟೇ ಹೇಳುವಳೇ? (ಕೋಪಿಸುತ್ತ) ಇನ್ನೂ ಹೇಳುವಳು. ನಾನು ಹೇಳುವುದು ಮಾತ್ರ ಸುಳ್ಳು. ಜೊತೆ

ಯಲ್ಲಿ ನಾಗು ಇದ್ದಳು. ಅವಳನ್ನು ಕೇಳು. ನನಗೇನು ಭಯ? ಎದುರಿಗಿಟ್ಟುಕೊಂಡು ಹೇಳುತ್ತೇನೆ. ಪ್ರಮಾಣ ಬೇಕಾದರೆ ಮಾಡುತ್ತೇನೆ."

ಕಮಲಾಂಬಾಳ್:- "ನಿಮ್ಮನ್ನು ನಂಬಬಹುದೆ? ಹೀಗೆಲ್ಲಾದರೂ ಮಾತನಾಡುತ್ತಾಳೆಯೆ, ಒಬ್ಬ ಹೆಂಗಸು? ಶಿವ, ಶಿವ."

ಸುಬ್ಬು:- "ಸೋದರಳಿಯನಿಗೆ ಹೆಣ್ಣು ಕೊಡಲಿಲ್ಲವಂತೆ—ಅದರಿಂದ. ಜಾತಕ ಹೊಂದದಿದ್ದರೆ ಅದಕ್ಕೆ ನಾನೇನು ಮಾಡುವರೊ? ನದೀ ತೀರದಲ್ಲಿ ಹತ್ತು ಜನದೆದುರು—ಪಬ್ಲಿಕ್ಕಾಗಿ — ಶೂದ್ರ ಹೆಂಗಸರೂ ಸಹ ಹೀಗೆ ಬೈಯ್ಯಲಾರರಲ್ಲಾ. ಮುತ್ತುಸ್ವಾಮಿಯ ಹತ್ತಿರ ಹೇಳಿ ಅವಳನ್ನು ಖಂಡಿಸುವಂತೆ ಹೇಳು. ಇಲ್ಲವಾದರೆ ಉದ್ದಕ್ಕೂ ಹೀಗೆಯೇ ನೋಡು." ಎಂದು ಹೇಳಿ ಕಮಲಾಂಬಾಳ್ ಯಾವ ಉತ್ತರವನ್ನೂ ಕೊಡುವುದಕ್ಕೆ ಮೊದಲೇ ಇದ್ದಕ್ಕೆ ಇದ್ದಹಾಗೆ ಮನೆಗೆ ಹೊರಟುಬಿಟ್ಟಳು ಸುಬ್ಬು.

ಸುಬ್ಬಮ್ಮಾಳ್ ಅವಳ ಪ್ರಸಂಗವನ್ನು ನಾನು ಇದ್ದಹಾಗೆಯೇ ಬರೆಯಲಿಲ್ಲ. ಅವಳ ರಾಗವೂ, ಕಂಠವೂ, ಮಾತನಾಡುವುದರ ಗಾಂಭೀರ್ಯವೂ ನನಗೆ ಬರಲೇ ಅರದು. ಅಲ್ಲದೆ ಮಧ್ಯೆ ಮಧ್ಯೆ ಮುತ್ತಿನ ಸರದಲ್ಲಿ ವಜ್ರದ ಹರಳುಗಳನ್ನಿಟ್ಟಂತೆ ಅನೇಕ ನಾಣ್ಣುಡಿಗಳನ್ನು ಅವಳು ಪ್ರಯೋಗಿಸಿದಳು. ಅವುಗಳನ್ನು ಸ್ವಲ್ಪ ನಾಚಿಕೆಯಿರುವ ಗಂಡಸರು ಉಚ್ಚರಿಸಲು ಕೂಡ ಹಿಂಜರಿಯುವರು. ಅವುಗಳನ್ನು ಇಲ್ಲಿ ಇದ್ದಂತೆ ಬರೆದರೆ ಭಾಷಾ ಮರ್ಯಾದೆಯನ್ನು ಬಲ್ಲ ಸ್ತ್ರೀ ಪುರುಷರಿಗೆ ಈ ನಾಣ್ಣುಡಿಗಳೂ, ಪ್ರಯೋಗಗಳೂ ಬೇಸರವನ್ನುಂಟುಮಾಡುವುವು. ಆದುದರಿಂದ ಇಲ್ಲಿ ಅದೆಲ್ಲವನ್ನೂ ಬರೆಯದೆ ಬಿಟ್ಟಿದ್ದೇನೆ.

## ೬. ಅಂತಃಪುರದ ರಹಸ್ಯಗಳೂ ನಿಶ್ಚಿತಾರ್ಥವೂ

ಸುಬ್ಬು ಹೋದನಂತರ ಕಮಲಾಂಬಾಳ್, "ಒಂದು ಪಾಪವನ್ನೂ ಅರಿಯದ ನಮ್ಮನ್ನು ಇವಳು ಏತಕ್ಕೆ ಹೀಗೆ ಗೋಳಾಡಿಸುತ್ತಾಳೆ? ಜಾತಕ ಹೊಂದದಿದ್ದರೆ ಅದು ನಮ್ಮ ತಪ್ಪೆ? ಅಬ್ಬಬ್ಬಾ—ಇದೇನು ಗ್ರಹಚಾರ!"

ಎಂದು ಹಲವು ಸಲ ನೆನೆಸಿಕೊಂಡು ದುಃಖಗೊಂಡಳು. ಈ ರೀತಿ ಲೋಕದಲ್ಲಿ ಇಷ್ಟು ಕೆಟ್ಟವರಾಗಿ ಮನುಷ್ಯರು ಇರುತ್ತಾರೆಯೆ ಎಂದು ದುಃಖಿಸಿದಳು. ಮದುವೆಯ ನಿಶ್ಚಯಕ್ಕಾಗಿ ಬಂದ ಕೃಷ್ಣಅಯ್ಯರ್, ರಾಮಸ್ವಾಮಿಶಾಸ್ತ್ರಿಗಳು ಇಬ್ಬರಿಗೂ ಸೂಕ್ತವಾದ ಉಪಚಾರಗಳನ್ನು ನಡಸುವುದರಲ್ಲಿ ಯಾವ ಲೋಪವೂ ಇಲ್ಲದಂತೆ ಪಾಯಸ, ಆಂಬೊಡೆ, ಹೋಳಿಗೆ, ಹಪ್ಪಳ ಮೊದಲಾದ ಸಂಭ್ರಮಗಳೊಡನೆ ಹಬ್ಬವನ್ನು ಮಾಡಿದಳು. ಭೋಜನವಾದ ಕೂಡಲೆ ಒಂದು ನಿದ್ದೆ ಮಾಡಿ ಎದ್ದಮೇಲೆ ಅಂಗಡಿಗೆ ಹೋಗಿ ಸಾಮಾನುಗಳನ್ನು ಕೊಂಡುಕೊಂಡು ಆ ಸಾಯಂಕಾಲವೇ ನಿಶ್ಚಿತಾರ್ಥ ಮುಗಿಸೋಣವೆಂದು ಹೇಳುತ್ತ ಮುದುಕರಿಬ್ಬರೂ ಒಂದೊಂದು ಜಗುಲಿಯಲ್ಲಿ ಒಬ್ಬರು ನಿದ್ದೆ ಮಾಡತೊಡಗಿದರು. ಮುತ್ತುಸ್ವಾಮಿ ಅಯ್ಯರಾದರೋ ಒಳಗೆ ಪಡಸಾಲೆಯಲ್ಲಿ ಕಮಲಾಂಬಾಳ್ ಊಟ ಮಾಡುವ ಸ್ಥಳಕ್ಕೆ ಎದುರಾಗಿ ಜಮಖಾನೆ ಹಾಸಿ—ಒಂದು ಕಂಬಕ್ಕೆ ದಿಂಬುಹಾಕಿ, ಅದರ ಮೇಲೆ ವಾಲಿಕೊಂಡು ತನ್ನ ಮೆಚ್ಚಿನ ಹೆಂಡತಿಯನ್ನು ನೋಡುತ್ತ ಉಲ್ಲಾಸದಿಂದ, "ಬಂದಿರುವಾತ ನಮ್ಮ ಮಾವನಲ್ಲವೆ? ನಿಮ್ಮ ಮಾವ ಬಂದರೆ ಏನು ಮಾಡುತ್ತೀ?" ಎಂದು ಹೇಳಲು ಆ ಮಹಿಳಾ ಶಿರೋಮಣಿ, "ಕಣ್ಣು ಮುಚ್ಚಿಕೊಂಡು ನೋಡಿ. ನಮ್ಮ ಮಾವಾ ಅವರು ಊರಲ್ಲಿಲ್ಲ! ನಿಮ್ಮ ಮಾವ ಊರಲ್ಲಿ ಇದ್ದಾರೆಯೆ? ಇಲ್ಲದಿದ್ದರೆ ಏನು ಮಾಡುತ್ತೀರಿ?" ಎಂದು ಹೇಳುತ್ತಿರುವಾಗಲೇ ಸುಂದರನು ಸದ್ದು ಮಾಡದೆ ಹಿಂದಿನಿಂದ ಮೆತ್ತಗೆ ನುಸುಳಿಕೊಂಡು ಬಂದು ದನಕ್ಕೆ ಕಟ್ಟುವ ಒಂದು ಹಗ್ಗವನ್ನು ಕತ್ತಿಗೆ ಸುತ್ತಿ ಮೇಲಿನ ದೂಲಕ್ಕೆ ಎಳೆದು ಕಟ್ಟಿಬಿಟ್ಟನು. ಮುತ್ತುಸ್ವಾಮಿ ಅಯ್ಯರ್, "ಎಲಎಲಾ — ಬಿಟ್ಟು ಬಿಡೋ — ನಾನು ಸತ್ತೆ, ಬಿಟ್ಟುಬಿಡೋ" ಎಂದು ಹೇಳಿದರು. ಹುಡುಗನು "ಬಿಡುವುದಿಲ್ಲ" ಎಂದನು. ಮುತ್ತುಸ್ವಾಮಿ ಅಯ್ಯರ್ "ನಾನು ಬಿಡು ಎನ್ನುತ್ತೇನೆ — ನೀನು ಇಲ್ಲವೆನ್ನುತ್ತೀಯಾ? ಇಗೋ ನೋಡು, ಈ ಹಗ್ಗವನ್ನು ಬಿಚ್ಚಿಬಿಡು." ಎಂದರು. ಕಮಲಾಂಬಾಳ್, "ಹಾಗೆಯೇ, ಹಾಗೆಯೇ — ಚೆನ್ನಾಗಿ ಕಟ್ಟಿಹಾಕು. (ತಲೆಯನ್ನು ಆಡಿಸುತ್ತ) ಸಿಕ್ಕಿಕೊಂಡರಲ್ಲಾ, ವಿಟ್ಠಲ ಭಟ್ಟರು—ಸಿಕ್ಕಿಕೊಂಡರಲ್ಲಾ!" ಎಂದು ಪಲ್ಲವಿಯನ್ನು ಹಾಡಲು ತೊಡಗಿ

ದಳು. ಅಷ್ಟರಲ್ಲಿ ಸುಂದರನು ಸ್ವಲ್ಪದೂರ ಸರಿದು ನಿಂತುಕೊಂಡು, "ಪೈ ಪೈ, ಚುರ್‍ರಿ, ಡುರ್‍ರಿ — ನಿಂತು ಗುತ್ತಿ ಎತ್ತು — ಡುರ್‍ರಿ..." ಎಂದನು.

ಮಧುರೆ, ತಿರುನಲ್ವೇಲಿ ಜಿಲ್ಲೆಗಳಲ್ಲಿ 'ಜೆಲ್ಲಿ ಕಟ್ಟು' ಎಂದು ಒಂದು ತಮಾಷೆ ಉಂಟು. ಅದೇನೆಂದರೆ ಇನ್ನೂರು ಮುನ್ನೂರು ದನಗಳನ್ನು ಒಂದು ಆವರಣದಲ್ಲಿ ಕೂಡಿಹಾಕಿ ಅವುಗಳ ಕತ್ತಿನಲ್ಲಿ ಒಂದು ಕುಣಿಕೆ ಹಾಕಿ ಒಂದೊಂದಾಗಿ ಹೊರಕ್ಕೆ ಬಿಟ್ಟು ಹಿಡಿಯುವುದು. ಅದು ಹಳ್ಳಿಯ ಜನರಿಗೆ ಒಂದು ದೊಡ್ಡ ಹಬ್ಬವಾದುದರಿಂದ ಸಾವಿರಗಟ್ಟಲೆಯ ಜನರು ಬಂದು ಸೇರುವರು. "ಜೆಲ್ಲಿ ಕಟ್ಟು" ಎಂದು ಹೇಳಿದರೆ ಸಾಕು. ಅವರಿಗೆ ಆಗುವ ಉತ್ಸಾಹಕ್ಕೆ ಎಣೆಯೇ ಇಲ್ಲ. ಯಾವ ಕೆಲಸವಿದ್ದರೂ ಎಲ್ಲವನ್ನೂ ಒತ್ತಟ್ಟಿಗಿಟ್ಟು ಗಂಧವನ್ನು ಬಳಿದುಕೊಂಡು ವಾಸನೆ ಪಚ್ಚೆತೆನೆಯ ಹಾರಗಳನ್ನು ಧರಿಸಿಕೊಂಡು, ಕೆಂಪು ರುಮಾಲುಗಳನ್ನು ಕಟ್ಟಿಕೊಂಡು, ಅಂಚಿನ ವಸ್ತ್ರಗಳನ್ನುಟ್ಟುಕೊಂಡು, ಬೆರಳುಗಳಿಗೆಲ್ಲ ಬೇಕಾದಷ್ಟು ಬೆಳ್ಳಿ ಉಂಗುರಗಳನ್ನು ಹಾಕಿಕೊಂಡು— ಇಷ್ಟು ಸಂಭ್ರಮ ಸಹಿತವಾಗಿ ಸಣ್ಣ ಸಣ್ಣ ಗುಂಪುಗಳಾಗಿ ಕೈಯಲ್ಲಿ 'ಚೋಟಾ ದುಡಿ'ಗಳನ್ನು ಹಿಡಿದುಕೊಂಡು ಹೊರಟು ಬಂದು— ಮರದ ರೆಂಬೆಗಳ ಮೇಲೆ ಗಾಡಿಗಳ ಗೂಡುಗಳಲ್ಲಿ, ಮನೆಗಳ ಛಾವಣಿಗಳ ಮೇಲೆ, ಗೋಡೆಗಳ ಪಕ್ಕದಲ್ಲಿ, ದಾರಿಗಳಲ್ಲಿ ಎಲ್ಲೆಲ್ಲಿಯೂ ನಿಬಿಡವಾಗಿ ತುಂಬಿಬಿಡುವರು. ಗಂಡಸರಿಗೆ ಮಾತ್ರ ಈ ಉತ್ಸವವೆಂದು ಭಾವಿಸಬೇಡಿ. ಸ್ತ್ರೀಯರು ಸಹ ಮೂಗಿರುವ ಮನುಷ್ಯರನ್ನು ದನಿ ಹೋಗುವಷ್ಟು ದೂರ ಅಟ್ಟಬಲ್ಲ ಹಳದಿ ತೈಲ, ಬೇವಿನೆಣ್ಣೆ, ಮುಂತಾದ 'ವಾಸನೆ' ತೈಲಗಳನ್ನು ಬಳಿದುಕೊಂಡು ಸೇವಂತಿಗೆ ಹೂವಿನ ಸರ, ಹೊಸ ಸೀರೆ, ಪಾಶಿಮಣಿ, ಬಿಚ್ಚೋಲೆ ಮುಂತಾದ ಸರ್ವಾಭರಣ ಭೂಷಿತರಾಗಿ ಪುರುಷರೊಡನೆ ಭೇದವಿಲ್ಲದೆ ಬಂದು ನಿಂತುಬಿಡುವರು. ಹೊಳೆಯುವಂತೆ ಹಸನುಮಾಡಿದ, ತೈಲಗಳನ್ನು ಸವರಿರುವ, ಕೋಲುಗಳನ್ನು ಹಿಡಿದುಕೊಂಡು, ಮೈಮೇಲೆಲ್ಲ ಬೇಕಾದಷ್ಟು ಹೂಮಾಲೆಗಳನ್ನು ಹಾಕಿಕೊಂಡು, ಕತ್ತಿನಲ್ಲಿ ವಸ್ತ್ರ ಧರಿಸಿ, ಗಂಭೀರವಾದ ನಡಿಗೆಯಿಂದಲೂ, ಭಯಂಕರವಾದ ದೃಷ್ಟಿಯಿಂದಲೂ ನೋಡಿದವರು ವೃಷಭರಾಜರೆಂದು ಹೇಳಬಹುದಾದ ಉತ್ತಮ ರಾಸಿನ ಹೋರಿಗಳು ಆವರಣದಲ್ಲಿ ಗುಂಪು ಸೇರು

ವುದೂ, ಅಲ್ಲಿ ನಿಂತು ಕತ್ತಿನಲ್ಲಿ ಕುಣಿಕೆ ಹಾಕಿದ ಕೂಡಲೆ ಒಂದೇ ಓಟವಾಗಿ ಓಡುವುದೂ, ಕೆಲವು ಜನರು ತಮ್ಮ ಪ್ರಾಣವನ್ನೂ ಲೆಕ್ಕಿಸದೆ ಅವುಗಳ ಮೇಲೆ ಹಾಯುವುದೂ, ಹಿಡಿಯುವುದೂ, ಕತ್ತಿನಲ್ಲಿ ಸುತ್ತಿದ್ದ ವಸ್ತ್ರವನ್ನು ಬಿಚ್ಚಿ ಕೊಂಡು 'ಹಾಯ್' ಎಂದು—ಆ ಜನರನ್ನು ಹೋರಿಗಳು ಎತ್ತಿಹಾಕಿ ಅಲಕ್ಷ್ಯವಾಗಿ ಓಡುವುದೂ, ನಾಗರಿಕತೆಯಿಲ್ಲದ ಆ ಜನರಿಗೆ ಕಣ್ಣುತುಂಬ ನೋಡುವ ದೃಶ್ಯವಾಗಿರುವುದು. ಆ ಹೋರಿಗಳಲ್ಲೆಲ್ಲ ಜನರ ಗುಂಪನ್ನು ನೋಡಿ ಬೆದರಿ ಓಡದೆ, ಇದ್ದಲ್ಲಿಯೇ ನಿಂತು ಹಾಯುವ ಹೋರಿಗೆ "ನಿಂತು ಹಾಯುವ ಹೋರಿ" ಎಂದು ಹೇಳುವುದು ರೂಢಿ. ವಿಶೇಷ ಸಂತೋಷವ ನ್ನುಂಟುಮಾಡಬಲ್ಲ ಈ 'ನಿಂತು ಹಾಯುವ ಹೋರಿ' ಒಂದು ಬಂದದ್ದೇ ಆದರೆ, ಮೂಲೆಗೊಬ್ಬರಾಗಿ ಅದನ್ನು 'ಡುರ್ರ್, ಡುರ್ರ್' ಎಂದು ರೇಗಿಸಿ, ಕೆರಳಿಸಿ ವಿನೋದವನ್ನು ಅನುಭವಿಸುವರು.

ಹಾಗೆಯೇ ಮುತ್ತುಸ್ವಾಮಿ ಅಯ್ಯರ್ ಕತ್ತಿನಲ್ಲಿ ಹಗ್ಗವನ್ನು ಕಟ್ಟಿ ಕಮಲಾಂಬಾಳ್ 'ಬೇಷ್, ಬೇಷ್' ಎಂದು ನಗುತ್ತಿರಲು, ಸುಂದರನು ಅವರನ್ನು 'ಡುರ್ರ್' ಎಂದು ರೇಗಿಸಿದನು. ಅವರು, ಏನು ಮಾಡುತ್ತಾನೋ ನೋಡೋಣವೆಂದು ತಲೆಯನ್ನು ಬಗ್ಗಿಸಿಕೊಂಡು ಮುಗುಳ್ನಗೆ ನಗುತ್ತ ಸುಮ್ಮನಿರಲು, ಹುಡುಗನು, "ಅಪ್ಪಾ—ತಿವಿ—ನೀನು ಹೋರಿಯಂತೆ, ಹಾಯುವೆಯಂತೆ." ಎಂದು ತಮಾಷೆಯಾಗಿ ಹೇಳಿದನು. ಆಗಲೂ ಅವರು ಸುಮ್ಮನಿದ್ದರು. ಅವರ ಹೆಂಡತಿ, "ಈ ಹೋರಿ ಹೀಗೇ ಇರುವುದು. ಈ ಬಾರುಕೋಲು ತೆಗೆದುಕೋ." ಎಂದು ಹೇಳಿದಳು. ಸುಂದರನು ಹಗ್ಗವನ್ನು ಬಿಗಿಯಾಗಿ ಹಿಡಿದು ಎಳೆದು ಬಾರುಕೋಲನ್ನು ಬೀಸುತ್ತ "ಹೈ-ಹೈ" ಎಂದು ಓಡಿಸಲು ತೊಡಗಿದನು. ಅಯ್ಯರ್, "ಇದೇನೊ, ಈ ಹುಡುಗ!" ಎಂದು ಹೇಳುತ್ತ ಸುಂದರನನ್ನು ನೋಡಿ "ನಾನು ದನವಲ್ಲಪ್ಪ. ಅವಳೇ ದನವಂತೆ. ಈ ಹಗ್ಗವನ್ನು ಅವಳ ಕತ್ತಿಗೆ ಕಟ್ಟು. ನೀನೂ, ನಾನೂ ಓಡಿಸೋಣ." ಎಂದು ಹೇಳಿದರು. ಅದಕ್ಕೆ ಸುಂದರನು "ಹೌದಪ್ಪಾ" ಎಂದು ಹೇಳಿ, ಅವರ ಕತ್ತಿನಲ್ಲಿದ್ದುದನ್ನು ಬಿಚ್ಚಿ ಊಟ ಮಾಡುತ್ತಿದ್ದ ಕಮಲಾಂಬಾಳ್ ಕತ್ತಿಗೆ ಹಾಕಿ ಅವಳನ್ನು ಓಡಿಸಲಾರಂಭಿಸಿದನು. ಕಮಲಾಂಬಾಳ್, "ನಾನು

ಹೆಂಗಸು! ನಾನೇನು ದನವೆ? ಅಪ್ಪಾ, ಅವರೇ ದನ — ಅವರನ್ನು ನೋಡುತ್ತ—ರುಮಾಲು ಕಟ್ಟಿದ ಕೊಬ್ಬಿದ ಹೋರಿ. ಅವರನ್ನು ಓಡಿಸು." ಎಂದು ಹೇಳಿದಳು. ಸುಂದರನು ಈ ದನದ ಆಟವನ್ನು ಮರೆತು, "ಇಗೋ ನೋಡು: ಇದು ನನ್ನ ಬೆತ್ತ. ಬೇಷಾಗಿದೆ— ನಾನು ಹೊಡೆಯುತ್ತೇನೆ. "ನೀ ಅಳಮ್ಮಾ—ಅಳು" ಎಂದು ಹೇಳಿದನು. ಅವಳು, "ಆಗಲಿ ಅಪ್ಪಾ, ಅಳುತ್ತೇನೆ." ಎಂದು ಹೇಳಲು ಅವನು ಅವಳನ್ನು ಹೊಡೆದನು.

ಸುಂದರನ ಬಳಿ ಇದ್ದ ಸಾಮಾನುಗಳನ್ನು ನೋಡಿದರೆ ಬಹಳ ವಿನೋದ ವಾಗಿರುವುದು. ಒಂದು ತೂತಿದ್ದ ತೆಂಗಿನ ಚಿಪ್ಪು, ಒಂದು ಹಗ್ಗ, ಒಂದು ಬಳಪದ ಕಲ್ಲು, ಒಂದು ಪೆನ್ಸಿಲ್, ಒಂದು ಬಿಳೀಕಲ್ಲು, ಒಂದು ಮುರಿದ ಬುಗುರಿ, ಎರಡು ಗೋಲಿಗಳು, ಒಂದು ಬಟ್ಟೆಯ ಚೆಂಡು.—ಇಂತಹ ಅನೇಕ ವಸ್ತುಗಳು ಅವನಲ್ಲಿದ್ದುವು. ಅವನಿಗೆ ಇವೇ ಐಶ್ವರ್ಯ. ಉದ್ಯೋಗಸ್ಥರು ಒಳಗೆ ಷರ್ಟು, ಮೇಲೆ ಅಂಗಿ, ಕರವಸ್ತ್ರ, ಇಜಾರು, ಜೋಡು, ಛತ್ರಿ, ರುಮಾಲು, ಗಡಿಯಾರ ಮೊದಲಾದ ವೇಷಗಳೊಡನೆ ಕಚೇರಿಗೆ ಹೋಗು ವಂತೆ ಸುಂದರನು ದನದ ಹುರಿ, ಹಗ್ಗ, ಕಟ್ಟಿಗೆ ಮುಂತಾದ ಗೌರವ ಚಿಹ್ನೆಗ ಳೊಡನೆ ಆಟವಾಡಲು ಹೋಗುವನು. ಮುತ್ತುಸ್ವಾಮಿ ಅಯ್ಯರನ್ನೂ ಅವರ ಹೆಂಡತಿಯನ್ನೂ ಕಂಡರೆ ಅವನಿಗೆ ಬಹಳ ಉತ್ಸಾಹ ಉಂಟಾಗುತ್ತಿತ್ತು. ಅವರು ಅವನಿಗೆ ಮುಖ್ಯವಾದ ಆಟದ ಜೊತೆಗಾರರು. ಅವನೊಡನೆ ಕಣ್ಣು ಮುಚ್ಚಾಲೆ, ಚಿನ್ನಿಕೋಲು ಮೊದಲಾದ ಆಟಗಳನ್ನು ಆಡುವಾಗ ಬಹಳ ವಿನೋದವಾಗಿರುವುದು.

ಅವನು ಕಮಲಾಂಬಾಳನ್ನು ಹೊಡೆದ ಕೂಡಲೆ, ಕಮಲಾಂಬಾಳ್ ಅಳುವಂತೆ ನಟಿಸಿದಳು. ಇದರಿಂದ ಅವನು ಬಹಳ ತೃಪ್ತಿ ಹೊಂದಿದವನಾಗಿ ಮುತ್ತುಸ್ವಾಮಿ ಅಯ್ಯರ ಬಳಿ ಬಂದು "ಕಾಸು ಕೊಡಪ್ಪಾ" ಎಂದು ಅವರ ಬೆನ್ನಿನ ಮೇಲೆ ಹತ್ತಿ ಅವರ ಕುಡುಮಿಯನ್ನು (ತಲೆಯ ಗಂಟು ಜುಟ್ಟನ್ನು) ಎಳೆಯಲು ಯತ್ನಿಸಿದ. ಕಮಲಾಂಬಾಳ್ ಊಟವನ್ನು ಮುಗಿಸಿ ಎದ್ದು ಕೈ ತೊಳೆದುಕೊಂಡು ಗಂಡನ ಬಳಿ ಕುಳಿತುಕೊಂಡಳು. ಸ್ವಲ್ಪಹೊತ್ತಿಗೆ ಅವಳು ಇದ್ದಕ್ಕಿದ್ದ ಹಾಗೆ ಒಂದು ನಿಟ್ಟುಸಿರನ್ನು ಬಿಟ್ಟಳು. ಅವಳ ವಿಶಾಲ

ವಾದ ಮುಖ ಮಾರ್ಪಾಡು ಹೊಂದಿದುದನ್ನು ಕಂಡ ಅಯ್ಯರ್, "ಯಾಕೆ, ಏನು ಸಮಾಚಾರ ?" ಎಂದು ಕೇಳಲು, ಅವಳು, "ಏನೂ ಇಲ್ಲ" ಎಂದು ಹೇಳಿದಳು. ಅವರು ಮತ್ತೊಮ್ಮೆ ಒತ್ತಾಯ ಮಾಡಿ ಕೇಳಲು, ಅವಳು ತನ್ನ ಮನಸ್ಸಿನ ದುಃಖವನ್ನು ಅವರಿಗೂ ಹೇಳಿ ಅವರ ಮನಸ್ಸೂ ಕಲಕುವಂತೆ ಏಕೆ ಮಾಡಬೇಕೆಂಬ ಭಾವನೆಯಿಂದ ಮತ್ತೆ "ಏನೂ ಇಲ್ಲ" ಎಂದು ಹೇಳಿದಳು. ಅವರು ಅವಳನ್ನು "ಹೇಳಿಯೇ ತೀರಬೇಕು" ಎಂದು ನಿರ್ಬಂಧ ಪಡಿಸಿದರು. ಅವಳು, "ನನಗೆ ತಿಳಿಯದೆಯೇ ನನಗೆ ದುಃಖವುಂಟಾಗುತ್ತದೆ. ಇವತ್ತು ಬೆಳಗಾಗಿದ್ದು ಚೆನ್ನಾಗಿಲ್ಲ. ನಾನು ಸುಂದರನನ್ನು ಅವರ ಅಮ್ಮನ ಬಳಿ ಹೋಗಬೇಡವೆಂದು ಬೋಧಿಸುವೆನಂತೆ. ಅವನನ್ನು ಮುದ್ದಾಗಿ ಬೆಳೆಯಿಸಿ ಕೆಡಿಸಿರುವೆನಂತೆ. ನಾನು ತಟವಾಣಿ ಮುಂಡೆಯಂತೆ. ಇದು ನನಗೆ ದೊರೆತ ಮರ್ಯಾದೆ." ಎಂದು ಹೇಳಿದಳು. ಅವರು ಸುಂದರನಿಗೆ "ತಾಳು" ಎಂದು ಹೇಳಿ, "ಹಾಗೆ ಹೇಳಿದುದು ಯಾರು ?" ಎಂದು ಕೇಳಲು, ಅವಳು, "ಯಾರು ಹೇಳುತ್ತಾರೆ ? ಹಾಗೆ ಹೇಳಲು ಸ್ವಾತಂತ್ರ್ಯವಿರುವವರು ತಾನೆ ?" ಎಂದು ಹೇಳಿದಳು.

ಅಯ್ಯರಿಗೆ ಕೂಡಲೆ ಮುಖ ಕೆಂಪೇರಿತು. "ಆರಂಭಿಸಿದೆಯಾ, ಸ್ಥಲ ಪುರಾಣವನ್ನು ! (ಹಲ್ಲು ಕಡಿಯುತ್ತ) ಗೊತ್ತಲ್ಲ ನಿನ್ನ ಸಮಾಚಾರ—ಕಲಹವೇ ಪ್ರಧಾನ" ಎಂದು ಕೋಪಿಸಿಕೊಂಡರು. "ನನ್ನನ್ನು ಬೈಯ್ಯದಿದ್ದರೆ ನಿಮಗೆ ಹೊತ್ತು ಹೋಗುವುದಿಲ್ಲ" ಎಂದು ಕಮಲಾಂಬಾಳ್ ಹೇಳಿದಳು.

ಅದಕ್ಕೆ ಮುತ್ತುಸ್ವಾಮಿ ಅಯ್ಯರ್, "ಹೆಂಗಸರಿಗೆ ಕಲಹವೇ ಕಸಬು ! ಶುದ್ಧ ನಾಯಿಗಳು. ಅಬ್ಬಾ ! ಅದರಲ್ಲಿಯೂ ನೀನು..." ಎಂದು ಹೇಳಿ ಮುಗಿಸುವುದರೊಳಗೆ ಅವಳು ನಗುತ್ತ "ಗಂಡಸರೇ ಒಳ್ಳೆಯವರು. ಪರಮ ಸಾಧುಗಳು." ಎಂದು ಹೇಳಿದಳು. ಅಯ್ಯರು ಉಕ್ಕಿ ಬರುತ್ತಿದ್ದ ಕೋಪದಿಂದ "ಹೌದು, ಹೌದು, ಹೌದು, ಹೌದು ! ಗಂಡಸರು — ಹೀಗೆ ಚಾಡಿ ಚುದ್ರ ಹೇಳಿಕೊಂಡು ತಿರುಗುತ್ತಾರೆ ! ಅಬ್ಬಾ! ಈ ಹೆಂಗಸರೊಡನೆ ಸಹವಾಸ ಮಾಡುವುದಕ್ಕಿಂತಲೂ, ಕತ್ತೆಯನ್ನು ಕಟ್ಟಿ ಮೇಯಿಸಬಹುದು. ಛೀ ! ದಣಿವಿಲ್ಲದೆ ಇದೇ ಕಸಬೆ ! ನಮಗೆ ಚೆನ್ನಾಗಿ ಬಂದು ವಕ್ರಿಸಿತು ಶನಿ, ಯಾವುದು ಸಮಯ ಎಂದು ನೋಡುತ್ತಿದ್ದು ಕಲಹವನ್ನುಂಟುಮಾಡುವುದಕ್ಕೆ ! ಸ್ವಲ್ಪ

ವಾದರೂ ಬುದ್ಧಿ ಇದೆಯೋ ನೋಡು– ಕಲಹದ ಕತ್ತೆ" ಎಂದು ಹಲ್ಲು ಕಡಿಯುತ್ತ ಹಲವು ಬಗೆಯಾಗಿ ಬೈಯಲು ತೊಡಗಿದರು.

ಕಮಲಾಂಬಾಳ್:- ( ಸಹಿಸಲಾರದವಳಾಗಿ ಸ್ವಲ್ಪ ಆತುರದೊಡನೆ ) "ಎತ್ತಿದುದಕ್ಕೆಲ್ಲ ಕೋಪವೆಂದರೆ ಆಮೇಲೆ ಏನು ಮಾಡೋದು ?"

ಅಯ್ಯರ್: - "ಬಾಯಿ ಮುಚ್ಚು ಶನಿಯೇ ! ಮಾಡಿದುದೆಲ್ಲವನ್ನೂ ಮಾಡಿದ ಮೇಲೆ ಎತ್ತಿದುದಕ್ಕೆಲ್ಲಾ ಕೋಪಿಸಿಕೊಳ್ಳುತ್ತೇನಂತೆ. ನನ್ನನ್ನು ಹುಚ್ಚು ಹಿಡಿದವನೆಂದು ತಿಳಿದಿದ್ದೀಯಾ? ಹಾಗೆಯೇ ನೆನೆದಂತಿದೆ ! ಕತ್ತೆ, ಹಾಳಾಗಿ ಹೋಗು, ಶನಿ !"

ಕಮಲಾಂಬಾಳ್: "ನಾನು ಹಾಳಾಗಿ ಹೋಗುತ್ತೇನೆ. ಆಮೇಲೆಯಾದರೂ ನೀವು ಸುಖವಾಗಿರಿ." ಎಂದ ಕೂಡಲೆ ಮುಂಗೋಪಿಯಾದ ಮುತ್ತುಸ್ವಾಮಿ ಅಯ್ಯರ್, "ಆ ಇಷ್ಟೇ ತಾನೇ ಗೊತ್ತು ! ನೀನು ಹೋದರೆ ಸಂಸಾರ ಕೆಟ್ಟುಹೋಗುವುದೆಂದು ಹೆದರಿಸುತ್ತೀಯಾ ? ತೊಲಗು ಶನಿ!" ಎಂದು ಒಂದು ಏಟುಹಾಕಿ ಆ ಕಡೆ ತಳ್ಳಿದರು. ತಳ್ಳಿದ ಕೂಡಲೆ, ಪಾಪ ಕಮಲಾಬಾಂಳ್ ಗಳಗಳನೆ ಕಣ್ಣೀರು ಸುರಿಸಿ ಅಳಲಾರಂಭಿಸಿದಳು.

ಮುತ್ತುಸ್ವಾಮಿ ಅಯ್ಯರಿಗೆ ತನ್ನ ಹೆಂಡತಿಯ ಮೇಲೆ ಪ್ರೀತಿಯೇನೋ ಬಹಳವಿತ್ತು. ಆದರೆ, ಅವಳಲ್ಲಿ ಒಂದು ಅಲ್ಪ ದೋಷವಿದ್ದರೂ ಸಹಿಸಲಾರರು. ಲೋಕದಲ್ಲಿರುವ ಎಲ್ಲ ಸ್ತ್ರೀಯರಿಗಿಂತಲೂ ಅವಳು ಗುಣದಿಂದ ಶ್ರೇಷ್ಠಳಾಗಿರಬೇಕೆಂಬುದೇ ಅವರ ಮುಖ್ಯ ಆಶೆ. ಆ ಆಸೆಗೆ ವಿರೋಧವಾಗಿ ಅವಳಲ್ಲಿ ಇತರ ಹೆಂಗಸರಲ್ಲಿರುವಂತಹ ದೋಷವೇನಾದರೂ, ಒಂದು ಸಣ್ಣ ಲೋಪವಾದರೂ ಇರುವಂತೆ ಕಂಡರೆ ಅವರಿಗೆ ಬಹಳ ಕೋಪ ಬಂದುಬಿಡುವುದು, ಹೆಂಗಸರೇ ಕೆಟ್ಟವರೆಂಬ ಅಭಿಪ್ರಾಯ ಅವರದು. ಅವರು ಬಹಳ ವಿಶ್ವಾಸದಿಂದ ಪೋಷಿಸಿಕೊಂಡು ಬಂದ ಆಭಿಪ್ರಾಯಗಳಲ್ಲಿ ಇದೂ ಒಂದು. ಆದುದರಿಂದ ತನ್ನ ಹೆಂಡತಿ ಇತರ ಸ್ತ್ರೀಯರಂತೆ ಅಲ್ಪತನವುಳ್ಳವಳೆಂದಾಗಲಿ, ಚಾಡಿ ಹೇಳುವವಳೆಂದಾಗಲಿ, ಅವರಿಗೆ ಸೂಕ್ಷ್ಮವಾಗಿ ಕಂಡುದೇ ಆದರೆ ಅದೇ ಸಾಕು. ಅಂದು ಅನರ್ಥವೇ. ಅವರ ಮುಂಗೋಪವನ್ನು ಅವರ ಹೆಂಡತಿಯನ್ನುಳಿದು ಬೇರೊಬ್ಬರೂ ಅರಿಯರು. ಕೆಲವು ಗಂಡಸರು ಇತರರೊಂದಿಗೆ

ವ್ಯವಹರಿಸುವಾಗ ಬಹು ಶಾಂತಮೂರ್ತಿಗಳಾಗಿದ್ದುಕೊಂಡು, ತಮ್ಮ ಪತ್ನಿಯರೊಂದಿಗೆ ಮಾತ್ರ ತಮ್ಮ ಕೋಪವನ್ನು ತೋರಿಸುವ ವಿಷಯ ನಮ್ಮ ಅನುಭವದಲ್ಲಿ ಬಂದೇ ಇದೆ. ಮುತ್ತುಸ್ವಾಮಿ ಅಯ್ಯರ್ ಪದೇ ಪದೇ ತನ್ನ ಹೆಂಡತಿಯ ಮೇಲೆ ಕೋಪಿಸಿಕೊಂಡರೂ, ಆ ಕೋಪವನ್ನು ಆಕೆ ಅನೇಕ ವೇಳೆ ಶಾಂತಗೊಳಿಸುವಳು. ಒಮ್ಮೊಮ್ಮೆ ಅವಳೂ ದುಃಖದಲ್ಲಿ ಮುಳುಗಿ ಹೋದರೆ ಅವರ ಕೋಪ ಮತ್ತಷ್ಟು ಹೆಚ್ಚಿ, "ಅಯ್ಯೋ! ನಾನು ಏನೋ ಮೋಸ ಹೋಗಿ ಮದುವೆ ಮಾಡಿಕೊಂಡೆನಲ್ಲಾ" ಎಂದು ಅವರಿಗೆ ತೋರುವುದುಂಟು. ಅದು ಅವರ ಗುಣವಿಶೇಷಗಳಲ್ಲಿ ಒಂದು. ಆದರೆ, ಅವರ ಕೋಪ ಬೇಗ ಶಾಂತಗೊಳ್ಳುವುದು. ಕೂಡಲೆ ಅವರ ಹೆಂಡತಿ ತನ್ನ ದುಃಖವನ್ನು ಮರೆತು ಅವರ ಬಳಿ ಸಲಿಗೆಯಿಂದ ಹೋಗಿ ಅವರನ್ನು ತಂಪಾದ ಮಾತುಗಳಿಂದ ಸಂತಸಗೊಳಿಸುವಾಗ "ನನ್ನ ಚಿನ್ನ, ನಿನಗೆ ಸಮಾನಳು ನೀನೇ. ಈ ಲೋಕದಲ್ಲಿ ನನ್ನಂತಹ ಭಾಗ್ಯಶಾಲಿ ಯಾರು?" ಎಂದು ಅವಳ ಬಳಿ ನೆಚ್ಚಿನಿಂದ ಮಾತನಾಡುವರು.

ಈ ಪ್ರಪಂಚದಲ್ಲಿ ಒಳ್ಳೆಯದೂ ಕೆಟ್ಟದ್ದೂ ಹೇಗೆ ಸಮವಾಗಿ ಬೆರೆತಿರುವುದೋ ಹಾಗೆಯೇ ನಮ್ಮ ಅಯ್ಯರಿಗೆ ಈ ವಿಧದಲ್ಲಿ ಸುಖವೂ ದುಃಖವೂ ಬೆರೆತಿದ್ದುವು. ತನ್ನನ್ನು ಒಂದು ಬಗೆಯಲ್ಲಿ ಬೈದುದನ್ನು ಇವರೊಡನೆ ಹೇಳಲು ಕಮಲಾಂಬಾಳ್ ಬಾಯಿ ತೆರೆದಾಗಲೇ ಅವಳು ಏನೋ ಕಲಹವನ್ನುಂಟು ಮಾಡಲು ಯತ್ನಿಸುವಂತೆ ಇವರ ಬುದ್ಧಿಗೆ ತೋರಿ ಇವರಿಗೆ ಕೋಪ ಉಂಟಾಯಿತು. ಆಗ ಆಕೆ ಸಮಯವನ್ನರಿತು ಸಂತೋಷದ ಮಾತುಗಳಿಂದ ಇವರ ಕೋಪವನ್ನು ಹೋಗಲಾಡಿಸಲಾಗದುದರಿಂದ ಅವರ ಕೋಪ ಮತ್ತಷ್ಟು ಹೆಚ್ಚಿತು. ಅವಳು ಅಳುವುದಕ್ಕೆ ತೊಡಗಿದ ಕೂಡಲೇ ಅಯ್ಯರ್ ಹಲ್ಲನ್ನು ಕಡಿಯುತ್ತ, "ಈಕೆಯ ಸಾಹಸ ನೋಡಿ. ಮಾಡಿದುದೆಲ್ಲವನ್ನೂ ಮಾಡಿದ ಮೇಲೆ ಅಳಲು ಆರಂಭಿಸಿದ್ದಾಳೆ. ದೊಡ್ಡ ಕೊಳಗಳ ತೂಬು ತೆರೆದಂತಿದೆ. ಛಳು! ಮೂದೇವಿ! ಕತ್ತೆ." ಎಂದು ಮತ್ತೆ ಹೊಡೆದು ಆಚೆಗೆ ತಳ್ಳಿದರು. ಅವಳು ಇನ್ನೂ ಹೆಚ್ಚಾಗಿ ಅತ್ತಳು. ಅದನ್ನು ನೋಡಿ ಸುಂದರನೂ ಭಯದಿಂದ ಕಂಪಿಸಿದನು. ಕೈಲಿದ್ದ ಹಗ್ಗವನ್ನು ಬಿಸುಟು ತನ್ನ

ದೊಡ್ಡಮ್ಮನನ್ನು ತಬ್ಬಿಕೊಂಡು ಕೋಪದಿಂದ ಕೆಂಪಾದ ತನ್ನ ದೊಡ್ಡಪ್ಪನ ಮುಖವನ್ನು ಓರೆಗಣ್ಣಿನಿಂದ ನೋಡಿ ಕುಗ್ಗಿ ಹೋದನು. ಈ ರೀತಿ ಸ್ವಲ್ಪ ಕಾಲ ಕಳೆಯಲು ಮುತ್ತುಸ್ವಾಮಿ ಅಯ್ಯರವರ ಮನಸ್ಸು ಕೋಪದಿಂದ ಸ್ವಲ್ಪ ನಿವೃತ್ತಿ ಹೊಂದಿ ಮೃದುವಾಗತೊಡಗಿತು. ಅವರು ತನ್ನ ಹೆಂಡತಿ ಯನ್ನು ಸಮೀಪಿಸಿ "ಏತಕ್ಕೆ ಅಳುತ್ತೀಯೆ?" ಎಂದು ಎರಡು ಸಲ ಜಬರಿಸಿ ಕೊಂಡು, "ನಿನ್ನನ್ನು ಯಾರು ಏನು ಅಂದರು? ಈಗ ಏತಕ್ಕೆ ಅಳುತ್ತೀಯೆ? ನಿಷ್ಕಾರಣವಾಗಿ ಅಳುವೆಯಲ್ಲಾ? ಇದಕ್ಕೇ ನನಗೆ ಕೋಪ ಬರುವುದು. ಅಳಬೇಡವೇ. ಈ ಹೊತ್ತಿಗೆ ಇಷ್ಟುಸಾಕು, ನಿಲ್ಲಿಸು." ಎಂದರು. ಮತ್ತೆ ಅರ್ಧ ಬೇಸರದಿಂದ, "ಇಷ್ಟೇ ನಮಗೆ ಪ್ರಾಪ್ತಿ" ಎಂದು ತಮ್ಮ ಮನಸ್ಸಿ ನಲ್ಲಿಯೇ ಹೇಳಿಕೊಂಡು, "ಅಳಬೇಡವೇ ಕಮಲಾ, ಸಾಕುಮಾಡು." ಎಂದು ಹೇಳಿ ಅವಳ ಕಣ್ಣುಗಳನ್ನು ತನ್ನ ವಸ್ತ್ರದಿಂದ ಒರೆಸಿದರು. ಅವಳು ಅತ್ತದ್ದು ಅವಳ ಸಾಹಸವೆಂದೇ ಅವರ ಭಾವನೆ. ಆದರೂ ಅವಳನ್ನು ಸಮಾಧಾನಗೊಳಿಸಿದರು. ಆಕೆ "ಏನು ಬದುಕಿದು? ಇದ್ದರೆ ಚೆನ್ನಾಗಿ ಬಾಳಬೇಕು. ನಿಮ್ಮ ಪ್ರೀತಿಯನ್ನು ಕಳೆದುಕೊಂಡಮೇಲೆ ನನಗೇನು ಉಳಿ ಯುವುದು? ನನ್ನ ಮನಸ್ಸಿನ ದುಃಖವನ್ನು ನಿಮ್ಮ ಬಳಿ ಹೇಳದೆ ಯಾರಲ್ಲಿ ಹೇಳಿ ನಾನು ಸಮಾಧಾನ ಪಡೆಯಲಿ? ನನಗೆ ನಿಮ್ಮನ್ನು ಬಿಟ್ಟರೆ ಬೇರೆ ಗತಿ ಯಾರು? ತಾಯಿ ತಂದೆ ಎಲ್ಲರನ್ನೂ ಬಿಟ್ಟು ನೀವೇ ತಂದೆಗೆ ತಂದೆ, ತಾಯಿಗೆ ತಾಯಿ, ಗಂಡನಿಗೆ ಗಂಡ ಎಂದು ಅಂತರಂಗವಾಗಿ ಭಕ್ತಿಯನ್ನು ತೋರಿಸಿ ನನ್ನ ದುಃಖವನ್ನು ಹೇಳಲು ಬಂದಾಗ ನೀವು ಕೋಪಿಸಿ ಕೊಳ್ಳುವುದು ಉರಿಯುವ ಹುಣ್ಣಿನ ಮೇಲೆ ಬೆಂಕಿಯನ್ನು ಇಟ್ಟಂತೆ ಆಗು ತ್ತದೆ. 'ದುಃಖಿಸಬೇಡ' ಎಂದು ಸಮಾಧಾನ ಹೇಳುವುದಕ್ಕೆ ಬದಲಾಗಿ ನೀವೇ ಹೀಗೆ ಜಬರಿಸಿಕೊಂಡು ರೇಗಿದರೆ ನಾನು ಏನು ಮಾಡಬೇಕು? ಅವಳು ಹಾಗೆ ಬೈದಳೆಂದು ಮಾತ್ರವೇ ಅಲ್ಲವೇ ಹೇಳಿದೆ? ಅದರಲ್ಲಿ ತಪ್ಪೇನು? ಅದು ಸುಳ್ಳೇ ನಿಜವೇ ಎಂದೂ ಸಹ ವಿಚಾರಿಸದೆ ನನ್ನನ್ನು ದಂಡಿಸಲು ಆರಂಭಿಸುವಿರಲ್ಲಾ?" ಎಂದು ಬಿಕ್ಕಿ ಬಿಕ್ಕಿ ಅಳಲು, ಮುತ್ತು ಸ್ವಾಮಿ ಅಯ್ಯರವರ ಮನಸ್ಸು ಕರಗಿ, "ಕಮಲಾ! ನಾನು ಮಾಡಿದುದು

ತಪ್ಪು ಕಾಣೆ! ಅದನ್ನು ಮರೆತು ಬಿಡು" ಎಂದು ಹೇಳಿ ಅವಳನ್ನು ಗಟ್ಟಿ ಯಾಗಿ ತಬ್ಬಿಕೊಂಡು ಪ್ರೀತಿಯ ಕೆಲವು ಮಾತುಗಳಿಂದ ಅವಳ ದುಃಖ ವನ್ನು ಮರೆಯಿಸಲು ಪ್ರಯತ್ನಿಸಿದರು. ಆಗಲೂ ಅವಳ ದುಃಖ ದೂರ ವಾಗದೇ ಇದ್ದುದನ್ನು ಕಂಡು ತಾವೂ ಕಣ್ಣೀರು ಸುರಿಸಿ ಅಳಲಾ ರಂಭಿಸಿದರು. ಅವರು ಅಳುವುದನ್ನು ನೋಡಿ, ಸುಂದರನೂ ಅತ್ತನು. ಕಮಲಾಂಬಾಳ್ ತಾನು ಅಳುವುದನ್ನು ನಿಲ್ಲಿಸಿ ಅವರ ಅಳುವನ್ನು ನಿಲ್ಲಿಸಲು ಯತ್ನಿಸಿದಳು. ಅವರು ಸುಧಾರಿಸಿಕೊಂಡು, ಪ್ರೀತಿಯ ಸಲ್ಲಾಪವನ್ನು ಮಾಡಿ "ನನ್ನ ಕಮಲಾ, ನಿನ್ನೊಂದಿಗೆ 'ಚೂ' ಬಿಟ್ಟೆ. ನನ್ನೊಡನೆ ಮಾತನಾಡಬೇಡ" ಎಂದು ಬೆರಳು ತೋರಿಸಿ ಹೇಳಿದರು. ಅದಕ್ಕೆ ಅವರ ಹೆಂಡತಿ "ಏತಕ್ಕೆ? ಏನು ಕೋಪ?" ಎಂದು ಕೇಳಲು ಅಯ್ಯರವರು ಉತ್ಸಾಹದಿಂದ ತನ್ನ ಕೈ ಕಾಲುಗಳನ್ನು ಆಡಿಸುತ್ತ, "ನಿನ್ನನ್ನು ಯಾರು ಏನು ಎಂದರೆಂಬುದನ್ನು ಹೇಳದೆ ಸುಮ್ಮನೇ ಕುಳಿತಿದ್ದೀಯಾ? ಹೋಗು, ಹೋಗು" ಎಂದು ಮೃದುವಾದ ಧ್ವನಿಯಲ್ಲಿ ಹೇಳಿದರು. ಅಷ್ಟರಲ್ಲಿ ಅಳುತ್ತಿದ್ದ ಸುಂದರನನ್ನು ಆಲಂಗಿಸಿಕೊಂಡು, "ಅಯ್ಯೋ, ಎಷ್ಟು ಪ್ರೀತಿ! ನನ್ನ ಅರಗಿಣಿ!" ಎಂದು ಹೇಳುತ್ತ ಕಣ್ಣುಗಳನ್ನು ಒರೆಸಿ, "ನಿನ್ನ ತಾಯಿ ನಿನ್ನನ್ನು ಇಲ್ಲಿ ಬರಬಾರದೆಂದು ಹೇಳುವಳಲ್ಲಾ ಅವಳು ಹಾಗೆ ಹೇಳ ಬಹುದೇ?" ಎಂದಳು. ಕೂಡಲೇ ಸುಂದರನು, "ಇಗೋ ನೋಡು! ನಾನು ಈಗಲೇ ಹೋಗಿ ಅವಳನ್ನು ಹೊಡೆದುಬಿಟ್ಟು ಬರುತ್ತೇನೆ" ಎಂದು ತಟಾರನೆ ಎದ್ದು ಹೊರಟು ಹೋದನು.

ಸುಂದರನು ಅವನ ವಯಸ್ಸಿಗೆ ಮೀರಿದ ಬುದ್ಧಿಯುಳ್ಳವನು. ಅವ ನನ್ನು ಕಡಿದು ಹಾಕಿದರೂ ಅವನು ಕಮಲಾಂಬಾಳನ್ನು ಅಗಲಿ ಹೋಗ ಲಾರ. ದಿನಕ್ಕೆ ಒಂದು ಸಲಕ್ಕಿಂತ ಹೆಚ್ಚು ತನ್ನ ತಾಯಿಯ ಬಳಿ ಅವಳು ತಿಂಡಿ ಕೊಟ್ಟು ಕರೆದರೂ ಅವನು ಹೋಗಲಾರ. ಕಮಲಾಂಬಾ ಳನ್ನು ತನ್ನ ತಾಯಿ ಬೈದಳೆಂದು ಕೇಳಿದಕೂಡಲೇ ಅವನು ತಟಾರನೇ ಎದ್ದು ಕೋಲನ್ನು ಹಿಡಿದುಕೊಂಡು ಓಡಿದನು. ಅವನನ್ನು "ಇಲ್ಲಿ ಬಾ, ಇಲ್ಲಿ ಬಾ" ಎಂದು ಕಮಲಾಂಬಾಳ್ ಬಾಗಿಲಿನವರೆಗೂ ಹಿಂಬಾಲಿಸಿದಳು.

ಅವನು ಓಡಿಯೇ ಬಿಟ್ಟ. ಏನಾದರೂ ಕಲಹ ಅವನಿಂದ ಉಂಟಾದರೂ ಉಂಟಾಗಬಹುದು ಎಂಬ ಭಯ ಕಮಲಾಂಬಾಳಿಗೆ ಇದ್ದರೂ ಕೆಟ್ಟವಳಾದ ಪೊನ್ನಮ್ಮಾಳಿನ ಮುಖವನ್ನು ನೋಡಲು ಅವಳಿಗೆ ಇಷ್ಟವಿಲ್ಲದುದರಿಂದ ಬಾಗಿಲಿನಿಂದ ಆಚೆ ಅವಳು ಅವನನ್ನು ಹಿಂಬಾಲಿಸಲಿಲ್ಲ.

ಸುಂದರನು ತನ್ನ ಮನೆಯನ್ನು ಪ್ರವೇಶಿಸಿದ ಕೂಡಲೆ ಕುಪ್ಪಸವನ್ನು ಹೊಲಿಯುತ್ತಿದ್ದ ತನ್ನ ತಾಯಿಯನ್ನು, " ಅಮ್ಮನನ್ನು 'ಮುಂಡೆ' ಎಂದು ಏತಕ್ಕೆ ನೀನು ಬೈದೆ? " ಎಂದು ಹೇಳುತ್ತ ಕೈಯಲ್ಲಿದ್ದ ಕೋಲನ್ನು ಬೀಸಿ ಒಂದು ಏಟು ಕೊಟ್ಟನು. ಅವಳು ಆ ಏಟಿನ ನೋವಿನಿಂದ ಬುದ್ಧಿ ಕಳೆದುಕೊಂಡು " ಕಾಲಾಂತಕಾ! ನಿನಗೆ ಆ ತುಚ್ಛಳು ಅಮ್ಮ ಆದಳೋ! ಮನೆ ಬಿಟ್ಟು ಆಚೆ ಹೋಗು. ಇಲ್ಲದಿದ್ದರೆ ನಿನ್ನ ಕಾಲನ್ನು ಮುರಿದು ಬಿಡುತ್ತೇನೆ " ಎಂದು ಹೇಳುತ್ತ ಕುಪ್ಪಸವನ್ನು ಕೆಳಗಿಟ್ಟು ಅವನನ್ನು ಹಿಡಕೊಂಡು, ಅವನ ಕೋಲನ್ನು ಮುರಿದು ಹಾಕಿ, ಒಂದು ಹಗ್ಗದಿಂದ ಅವನನ್ನು ದೂಲಕ್ಕೆ ಕಟ್ಟಿ ಮೊಸರು ಕಡೆಯುವ ಕಡಗೋಲಿನಿಂದ ಕಾಲು ಬಾತುಕೊಳ್ಳುವಂತೆ ಹೊಡೆದಳು. ಸುಂದರನು ಗಟ್ಟಿಯಾಗಿ ಅರಚಿಕೊಂಡನು. ಇದನ್ನು ಕೇಳಿ ಒಳಗೆ ನಿದ್ದೆ ಹೋಗುತ್ತಿದ್ದ ಸುಬ್ರಹ್ಮಣ್ಯ ಅಯ್ಯರ್ ಬೆಚ್ಚಿ ಬಿದ್ದು ಎದ್ದು " ಏನೇ ಕೊಲೆಪಾತಕೀ " ಎಂದು ಬಂದರು. ಆ ರಾಕ್ಷಸಿ, " ಈ ರಾತ್ರಿ ಅವರ ಮನೆಯ ನಿತ್ಯಶ್ರಾದ್ಧಕ್ಕೆ ( ನಿಶ್ಚಿತಾರ್ಥವೆಂಬುದಕ್ಕೆ ಬದಲಾಗಿ ) ಹೋದಿರೋ ನೋಡಿಕೊಳ್ಳಿ " ಎಂದು ಒಂದು ಗದರಿಕೆಯನ್ನು ಹಾಕಲು ಪಾಪ, ಬ್ರಾಹ್ಮಣ ಕೈ ಕಾಲು ನಡುಗುತ್ತ, ತೊದಲುತ್ತ ದೂರದಲ್ಲಿ ನಿಂತುಕೊಂಡು, " ಮಗುವನ್ನು ಏತಕ್ಕೆ ಹಾಗೆ ಕಟ್ಟಿಹಾಕಿದೆ? " ಎಂದು ಕೇಳಿದರು. " ಹೋಗಿ, ನಿಮ್ಮ ಪಾಡಿಗೆ ನೀವು ಹೋಗಿ. 'ಮುಂಡೆ' ಎಂದು ಹೇಳಿದೆನಂತೆ ನಾನು! ಸುಳ್ಳೂ ಪಳ್ಳೂ ಹೇಳಿ ಮಗುವಿನ ಕೈಯಲ್ಲಿ ಕೋಲು ಕೊಟ್ಟು ಬೈದಃ ಹೊಡೆದು ಬಾ ಎಂದು ಹೇಳಿರುವಳಲ್ಲಾ— ಆ ನೀಚಳು! ಅವಳೇ ಹೆಂಗಸೇನೋ! ನನ್ನನ್ನು ಕೆಲಸಕ್ಕೆ ಬಾರದವಳೆಂದುಕೊಂಡಳೇನೋ !! ನನ್ನನ್ನು ಹೊಡೆಯಲು ಕಳಿಸಿದ್ದಾಳೆ. ನೀವು ನಿದ್ದೆ ಮಾಡಿ ಹೋಗಿ! ರಾತ್ರಿ ನಿತ್ಯಶ್ರಾದ್ಧಕ್ಕೆ ನಿಮ್ಮ

ಅಪ್ಪನ ಆಣೆ ಹೋಗಕೂಡದು" ಎಂದು ಮರ್ಯಾದೆಯಿಂದ ಗಂಡನನ್ನು ನೋಡಿ ಹೇಳಿದಳು, ಪೊನ್ನಮ್ಮಾಳ್.

ಆ ಹೊತ್ತಿಗೆ ಸರಿಯಾಗಿ ಒಬ್ಬ ಹೆಂಗಸು ಒಳಗೆ ಬಂದಳು. ಅವಳ ಹೆಸರು ನಾಗು. ಹರಟೆಮಲ್ಲಿಗಳ ಮಹಾಸಭೆಯ ಅಧ್ಯಕ್ಷಿಣಿಯಾದ ಸುಬ್ಬಮ್ಮಾಳ್, ತಾನು ಬೆಳಗಿನಲ್ಲಿ ಕಮಲಾಂಬಾಳ್ ಮನೆಯಲ್ಲಿ ಹೊತ್ತಿಸಿದ ಕಲಹದ ಬೆಂಕಿ ಹೇಗೆ ಉರಿಯುತ್ತಿದೆ, ಎಂದು ನೋಡಿಕೊಂಡು ಬರುವಂತೆ ತನ್ನ ಉದ್ಯೋಗಸ್ಥರಲ್ಲಿ ಒಬ್ಬಳಾದ ನಾಗುವನ್ನು ಪೊನ್ನಮ್ಮಾಳ್ ಬಳಿಗೆ ಓಡಿಸಿದ್ದಳು. ಇವಳ ಪ್ರಸಂಗವನ್ನು ನಾವು ಪ್ರಾತಃಕಾಲ ನದಿಯ ತೀರದಲ್ಲಿ ಕೇಳಿರುವೆವಲ್ಲವೆ? ಪೊನ್ನಮ್ಮಾಳ್ ಮುತ್ತುಸ್ವಾಮಿ ಅಯ್ಯರನ್ನು 'ಗಂಡ ವಿಧವೆ' ಎಂದು ನಿಕೃಷ್ಟವಾಗಿ ಬೈದಳೆಂದೂ, ಕಮಲಾಂಬಾಳನ್ನು ತಟವಾಣಿ ಮುಂಡೆ ಎಂದು ಬೈಯಲಿಲ್ಲವೆಂದೂ, ಆದರೆ ಸುಬ್ಬು ಹಿಂದೆ ಹೇಳಿದಂತೆ ಕಮಲಾಂಬಾಳ್ ಬಳಿ ಹಾಗೆ ಹೇಳಿದ್ದಾಳೆಂದೂ, ನಾಗುವಿಗೆ ಚೆನ್ನಾಗಿ ಗೊತ್ತಿತ್ತು. ಅವಳು ಒಳಗೆ ಬಂದ ಕೂಡಲೆ, "ಎಲೆ ಪಾಪ!" ಎಂದು ಹೇಳುತ್ತ ಅರಚಿ ಆರ್ಭಟಮಾಡಿ ಅಳುತ್ತಿದ್ದ ಮಗುವಿನ ಕಟ್ಟನ್ನು ಬಿಚ್ಚಿ ಹಾಕಿದಳು. ಪೊನ್ನಮ್ಮಾಳ್ ಅವನನ್ನು "ಹೋಗೊ, ಒಳಗೆ" ಎಂದು ಬಾಗಿಲಬಳಿ ನಿಲ್ಲದಂತೆ ತಡೆದು, "ನೋಡು ನಾಗು, ನಾನೇನೋ ಬೈದೆನಂತೆ. ಅದಕ್ಕೆ ಈ ಕೊಳ್ಳಿ ಕಟ್ಟಿಗೆಯನ್ನು ಕೈಯಲ್ಲಿ ಕೊಟ್ಟು, ನನ್ನನ್ನು ಹೊಡೆಯಲು ಕಳುಹಿಸಿದ್ದಾಳೆ. ಈ ಯಮ ನನ್ನನ್ನು ಹೊಡೆಯಲು ಬಂದಿದ್ದಾನೆ. ಎಂತಹ ಗ್ರಹಚಾರ." ಎಂದಳು. ನಾಗು ರಹಸ್ಯವನ್ನು ಹೇಳುವವಳಂತೆ ಮೆತ್ತಗೆ ಅವಳ ಕಿವಿಯಲ್ಲಿ, "ನಿನಗೆ ಅವಳ ಸಮಾಚಾರ ಈ ಹೊತ್ತು ಗೊತ್ತಾಗಿರಬಹುದು. ನನಗೆ ಬಹಳ ಕಾಲದಿಂದಲೂ ಗೊತ್ತು." ಎಂದು ಹೇಳಿದಳು. ಈ ರೀತಿಯಲ್ಲಿ ಇಬ್ಬರೂ ಮಾತನಾಡಿಕೊಳ್ಳುತ್ತಿದ್ದರು.

ಪಾಪ, ಸುಬ್ರಹ್ಮಣ್ಯ ಅಯ್ಯರ್ ರಾತ್ರಿ ನಡೆಯುವ ನಿಶ್ಚಿತಾರ್ಥಕ್ಕೆ ಹೋಗದೆ ಹೇಗೆ ಉಳಿಯುವುದು? ಹೋದರೆ ಈ ರಾಕ್ಷಸಿಯ ವಿರೋಧ, ಹೋಗದಿದ್ದರೆ ಅಣ್ಣನ ವಿರೋಧ. ಅವರು ಏನುತಾನೆ ಮಾಡಿ ಯಾರು? ಈ ಚಿಂತೆಯಿಂದ ಅವರ ನಿದ್ರೆ ಸೂರ್ಯನನ್ನು ಕಂಡ ಹಿಮದಂತೆ

ಕರಗಿ ಹೋಯಿತು. ಒಮ್ಮೆ "ಇವಳು ಬಿದ್ದಿರುತ್ತಾಳೆ. ಅಣ್ಣನು ತಂದೆಗೆ ಸಮಾನ, ಅವರು ನನ್ನಮೇಲೆ ಇಟ್ಟಿರುವ ಪ್ರೀತಿಗೆ ನಾನು ಹೋಗದಿದ್ದರೆ ಆದೀತೇ ?" ಎಂದೂ ಮರುಕ್ಷಣದಲ್ಲಿ "ಇವಳು ನಮ್ಮನ್ನು ಮರೆತು ಬಿಡುವಳೇ. ಆ ಮೇಲೆ ಮನೆಗೆ ಬಂದರೆ ನನ್ನನ್ನು ಯಾರು ನೋಡಿ ಕೊಳ್ಳುತ್ತಾರೆ ?" ಎಂದೂ ಯೋಚಿಸುವರು. ಹೀಗೆ ಸೂರ್ಯಾಸ್ತಕ್ಕೆ ಮೂರು ಘಳಿಗೆ ಇರುವವರಿಗೂ ಯೋಚಿಸಿ, "ಓಹೋ ! ನಿಶ್ಚಿತಾರ್ಥದ ಕಾಲ ಸಮೀಪಿಸಿತಲ್ಲಾ ! ದೈವವೇ ! ಏನು ಮಾಡಲಿ ? ಒಂದು ಉಪಾ ಯವೂ ಹೊಳೆಯಲೊಲ್ಲದಲ್ಲ. ಅವಳನ್ನು ಕೇಳೋಣವೆಂದರೆ "ಜಡ ! ಅಂಜುಬುರುಕ" ಎಂದು ಬೈಯುವಳಲ್ಲಾ ರಾಕ್ಷಸಿ, ಇರಲಿ" ಎಂದು ತನ್ನೊಳಗೆ ಯೋಚಿಸಿ ತನ್ನ ಹೆಂಡತಿಯ ಬಳಿಗೆ ಹೋಗಿ "ನಾನು ಅಣ್ಣನ ಮನೆಗೆ ಹೋಗದೆ ಇರಬಾರದು. ಹೋಗೇಹೋಗುತ್ತೇನೆ. ನಾನು ಹೋದರೆ ನಿನಗೇನು?" ಎಂದು ಹೇಳಿದರು. "ಅದನ್ನೇ ಈ ಹೊತ್ತು ನೋಡಬೇಕಾಗಿದೆ. ನಾನೂ ಇಲ್ಲಿಯೇ ಇರುತ್ತೇನೆ. ಹೇಗೆ ತಾನೇ ಹೋಗುತ್ತೀರೊ ನೋಡೋಣ" ಎಂದು ಆ ಪಿಶಾಚಿ ಖಂಡಿತವಾಗಿ ಬದಲು ಹೇಳಿದಳು. ಆಗ ಅಯ್ಯರ್, "ನೀನೂ ಮಗುವನ್ನು ಕರೆದುಕೊಂಡು ಎಲ್ಲಿಯಾದರೂ ಹೋಗಿ ಬಾ ! ನಾನೂ ಅಣ್ಣನ ಮನೆಗೆ ಹೋಗುವುದಿಲ್ಲ. ನನ್ನನ್ನು ಒಳಗೆ ಬಿಟ್ಟು ಬಾಗಿಲನ್ನು ಬೀಗ ಹಾಕಿ ಹೊರಟು ಹೋಗು." ಎಂದು ಹೇಳಿದರು. ಅದಕ್ಕೆ ಪೊನ್ನಮ್ಮಾಳ್, "ನಾನು ಇಲ್ಲಿಯೇ ಇರುತ್ತೇನೆ. ನೀವು ಮನೆ ಬಿಟ್ಟು ಆಚೆ ಹೋದಿರೋ, ಕಾಲುಮುರಿದು ಬಿಡುತ್ತೇನೆ, ಭದ್ರ" ಎಂದು ಹೇಳಿದಳು. ಸುಬ್ರಹ್ಮಣ್ಯ ಅಯ್ಯರ್ "ಏನು ಹೋಗೆ, ಹೀಗೆಲ್ಲ ಆಟ ಮಾಡಬೇಡ. ಆ ಮೇಲೆ ವ್ಯರ್ಥವಾಗಿ ಮನಸ್ತಾಪ. ನೀನು ಬಾಗಿಲಹಾಕಿ ಕೊಂಡು ಹೋಗಿಬಿಡು" ಎಂದು ಹೇಳಿದರು. "ಏನು ! ಇಜ್ಞು, ಮಿಜ್ಞು, ಸುಮ್ಮನೆ ಇಲ್ಲಿಯೇ ಇರಿ, ಅಂದ್ರೆ !" ಎಂದು ಹೇಳಿದ ಕೂಡಲೇ ಅಯ್ಯರ್ ಹಲ್ಲು ಕಿರಿಯುತ್ತ ಅವಳೊಂದಿಗೆ ಸರಸವಾಡುವ ರೀತಿಯಲ್ಲಿ ಹೊರಗಿನ ಬಾಗಿಲ ಬೀಗ ಹಾಕಿ ಹೋಗೆಂದರು. ಅವಳು ಆಗಲೂ ಹೋಗಿರಲಾರಳು. ಆದರೆ ಕೆಲವು ವಿಶೇಷ ಸಮಾಚಾರಗಳನ್ನು ಹರಟೆ ಮಲ್ಲಿಗಳ ಮಹಾಸಭೆ

ಯಲ್ಲಿ ತಿಳಿಯಪಡಿಸುವುದು ಆಗತ್ಯವಾಗಿತ್ತು. ಆದುದರಿಂದ ಅವಳು ಬಾಗಿಲ ಬೀಗ ಹಾಕಿಕೊಂಡು ಹಾಗೆಯೆ ಸಭೆಗೆ ಹೊರಟಳು. ಅಯ್ಯರ್ ಗೊಂಬೆ ಯಂತೆ ಕಣ್ಣು ಬಿಡುತ್ತ ಒಂಟಿಯಾಗಿ ಒಳಗೆ ಕುಳಿತಿದ್ದರು.

ಇಲ್ಲಿ ಹೀಗಿರಲು, ದೊಡ್ಡಮನೆಯ ಜಗುಲಿಯ ಮೇಲೆ ಮಲಗಿದ್ದ ಮುದುಕರಿಬ್ಬರೂ ಎದ್ದು ಮುತ್ತುಸ್ವಾಮಿ ಅಯ್ಯರೊಡನೆ ನಿಶ್ಚಿತಾರ್ಥಕ್ಕೆ ಬೇಕಾದ ಏರ್ಪಾಡುಗಳನ್ನು ಮಾಡಿದರು. ಶಿರುಕುಳದಲ್ಲಿರುವ ಎಲ್ಲಾ ಜನರೂ ಮುತ್ತುಸ್ವಾಮಿ ಅಯ್ಯರವರ ಹಜಾರದಲ್ಲಿ ಬಂದು ಸೇರಿದರು. ಆದರೆ ಸುಬ್ರಹ್ಮಣ್ಯ ಅಯ್ಯರ್ ಮಾತ್ರ ಕಾಣಿಸಲಿಲ್ಲ. ಮುತ್ತುಸ್ವಾಮಿ ಅಯ್ಯರ್ "ಯಾರೋ ಅದು, ಸುಬ್ಬುಳಿ, ಸುಬ್ರಹ್ಮಣ್ಯನನ್ನು ನೋಡಿ ಕೊಂಡು ಬಾ. ಮುಟ್ಠಾಳ, ಸಮಯಕ್ಕೆ ಸರಿಯಾಗಿ ಎಲ್ಲಿಯೋ ಹೋಗಿ ಬಿಡುತ್ತಾನೆ." ಎಂದು ಹೇಳಿದರು.

ಹರಟಿಮಲ್ಲಿಗಳ ಸಭೆಗೆ ಹೋಗಿದ್ದ ಪೊನ್ನಮ್ಮಾಳ್ ಅಂದು ನಡೆದ ಪುರಾಣವೆಲ್ಲವನ್ನೂ ಸವಿಸ್ತಾರವಾಗಿ ರಂಗಮಂಟಪದಲ್ಲಿ ಮಂಡಿಸಿದ ಮೇಲೆ ಸಭೆಯನ್ನು ಬಿಟ್ಟು ಮನೆಗೆ ಬಂದು ತಾನೂ ತನ್ನ ಭಾವನವರ ಮನೆಗೆ ಹೋಗದೆ ಇರುವುದಕ್ಕೆ ಉಪಾಯ ಹೂಡಬೇಕೆಂಬ ಭಾವನೆಯಿಂದ ಬಾಗಿ ಲನ್ನು ತೆಗೆದು ಸುಬ್ರಹ್ಮಣ್ಯ ಅಯ್ಯರನ್ನು ಕೈಹಿಡಿದು ಸರಸರವೆಂದು ಎಳೆದು ಒಂದು ಚಾಪೆಯ ಮೇಲೆ ಮಲಗುವಂತೆ ಮಾಡಿ ನಾಲ್ಕೈದು ದುಪ್ಪಟ್ಟಿಗಳನ್ನು ಅವರ ಮೇಲೆ ಹೊದಿಸಿ, ಅವರೊಡನೆ "ಯಾರಾದರೂ ಕರೆಯಲು ಬರುತ್ತಾರೆ, ಆಗ ನಿಮಗೆ 'ಅರೆತಲೆಶೂಲೆ' ಯಾಗಿದೆ ಯೆಂದು ಹೇಳಿ ಕಳಿಸಿಬಿಡುತ್ತೇನೆ. ನಾವಿಬ್ಬರೂ ಹೋಗುವುದು ಬೇಡ" ಎಂದು ಹೇಳಿದಳು. ಸುಬ್ರಹ್ಮಣ್ಯ ಅಯ್ಯರ್ ತಮ್ಮ ಪಾಲಿಗೆ ದೈವವೇ ಪೊನ್ನಮ್ಮಾಳ್ ರೂಪದಲ್ಲಿ ಬಂದಿದೆಯೆಂದು ಆನಂದಿಸಿ ತಥಾಸ್ತು ಎಂದರು.

ಸುಬ್ಬುಳಿ ಬರುವ ಹೆಜ್ಜೆಯ ಸದ್ದು ಕೇಳಿದಕೂಡಲೆ ಸುಬ್ರಹ್ಮಣ್ಯ ಅಯ್ಯರು ಬಲವಾಗಿ ನರಳುವುದಕ್ಕೆ ಪ್ರಾರಂಭಿಸಿದರು, ಅವರ ಹೆಂಡತಿ ಅವರ ತಲೆಯನ್ನು ಗಟ್ಟಿಯಾಗಿ ಹಿಡಿದುಕೊಂಡು, "ಸಹಿಸಿಕೊಳ್ಳಿ, ಏನು ಮಾಡೋಣ ? ಅನುಭವಿಸುವುದೆಲ್ಲವನ್ನೂ ನಾವು ತಾನೆ ಅನುಭವಿಸಬೇಕು"

ಎಂದು ಸಮಾಧಾನ ಹೇಳುತ್ತಿದ್ದಳು. ಸುಬ್ಬುಲಿ ಒಳಕ್ಕೆ ಬಂದು ಅಯ್ಯರವರ ಆರ್ಭಟವನ್ನು ನೋಡಿ ದುಃಖಗೊಂಡು "ಏನು ವೈಯಲ್ಲಿ?" ಎಂದು ಸನ್ನೆಮಾಡಿ ಕೇಳಿದನು. ಅಯ್ಯರವರು ಏನಾದರೂ ಯದ್ವಾತದ್ವಾ ಬೊಗಳಿಬಿಡುವರೆಂದು ಭಯಪಟ್ಟು ಪೊನ್ನಮ್ಮಾಳ್ ವಿಶದವಾಗಿ, "ಇಷ್ಟು ಹೊತ್ತೂ ಹೊರಕ್ಕೆ ಹೋಗಿ ಈಗ ತಾನೆ ಬಂದರು. ಬಂದದ್ದೇ ತಡ, ಕಿರ್ರೆಂದು ಅರಚಿಕೊಳ್ಳುತ್ತ ಕೆಳಗೆ ಬಿದ್ದರು. ನಾನು ಚಟ್ಟಣಿ ಅರೆಯುತ್ತಿದ್ದೆ. ಓಡಿ ಬಂದು ಏನಾಯಿತೆಂದು ಕೇಳಿದೆ. 'ಅಬ್ಬಾ! ತಲೆಶೂಲಿ' ಎಂದು ಹೇಳಿದ ಮಾತೊಂದೆ. ಒಂದು ಗಳಿಗೆಯಿಂದ ಬಿಟ್ಟೂ ಬಿಡದೆ ನರಳಾಡುತ್ತಿದ್ದಾರೆ. ಏನೆಂದು ಕೇಳುವವರೇ ಇಲ್ಲ. ನಾನು ಒಬ್ಬಂಟಿಗಳಾಗಿದ್ದು ಕೊಂಡು ಹೋರಾಡುತ್ತಿದ್ದೇನೆ. ನಿಶ್ಚಿತಾರ್ಥವೇನು ಮದುವೆ ಮುಹೂರ್ತವೆ? ಈ ಹೊತ್ತಾಗದಿದ್ದರೆ ನಾಳೆ ಶುಕ್ರವಾರ ಆಗಬಹುದಿತ್ತಲ್ಲ? ಅದನ್ನಾದರೂ ಹೇಳುವುದಕ್ಕೆ ನಾವು ಯಾರು? ಅದು ಹೋಗಲಿ, ತಮ್ಮನಾದವನು ಅದಕ್ಕೆ ಬಂದೇ ತೀರಬೇಕೇ? ನಡೆಯಲಿ. ನಾನಾದರೂ ಬರುವುದಕ್ಕಾಗುವುದಿಲ್ಲವಲ್ಲಾ, ಎಂದು ನನ್ನೊಳಗೆ ಆಗುತ್ತಿರುವ ಬಾಧೆ ನನಗೇ ಗೊತ್ತು. ಬೀಗರೇನೋ ಕರೆಯಲು ಬರಲಿಲ್ಲ. ಅಣ್ಣಂದಿರಾದರೂ ನೆನೆದುಕೊಂಡರಲ್ಲಾ. ಸುಬ್ಬು, ನೀನು ಒಳ್ಳೆಯ ಹುಡುಗನಪ್ಪಾ! ಅವರು ಹೇಳದಿದ್ದರೂ ನೀನು ಕರೆಯಲು ಬಂದೆಯಲ್ಲ. ನಿನಗೆ ಸಮಾನರು ಯಾರು?" ಎಂದು ಹೇಳಿದಳು. ಸುಬ್ಬುಳಿಗಾದರೋ ಅತಿ ಸಂತೋಷವಾಯಿತು ಈ ಹೊಗಳಿಕೆಯನ್ನು ಕೇಳಿ. ಅವನು ತೊದಲುತ್ತ, 'ನಿ... ನಿ....ನಿಮ್ಮ ಭಾವನವರು.... ಎಲ್ಲೀ ಅಂದರು. ನಾನಾಗಿ.... ಕರೆಯಲು ಬಂದೆ" ಎಂದು ಸಂಗೀತದವರು ಪಲ್ಲವಿ ಹಾಡುವುದರಲ್ಲಿ ಸಂಗತಿಗಳನ್ನು ಹಾಕುವಂತೆ ಅನೇಕ ಅಕ್ಷರಗಳನ್ನು ಕೂಡಿಸಿ ಉತ್ತರವಿತ್ತನು. ಈ ತೊದಲ ಉತ್ತರವನ್ನು ಹೇಳಿ ಮನೆಗೆ ಹೋಗುವುದರೊಳಗಾಗಿ ಅಲ್ಲಿ ನಿಶ್ಚಿತಾರ್ಥ ಮುಗಿದಿತ್ತು. ಮುಂದಿನ ಚೈತ್ರ ಬಹುಳ ತದಿಗೆ ಸೋಮವಾರ ಮದುವೆಯ ಮುಹೂರ್ತವೆಂದು ನಿಷ್ಕರ್ಷೆ ಆಯಿತು. ಆದರೆ ಮುತ್ತುಸ್ವಾಮಿ ಅಯ್ಯರಿಗೆ ಮಾತ್ರ ಒಂದು ಚಿಂತೆ. ಅದೇನಂದರೆ ತನ್ನ ತಮ್ಮ ನಿಶ್ಚಿತಾರ್ಥಕ್ಕೆ ತಲೆಶೂಲೆ ತಂದುಕೊಂಡ.

ಮದುವೆಗೆ ಇನ್ನೇನು ನೆಪ ಹುಡುಕುವನೋ! ಒಂದು ವೇಳೆ ಜ್ವರ
ಏನಾದರೂ ಬಂದೀತೊ ಎಂಬ ಚಿಂತೆ.

## ೭. ಅಮ್ಮಯ್ಯ ಪಿಳ್ಳೈ

ಈಗ ಶಿರುಕುಳವನ್ನು ಬಿಟ್ಟು ಮಧುರೆಗೆ ಹೋಗಿ ಬರೋಣ. ಮಧುರೆಯಲ್ಲಿ ನಮಗೆ ಸ್ವಲ್ಪ ಕೆಲಸವಿದೆ. ಅದನ್ನು ನೋಡಿಕೊಂಡು ಶಿರುಕುಳದಲ್ಲಿ ನಡೆಯಲಿರುವ ದೊಡ್ಡ ಮದುವೆಗೆ ಅಳಿಯ, ಬೀಗರು ಮುಂತಾದವರು ಬರುವಾಗ ಅವರ ಜೊತೆಯಲ್ಲಿಯೇ ಬಂದು ಬಿಡೋಣ. ನಮಗೆ ಮಧುರೆಗೆ ಹೋಗಲು ಪಲ್ಲಕ್ಕಿ, ಕುದುರೆ- ಇವು ಯಾವುದೂ ಬೇಕಾಗಿಲ್ಲ. ಹಿಂದಿನ ಕಾಲದ ಋಷಿಗಳ ಬಳಿ "ಗಮನಗುಳಿಗೆ" ಎಂದು ಉತ್ಕೃಷ್ಟವಾದ ವಸ್ತು ಇತ್ತಂತೆ. ಅದರಲ್ಲಿ ಒಂದನ್ನು ತೆಗೆದು ಬಾಯಲ್ಲಿ ಹಾಕಿಕೊಂಡರೆ ಯಾವ ಸ್ಥಳಕ್ಕೆ ಬೇಕಾದರೂ ಅದು ಒಯ್ಯುತ್ತಿತ್ತಂತೆ. ನಮಗೆ ಅಂತಹ ಗುಳಿಗೆಗಳ ಅವಶ್ಯಕತೆಯೂ ಇಲ್ಲ. ನೆನೆದ ಮಾತ್ರಕ್ಕೆ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಹೋಗುವ ಸಾಮರ್ಥ್ಯ ಇರುವುದಲ್ಲವೆ?

ಮಧುರೆಯಲ್ಲಿ 'ಜಿಲ್ಲಾ ಸ್ಕೂಲ್' ಎಂಬ ಹೆಸರಿನ ಗವರ್ನ್‌ಮೆಂಟ್ ಕಾಲೇಜಿಗೆ ಸೇರಿದ ಒಂದು ಸ್ಕೂಲಿದೆ. ಅದರ ಒಂದು ಮೂಲೆಯಲ್ಲಿ ಕೆಲವು ಬೆಂಚುಗಳೂ—ಅವುಗಳ ಮಧ್ಯೆ ಒಂದು ಕುರ್ಚಿ ಮೇಜು ಹಾಕಲ್ಪಟ್ಟಿದ್ದುವು. ಆ ಮೇಜಿನ ಮೇಲೆ ಕೆಲವು ಮಸಿಕುಡಿಕೆಗಳಿದ್ದುವು. 'ಡಿಂಗ್ ಡಾಂಗ್' ಎಂದು ಹತ್ತನೆಯ ಗಂಟೆ ಬಾರಿಸಿದ ಕೂಡಲೆ ಅಲ್ಲಿ ಸುಮಾರು ಇಪ್ಪತ್ತು ಹುಡುಗರು ಸೇರಿದರು. ಅವರು ಬಂದ ಐದು ನಿಮಿಷಗಳೊಳಗೆ ಸಿಡುಬಿನ ಗುರುತುಗಳಿಂದ ತುಂಬಿರುವ ಮುಖ, ನೀಳವೂ ಕಪ್ಪೂ ಆದ ಆಕಾರಗಳುಳ್ಳ ಒಬ್ಬ ಮನುಷ್ಯರು ಅಲ್ಲಿಗೆ ಬಂದರು. ಅವರು ಆ ಶಾಲೆಯ ತಮಿಳು ಪಂಡಿತರು. ಅವರ ಹೆಸರು ಅಮ್ಮಯ್ಯಪ್ಪ ಪಿಳ್ಳೈ. ಅವರಿಗೆ ಸುಮಾರು ಐವತ್ತು ವರ್ಷವಿರಬಹುದು. ಅವರು ಹುಟ್ಟಿದ ಊರು ಆಡುಶಾಪಟ್ಟಿ ಎಂದು. ಐನೂರು ಮನೆಗಳೂ ಒಂದು ಹುಣಿಸೇಮರವೂ ಇರುವ ಒಂದು

ದೊಡ್ಡ ಪಟ್ಟಣ. ಅವರು ಅಗಾಧ ಶೂರರು. ಯಮಕ, ತ್ರಿ ಪದ್ಯದ ರೀತಿಗಳನ್ನು ಹಾಡಲಾರಂಭಿಸಿದರೆ ಕೋತಿಗಳು ಅತ್ತಿಹಣ್ಣುಗಳನ್ನು ಪಟ ಪಟ ಉದುರಿಸುವಂತೆ ಪದಗಳನ್ನುದುರಿಸಿ ಬಿಡುವರು. ಯಾರಾದರೂ ತಮಿಳು ತಿಳಿದವರು ಅವರ ಕೈಯಲ್ಲಿ ಸಿಕ್ಕಿಬಿದ್ದರೆ ರಾಮಬಾಣ ಬಿಟ್ಟಂತೆ ಉಸಿರು ಬಿಡದೆ ಮುನ್ನೂರು ನಾನೂರರಷ್ಟು ಪದ್ಯಗಳನ್ನು ಬೀಸಿ ಎಸೆದು ಅವನ ಕಿವಿ ಜಲ್ಲಡೆಯ ತೂತಾಗುವಂತೆ ಮಾಡಿಬಿಡುವರು.

ಒಮ್ಮೆ ತಮಿಳು ತಿಳಿಯದ ಒಬ್ಬ ಬೈರಾಗಿಗೂ, ಒಬ್ಬ ಶಾಸ್ತ್ರಿಯವರಿಗೂ ಜಗಳವಾಯಿತು. ಬೈರಾಗಿ ತನ್ನ ಬೈಗಳಲ್ಲಿ 'ಕಾರೇ' 'ಪೂರೆ' ಎಂದು ಅಪರಿಮಿತವಾಗಿ ಬೈಯಲು ಶಾಸ್ತ್ರಿಯವರು "ಮುಟ್ಠಾಳ" "ಪೋಕರಿ" ಎಂಬಿವೇ ಮೊದಲಾದ ಬೈಗಳನ್ನು ಪ್ರಯೋಗ ಮಾಡಿ ನೋಡಿದರು. ಅವನ ಬಾಯಿ ಮುಚ್ಚುವಂತೆ ಆಗಲಿಲ್ಲ. ಈ ಹಳೆಯ ಬೈಗಳಿಗೆ ಇವನು ಕಟ್ಟು ಬೀಳಲಾರನು ಎಂದು ಶಾಸ್ತ್ರಿಗಳು ಭಾವಿಸಿ, ಹೊಸ ರೀತಿಯಲ್ಲಿ "ಎಲ ಹೋಗೋ ಪುಸ್ತಕವೇ, ಸ್ಲೇಟ್ಟೇ, ಪೆನ್ಸಿಲ್ಲೇ, ನೇಗಿಲೇ" ಹೀಗೆ ಬಾಯಿಗೆ ಬಂಡ ಮಾತನ್ನು ಎಲ್ಲವನ್ನೂ ಬೈಗಳಂತೆ ಪೇರಿಸಿದ ಕೂಡಲೇ ಆ ಬೈರಾಗಿಗೆ ಹೊಸ ಬೈಗಳು ಯಾವುದೂ ತೋರದೆ ಪೇಚಾಡಿಕೊಂಡು ಒದ್ದಾಡಿದನು. ಹಾಗೆಯೇ ಅಮ್ಮಯ್ಯಪ್ಪ ಪಿಳ್ಳೆಯೊಡನೆ ಯಾವುದಾದರೊಂದು ವಿಷಯವನ್ನು ಕುರಿತು ತರ್ಕ ಮಾಡಲು ಆರಂಭಿಸಿದರೆ ಸಾವಿರಗಟ್ಟಲೆ ಪದ್ಯಗಳನ್ನು ಹೇಳಿ ಎದುರಾಳಿಯ ಬಾಯನ್ನು ಅಡಗಿಸುವರು. ತೆಗೆದುಕೊಂಡ ವಿಷಯಕ್ಕೂ ಆ ಪದ್ಯಗಳಿಗೂ ಸಂಬಂಧವಿರದಿದ್ದರೆ ತಾನೆ ಏನಾಯಿತು? ಆದರಿಂದ ಏನು ಲೋಪ, ಪದ್ಯಗಳು ಪದ್ಯಗಳೇ ತಾನೇ! ಅದರಲ್ಲಿಯೂ ಅವರು ಹಾಡಲಾರಂಭಿಸಿದರೆ, ಅವರಿಗೆ ಸಾಟಿಯಾಗಿ ಮಹಾವೈದ್ಯನಾಥ ಅಯ್ಯರವರೂ ಹಾಡಲು ಸಾಧ್ಯವಿಲ್ಲ.

ಒಂದು ದಿನ ಮಧುರೆಯ ಕಟ್ಟಶೆಟ್ಟಿ ಮಂಟಪದಲ್ಲಿ ನಮ್ಮ ವಿದ್ವಾಂಸರು ಕಂಬ ರಾಮಾಯಣದ ಸೀತಾಕಲ್ಯಾಣದ ಭಾಗವನ್ನು ತೆಗೆದುಕೊಂಡು ಉಪನ್ಯಾಸ ಮಾಡುತ್ತಿದ್ದರು. ಆ ಸಮಯದಲ್ಲಿ ಸ್ವೇಚ್ಛೆಯಾಗಿ ಬೀದಿಯಲ್ಲಿ ತಿರುಗಾಡುತ್ತಿದ್ದ ರಾಮಭಕ್ತನೊಬ್ಬನು ರಾಮನ

ದಿವ್ಯನಾಮವನ್ನು ಕೇಳಿ "ರಾಮನ ಕಥೆಯಂತೆ ಕಾಣುತ್ತದೆ. ಕೇಳೋಣ" ಎಂದು ಅಲ್ಲಿಗೆ ಪ್ರವೇಶಿಸಿದನು. ಆ ಹೊತ್ತಿಗೆ ಅಮ್ಮಯ್ಯಪ್ಪ ಪಿಳ್ಳೆಯ ಬಾಯಿಂದ ಜೊಲ್ಲು ಗಾವುದ ದೂರ ಸಿಡಿಯುತ್ತಿರಲು, ಆತನ ಕಣ್ಣುಗಳು ಕೆಂಪೇರಿ ಬಹಳ ಉಗ್ರವಾದ ರೀತಿಯಲ್ಲಿ ಗಡುಸಾದ ಧ್ವನಿಯಲ್ಲಿ ತುಂಬ ಉತ್ಸಾಹಪೂರಿತವಾದ ಉಪನ್ಯಾಸ ನಡೆಯುತ್ತಿದ್ದುದನ್ನು ನೋಡಿ ಆ ರಾಮ ಭಕ್ತನು, "ರಾಮ-ರಾವಣ ಯುದ್ಧವೆಂದು ಕಾಣುತ್ತದೆ, ಅದಕ್ಕಾಗಿಯೇ ಇವರು ಇಷ್ಟು ಕೋಪಾವೇಶದಿಂದ ಹೇಳುತ್ತಿದ್ದಾರೆ. ಒಳ್ಳೆಯ ಭಕ್ತರಾಗಿರಬಹುದು" ಎಂದು ಇವರನ್ನು ಮನಸ್ಸಿನಲ್ಲಿಯೇ ಕೊಂಡಾಡುತ್ತಿದ್ದನು. ಅಷ್ಟರಲ್ಲಿ ವಿದ್ವಾಂಸರು "ರಾಮನು ಸೀತೆಯನ್ನು ಮದುವೆ ಮಾಡಿಕೊಂಡನು. ಸೀತೆಯನ್ನು ಮದುವೆ ಮಾಡಿಕೊಂಡನು ರಾಮನು" ಎಂದು ಕೈಗಳನ್ನು ಬೀಸುತ್ತ ಘರ್ಜಿಸಿದರು. ಅದನ್ನು ಕೇಳಿ ಆ ರಾಮಭಕ್ತನು ಬೆಚ್ಚಿಬಿದ್ದು ಎದ್ದು ಕಣ್ಣುಗಳಲ್ಲಿ ಕಿಡಿಗಳನ್ನು ಹಾರಿಸುತ್ತ, "ರಾಮನು ಸೀತೆಯನ್ನು ಹಾಗೇ ತಾನೆ ಮದುವೆ ಮಾಡಿಕೊಳ್ಳುವನು. ಅದಕ್ಕೆ ನೀವು ಏತಕ್ಕೆ ಇಷ್ಟು ಕೋಪ ಮಾಡಿಕೊಳ್ಳಬೇಕು." ಎಂದು ಅವರನ್ನು ಬೆದರಿಸಿ ಎತ್ತಿ ಒಂದು ಏಟನ್ನು ಹಾಕಲು ಮುಂದುವರಿಯಲು, ಸುತ್ತುಮುತ್ತು ಇದ್ದವರು ಅವರ ಕೈಯನ್ನು ಹಿಡಿದು ತಡೆದರು. ಆಗ ಆ ರಾಮಭಕ್ತನು "ಬಿಡಿ, ಸೀತೆಯನ್ನು ಮದುವೆ ಮಾಡಿಕೊಂಡದ್ದಕ್ಕೆ ಇಷ್ಟು ಕೋಪವನ್ನು ತಾಳುವ ಚಂಡಾಳನನ್ನು ವಧೆ ಮಾಡುತ್ತೇನೆ ಎಂದು ಹೇಳಿದನು. "ಅದು ಕೋಪವಲ್ಲ. ಅವರಲ್ಲಿರುವ ಶಾಂತಗುಣವೇ ಈ ಬಗೆಯದು" ಎಂದು ಜನರು ಸಮಾಧಾನಗೊಳಿಸಿದರು. ಪಿಳ್ಳೆಯವರಾದರೊ ಭಯಗೊಂಡು ಸೀತಾ ಕಲ್ಯಾಣವನ್ನು ಅರ್ಧದಲ್ಲಿ ನಿಲ್ಲಿಸಿ. "ರಾಮನ ಪಾಡು ರಾಮನಿಗೆ, ಸೀತೆಯ ಪಾಡು ಸೀತೆಗೆ. ಅವರ ಗೋಜಿಗೆ ನಾನು ಹೋಗುವುದಿಲ್ಲ. ಸಾಕಪ್ಪ ಸಾಕು" ಎಂದು ಹೇಳಿ ಅಂದು ಮೊದಲು ಸಾರ್ವಜನಿಕ ಪ್ರದೇಶಗಳಲ್ಲಿ ಉಪನ್ಯಾಸ ಮಾಡುವುದನ್ನು ನಿಲ್ಲಿಸಿಬಿಟ್ಟರು. ಈ ವಿಧವಾದ ಸಂಗೀತ ಜ್ಞಾನ, ಶಾರೀರ ಸಂಪತ್ತು, ತಮಿಳು ಭಾಷೆಯಲ್ಲಿ ಪಾಂಡಿತ್ಯ ಇವುಗಳು ಮಾತ್ರವಲ್ಲದೆ ಅಮ್ಮಯ್ಯಪ್ಪ ಪಿಳ್ಳೆ ಒಳ್ಳೆಯ ಬುದ್ಧಿವಂತರಾಗಿಯೂ ಇದ್ದರು.

ಒಂದು ಸಲ ಅವರಿಗೂ ಅವ್ಮಾಪಟ್ಟಿ ಗವಂಡಯನ್ ಕೋಟ್ಟಿ ಎಂಬ ಕವಿರಾಯರಿಗೂ "ಅನ್ನನಡೆ" (ಹಂಸಗತಿ) ಎಂದು ನಡಗೆಗೆ ವಿಶೇಷಣ ವಾಗಿ ಹೇಳುವ ಹಂಸಪಕ್ಷಿ ಈ ಕಾಲದಲ್ಲಿ ಇದೆಯೆ? ಇದ್ದರೆ ಅದು ಯಾವುದು?" ಎಂಬ ವಿಷಯವನ್ನು ಕುರಿತು ಒಂದು ದೊಡ್ಡ ಯುದ್ಧವೇ ನಡೆದು ಹೋಯಿತು. ಕವಿರಾಯರು, "ಹಂಸ ಎಂಬುದು ಕಾಗಿಯೇ ಇರಬೇಕು. ಏಕೆಂದರೆ ಕಾಗೆಯೊಂದೇ ಪಕ್ಷಿಗಳಲ್ಲಿ ನಡೆಯುಲ್ಲಿ ಶ್ರೇಷ್ಠವಾಗಿದೆ. ಆದುದ ರಿಂದ ಕಾಗಿಯೇ ಹಂಸವಾಗಿರಬೇಕು." ಎಂದು ಇದಕ್ಕೆ ಆಧಾರಗಳನ್ನು ಕೊಟ್ಟು ಸಾಧಿಸಿದರು. ಅಮ್ಮೆಯ್ಯಪ್ಪ ಪಿಳ್ಳೈ, "ಅಲ್ಲ; ಅಲ್ಲ; 'ಅನ್ನಂ' ಊಟ ಮಾಡುವ ಬಿಳಿಯ ಪದಾರ್ಥ. (ಸಂಸ್ಕೃತದ 'ಹಂಸ' ಶಬ್ದಕ್ಕೆ ತಮಿಳಿನಲ್ಲಿ 'ಅನ್ನಂ' ಎಂಬುದು ತದ್ಭವ—ಕನ್ನಡದಲ್ಲಿ 'ಅಂಚೆ') ಹಂಸ ಪಕ್ಷಿಗೂ ಊಟವಮಾಡುವ ಅನ್ನಕ್ಕೂ ಸಾಮ್ಯಗಳಿವೆ. ಎರಡೂ ಬಿಳಿಯ ವರ್ಣ, ಎರಡೂ ಭೋಜ್ಯ ವಸ್ತುಗಳು — ಅಂದರೆ ಒಂದನ್ನು ನೋಡಿ ಆನಂದಿಸುತ್ತೇವೆ, ಮತ್ತೊಂದನ್ನು ತಿಂದು ಆನಂದಿಸುತ್ತೇವೆ" ಇತ್ಯಾದಿಯಾಗಿ ಇದರ ವಾಕ್ಯಾರ್ಥವನ್ನು ಸಾವಿರಾರು ಪದ್ಯಗಳ ಸಹಾಯ ದಿಂದ ವಿಶದಗೊಳಿಸಿದರು. ಮೊದಲು ಈ ಯುದ್ಧ ಕಾಗದಗಳ ಮೂಲಕ ನಡೆಯಿತು. ಅನಂತರ ಈ ಇಬ್ಬರು ವಿದ್ವಾಂಸರೂ ಮಧುರೆಯಲ್ಲಿ ಸಮ ಕ್ಷಮ ಸೇರಿ ಹತ್ತು ರಾತ್ರಿ, ಹತ್ತು ಹಗಲು ನೆರೆಹೊರೆಯಲ್ಲಿರುವ ಮನೆ ಯವರನ್ನು ನಿದ್ದೆ ಮಾಡಲು ಬಿಡದಂತೆ ಯುದ್ಧಮಾಡಿದರು. ಕೊನೆಯಲ್ಲಿ ಒಂದು ರಾತ್ರಿ ಅಮ್ಮೆಯ್ಯಪ್ಪ ಪಿಳ್ಳೈಯವರು ಗವುಂಡಯನ್ ಕೋಟ್ಟೈಯ ಕವಿರಾಯರನ್ನು ಹಂಸವನ್ನು ಕಾಗೆಯೆಂದು ಹೇಳಿದುದಕ್ಕಾಗಿ ಅವರನ್ನೇ "ಕಾಗೆ" ಯೆಂದು ಪರಿಹಾಸ್ಯ ಮಾಡಿದರು. ಅವರು ಇವರನ್ನು ಹಂಸ-ವನ್ನು ಊಟಮಾಡುವ ಅನ್ನವೆಂದು ಹೇಳಿದುದಕ್ಕಾಗಿ 'ಸಾಪಾಡರಾಮ' ಎಂದು ಪರಿಹಾಸ್ಯ ಮಾಡಿದರು. ಆಗ ಇವರು ಅವರನ್ನು 'ಕಪಿವರ್ಯರು' ಎಂದರು. ಅವರು ಇವರನ್ನು ಸಿಡುಬಿನ ಕಲೆಗಳು ಮುಖದಲ್ಲಿದ್ದುದರಿಂದ "ಅಮ್ಮೈಯಪ್ಪ ಪಿಳ್ಳೈ" ಎಂಬ ಹೆಸರು ಅನ್ವರ್ಥವಾಗಿದೆಯೆಂದರು. ('ಅಮ್ಮೈ' ಎಂದರೆ 'ಸಿಡುಬು' ಎಂದರ್ಥ.) ಆಗ ಇಬ್ಬರಿಗೂ ಕೋಪಾ

ವೇಶ ಉಂಟಾಗಿ ಹೊಡದಾಟವೇ ಪ್ರಾರಂಭವಾಯಿತು. ಅಮ್ಮಯ್ಯಪ್ಪ ಪಿಳ್ಳೈಯವರು ಕವಿರಾಯರನ್ನು ಹೊಡೆದರು. ಕವಿರಾಯರು. “ ನಾನೇನು ನಿನಗೆ ಜಗ್ಗುವೆನೇ ” ಎಂದು ಹೇಳಿ ಇವರಿಗೂ·ಒಂದು ಪೆಟ್ಟನ್ನು ಕೊಟ್ಟರು. ಅಲ್ಲಿದ್ದ ಪೋಲೀಸಿನವರು ಇದು ವಿದ್ವಾಂಸರಲ್ಲಿ ಉಂಟಾಗಿರುವ ತರ್ಕ, ವಾಕ್ಯಾರ್ಥ ಎಂಬ ಜ್ಞಾನವಿಲ್ಲದೆ ಈ ಹೊಡೆದಾಟವನ್ನು ಬಿಡಿಸಿ, ಆಚೆ ಕಳುಹಿಸಿದರು. ಬೆಳಗಾಗುವುದರೊಳಗಾಗಿ ಕವಿರಾಯರು ಯಾರಿಗೂ ತಿಳಿಯದಂತೆ ತಮ್ಮ ಊರಿಗೆ ಹೊರಟುಬಿಟ್ಟರು. ಅಮ್ಮಯ್ಯಪ್ಪ ಪಿಳ್ಳೈ ಈ ಕವಿರಾಯರು ಓಡಿಹೋದರೆಂದು ವಿಚಾರಿಸಿ ತಿಳಿದುಕೊಂಡು, ತಾವು ಕವಿರಾಯರನ್ನು ಜಯಿಸಿದುದಾಗಿ ಡಂಗುರ ಸಾರಿದರು. ಅಮ್ಮಾಪಟ್ಟಿಯಲ್ಲಾದರೋ ಕವಿರಾಯರೇ ಗೆದ್ದುದಾಗಿ ಪ್ರಚಾರ ನಡೆಯಿತು. ಹಂಸ ಪಕ್ಷಿಯ ವಿಷಯದಲ್ಲಿ ಆರಂಭವಾದ ತರ್ಕ ಹೀಗೆ ಕೊನೆಗಂಡಿತು.

ಇಷ್ಟು ಪ್ರತಾಪಶಾಲಿಯಾದ ಅಮ್ಮಯ್ಯಪ್ಪ ಪಿಳ್ಳೈಯವರು ಪಾಠಶಾಲೆಗೆ ಬಂದಕೂಡಲೆ ಗಂಭೀರವಾಗಿ ಸುತ್ತು-ಮುತ್ತಲೂ ದೃಷ್ಟಿಯನ್ನು ಬೀರಿ ತಮ್ಮ ಆಸನದಲ್ಲಿ ಮಂಡಿಸಿದರು. ಅವರನ್ನು ಸುತ್ತುವರಿದಿದ್ದ ವರ್ಗ ಮೆಟ್ರಿಕ್ಯುಲೇಷನ್ ವರ್ಗ. ಆಗ ಅವರಿಗೆ “ ನಳಚರಿತ್ರೆ ” ಪಠ್ಯಪುಸ್ತಕ. ಅದರಲ್ಲಿ ಸ್ವಯಂವರ ಘಟ್ಟದ ಪದ್ಯಗಳನ್ನು ಹೃದಯಂಗಮವಾಗಿ ಓದಿ, ತಮ್ಮ ವಾಚನವನ್ನು ಹುಡುಗರು ಮೆಚ್ಚುತ್ತಾರೆಯೋ ಎಂದು ಸುತ್ತು ಮುತ್ತು ನೋಡಿದರು. ಆ ವರ್ಗದಲ್ಲಿ ರಾಮಸ್ವಾಮಿ ಎಂಬ ಹೆಸರಿನ ವಿದ್ಯಾರ್ಥಿಯೊಬ್ಬನಿದ್ದ. ಅವನು ಹಾಸ್ಯಗಾರನಾಗಿದ್ದುದರಿಂದ ಅವನನ್ನು ತೆನಾಲಿ ರಾಮನೆಂದು ಹುಡುಗರು ಕರೆಯುತ್ತಿದ್ದರು. ಉಪಾಧ್ಯಾಯರ ಹಾವಭಾವವನ್ನರಿತು ಆ ತೆನಾಲಿ ರಾಮನು, “ ಅಯ್ಯನವರೆ, ಮತ್ತೊಂದು ಸಲ ಓದಬೇಕು. ಕೇಳುವಷ್ಟು ಆನಂದವಾಗುತ್ತದೆ. ಪುಸ್ತಕವೊ ‘ನಳಚರಿತ್ರೆ’ಯಂತಹ ರಸವತ್ತಾದ ಪದ್ಯಗ್ರಂಥ. ಓದುವವರೋ ಇಂಥವರೆಂದು ಹೇಳಬೇಕಾಗಿಲ್ಲ. ” ಎನ್ನಲು ಉಪಾಧ್ಯಾಯರು ತಮ್ಮೊಳಗೇ ಹಿಗ್ಗುತ್ತ, “ ಓದುವವರು ಯಾರು ? ಆಡುಸಾಪಟ್ಟಿ ಅಮ್ಮಯ್ಯಪ್ಪ ಪಿಳ್ಳೈಯೆಂದು ಹೇಳು. ” ಎಂದರು. ಹುಡುಗನು, “ಅಯ್ಯನವರೇ, ತಮ್ಮ ಹೆಸರನ್ನು ಪೂರ್ತಿಯಾಗಿ

ಹೇಳಬೇಕು. " ಎಂದಕೂಡಲೆ ಗುರುಗಳು, " ನನ್ನ ಹೆಸರೆ? ಹೇಳುತ್ತೇನೆ ಕೇಳು. ಸಾಗರದಿಂದ ಆವೃತವಾದ ಈ ಭೂಮಂಡಲಕ್ಕೇ ತಿಲಕಪ್ರಾಯ ನಾದ ಆಡುಸಾಪಟ್ಟಿ ಮಹಾವಿದ್ವಾನ್ ಅಮ್ಮೈಯ್ಯಪ್ಪ ಪಿಳ್ಳೆ " ಎಂದು ಹೇಳಿದರು. ತೆನಾಲಿರಾಮನು ಮೆತ್ತಗೆ, " ಒಂದು ಬಂಡಿಯಲ್ಲಿ ಹೇರು ವುದಕ್ಕಿಂತಲೂ ಹೆಚ್ಚಾಗಿದೆ " ಎಂದು ಹೇಳಿಕೊಳ್ಳುತ್ತ, " ಅಯ್ಯನವರೇ, ಬಂದಿನಂತೆ ಆಮೂಲಾಗ್ರವಾಗಿ ಅಪ್ಪಣೆ ಕೊಡಿಸಲಿಲ್ಲವಲ್ಲ" ಎಂದು ವಿಜ್ಞಾಪಿಸಿ ಕೊಂಡನು. ಉಪಾಧ್ಯಾಯರು, " ಹೊತ್ತಾಯಿತು, ಆಮೇಲೆ ಹೇಳೋಣ ವಂತೆ " ಎಂದರು. ಹುಡುಗನು, " ಇಲ್ಲ, ಹೇಳಲೇಬೇಕು. " ಎಂದು ಒತ್ತಾಯ ಮಾಡಿದನು. ಕೂಡಲೇ ಗುರುಗಳು, " ಸಾಗರದಿಂದ ಆವೃತ ವಾದ ಈ ಭೂಮಂಡಲಕ್ಕೆ ತಿಲಕಪ್ರಾಯವಾದ ಆಡುಸಾಪಟ್ಟಿಯಲ್ಲಿ ಅವತರಿಸಿದ ಸಮಸ್ತರ ಪ್ರಶಂಸೆಗೂ ಪಾತ್ರರಾದ ಅಷ್ಟಾವಧಾನಿಗಳೂ ಶ್ರೇಷ್ಠ ತಮಿಳ್ ಪ್ರವೀಣರೂ ಆದ, ಮಹಾ ವಿದ್ವಾನ್ ಅಮ್ಮೈಯ್ಯಪ್ಪ ಪಿಳ್ಳೆ ಅವರು. ಈಗ ಸರಿ ಹೋಯಿತೆ? " ಎಂದು ಕೇಳಿದಕೂಡಲೇ ಎಲ್ಲರೂ ಗೊಳ್ಳೆಂದು ನಕ್ಕರು. ಉಪಾಧ್ಯಾಯರು ಬಾಯಿಗೆ ಅಡ್ಡವಾಗಿ ಬೆರಳನ್ನಿಟ್ಟು " ನಗಬೇಡಿ. ಹೆಡ್ಮಾಸ್ಟರು ಬಂದುಬಿಡಬಹುದು " ಎಂದು ಹೇಳಿ ಮತ್ತೆ ಪದ್ಯವನ್ನು ಓದಿ, " ಆ ನಗರದಲ್ಲಿ ಸ್ತ್ರೀಯರ ಎದೆಗೆ ಬಳಿದುಕೊಂಡಿದ್ದ ಚಂದನವು ಸ್ನಾನ ಮಾಡುವಾಗ ಕರಗಿ ಬೀದಿಯಲ್ಲೆಲ್ಲ ಕೆಸರಾಗಿ ಹರಿಯಿತು. ಆ ನಗರದ ಬೀದಿಗಳಲ್ಲಿ ಆನೆಗಳು ಆ ಕೆಸರಿನಲ್ಲಿ ಬಿದ್ದು ಹೊರಳಾಡಿದುವು. ಎಷ್ಟು ಚಂದನ, ಎಷ್ಟು ಕೆಸರು ! ಸೊಗಸಾದ ಪದ್ಯ—ಆಹಾ !! " ಎಂದು ವಿವರಣೆಯನ್ನಿತ್ತು ಮತ್ತೆ ಆ ಪದ್ಯವನ್ನು ಓದಲು ಉಪಕ್ರಮಿಸಿದರು. ಆ ಹೊತ್ತಿಗೆ ತೆನಾಲಿ ರಾಮನು ಎದ್ದು, " ಅಯ್ಯನವರೇ! ಒಂದು ಸಂದೇಹ. ಆ ಊರಿನಲ್ಲಿ ಆನೆಗಳಿಗೇ ಈ ಪಾಡಾದರೆ, ಮನುಷ್ಯರು ಓಡಾಡುವುದು ಹೇಗೆ? " ಎಂದು ಕೇಳಿದನು.

ಉಪಾಧ್ಯಾಯರು:– " ಆ ಊರಿನಲ್ಲಿ ಮನುಷ್ಯರು ನಡೆಯುತ್ತಿದ್ದರೆ? ಪಲ್ಲಕ್ಕಿಯಲ್ಲಿ ಹೋಗುತ್ತಿದ್ದರು. ಈ ಕಾಲದ ದರಿದ್ರ ಪಟ್ಟಣಗಳಂತೆಯೆ?"

ತೆನಾಲಿ ರಾಮ:- “ ಅಯ್ಯನವರೆ ! ಎಲ್ಲರೂ ಪಲ್ಲಕ್ಕಿಯನ್ನೇರಿದ
ಹೊರುವವರು ಯಾರು ? ಹೊರುವವರು ಹೇಗೆ ನಡೆಯುವುದು ? ”

ಉಪಾಧ್ಯಾಯರು:-“ಪಲ್ಲಕ್ಕಿಯೆಂದರೆ— ಪಲ್ಲಕ್ಕಿಯಲ್ಲ— ಸಾರೋಟ
ಗಳಲ್ಲಿ ಸವಾರಿ ಮಾಡುವರು. ”

ತೆನಾಲಿರಾಮ:- “ ಹಾಗಾದರೆ, ಕುದುರೆಗಳು ಕೆಸರಿನಲ್ಲಿ ಜಾರಿ ಬೀ
ಳಾರವೇ ? ”

ಉಪಾಧ್ಯಾಯರು:- “ ಹೀಗೆಲ್ಲ ಕೇಳುತ್ತ ಹೋದರೆ ಸರಿಹೋಗ
ಲಾರದು. ಪದ್ಯದಲ್ಲಿ ಮೂರು ವಿಷಯಗಳನ್ನು ಹೇಳಿದ್ದಾರೆ. ಆ ವರ್ಣ
ನೆಯು ಸೊಗಸೇ ಸೊಗಸು. ಏನು ಹೇಳುತ್ತೀಯ ? ಆ ಊರಿನಲ್ಲಿ ಚಂದನ
ವನ್ನು ಹೇರಳವಾಗಿ ಬಳಿದುಕೊಳ್ಳುತ್ತಾರೆ. ಅದು ಬೀದಿಯಲ್ಲೆಲ್ಲ ಹರಿದ
ಕೆಸರಾಗುತ್ತದೆ. ಮೂರನೆಯದಾಗಿ ಆ ಊರಿನಲ್ಲಿ ಆನೆಗಳಿದ್ದುವು. ”

ಇನ್ನೊಬ್ಬ ಹುಡುಗನೆದ್ದು, “ ಸ್ವಾಮಿ, ಇನ್ನೂ ಎರಡು ವಿಷಯ
ಗಳನ್ನು ಬಿಟ್ಟುಬಿಟ್ಟಿರಿ. ಆ ಊರಿನಲ್ಲಿ ಸ್ತ್ರೀಯರೂ ಇದ್ದರು. ಎರಡನೆಯ
ವಿಷಯ ಅವರು ಕೂಡಾ ಸ್ನಾನ ಮಾಡುತ್ತಿದ್ದರು. ” ಎಂದು ಹೇಳಿದನು

ಉಪಾಧ್ಯಾಯರು: “ ಕಲಿಕಾಲದ ಮಕ್ಕಳು ಮಹಾ ಅಧಿಕ ಪ್ರಸಂಗಿ
ಮಿತಿಮೀರಿ ಮಾತಾಡುವಂತೆ ಕಾಣುತ್ತದೆ.” ಎಂದು ಹೇಳಿದ ಕೂಡಲೇ ಹುಡು
ಗನು “ ಅಪ್ಪಾ, ನಾನು ಅಧಿಕಪ್ರಸಂಗಿ-ನೀವು ಎಲ್ಲರಿಗೂ ದೊಡ್ಡವರು ”
ಎಂದು ಮಾರುತ್ತರವಿತ್ತನು. ಅದನ್ನು ಕೇಳಿ ಉಪಾಧ್ಯಾಯರಿಗೆ ಕೋಪ
ಉಕ್ಕೇರಿ, ಮುಂದಿನ ಪದ್ಯಗಳನ್ನು ಬಡಬಡವೆಂದು ವೇಗವಾಗಿ ಓದಿ ತಾತ್ಪರ್ಯ
ವನ್ನು ತಿಳಿಸಿ ಮುಂದುವರಿದರು. ಹುಡುಗರು ಇವರ ಪಾಠವನ್ನು ಗಮನಿ
ಸದೆ, ಕೆಲವರು ಹರಟೆ ಹೊಡೆಯುತ್ತಿದ್ದರು, ಕೆಲವರು ಮುಂದಿನ ಪೀರಿ
ಯಡ್ಡಿನ ಪಾಠವನ್ನು ಓದುತ್ತಿದ್ದರು, ಕೆಲವರು ನಿದ್ರಿಸಿದರು. ಸ್ವಲ್ಪ
ಹೊತ್ತಿಗೆಲ್ಲಾ ಉಪಾಧ್ಯಾಯರಿಗೂ ನಿದ್ದೆ ಬಂದಿತು.

ಒಂದು ಪದ್ಯವನ್ನು ಅರ್ಧನಿದ್ದೆಯ ಕಣ್ಣಿನಲ್ಲಿಯೇ ಓದಿದರು—ಮಧ್ಯ
ಒಂದು ಮಾತು ಬಿಟ್ಟು ಹೋಯಿತು. ಹಾಗೆಯೇ ಧ್ವನಿ ಕುಗ್ಗಿತು. ನಿದ್ದೆ
ಅವರನ್ನು ವಶಮಾಡಿಕೊಂಡಿತು. ಓದುವುದು ನಿಂತಿತು—ತಲೆ ಊಗ

ಲಾಡಿತು. ಮತ್ತೆ ಬೆಚ್ಚಿ ಬಿದ್ದು ಎಚ್ಚರಗೊಂಡು ಎರಡು ಮಾತುಗಳು ಬಾಯಿಂದ ಹೊರಟವು. ಮತ್ತೆ ಧ್ವನಿ ನಿಂತಿತು, ಐದು ನಿಮಿಷದ ಮೌನ. ಇದ್ದಕ್ಕಿದ್ದ ಹಾಗೆ ಎಚ್ಚರಗೊಂಡು, ನಿದ್ದೆಯೇ ಹೋಗದವರಂತೆ ನಟಿಸಿ ಯಾವುದನ್ನೋ ಯೋಚಿಸುತ್ತಿದ್ದವರಂತೆ ಸವರಿಸಿಕೊಂಡು, " ಹಾಗೆಯೇ. ಈಗ ಸರಿ ಹೋಯಿತು! " ಎಂದು ಹೇಳಿಕೊಳ್ಳುತ್ತ ಮುಂದೆ ಸಾಗಿದರು. ಆಮೇಲೆ ಮಾತು ನಿಂತಿತು. ಮತ್ತೆ ಗಾಢ ನಿದ್ರೆ.

ಇದನ್ನೆಲ್ಲ ನೋಡುತ್ತಿದ್ದ ಕೆಲವರು ಹುಡುಗರು ಉಪಾಧ್ಯಾಯರು ನಿದ್ರೆ ಹೋಗಿಬಿಟ್ಟರು ಎಂಬ ವಾರ್ತೆಯನ್ನು ಎಲ್ಲ ಕಡೆಗೂ ಹರಡಿದರು. ಅಷ್ಟರಲ್ಲಿ ಕೃಷ್ಣಸ್ವಾಮಿ ಎಂಬ ಒಬ್ಬ ಹುಡುಗ, " ಮಾತಾಡದೆ ಇರಿ—ತಮಾಷೆಯನ್ನು ನೋಡಿ " ಎಂದು ಹೇಳಿ ಸ್ವಲ್ಪ ಸೀಮೆ ಸುಣ್ಣವನ್ನು ತೆಗೆದುಕೊಂಡು, ಅದನ್ನು ಪುಡಿ ಪುಡಿ ಮಾಡಿ ಗದ್ದಲ ಮಾಡದೆ ತನ್ನ ನಗುವನ್ನು ಅಡಗಿಸಿಕೊಂಡು ಮೇಜಿನಲ್ಲಿದ್ದ ಮಸಿತುಂಬಿದ್ದ ಒಂದು ಕುಡಿಕೆಯಲ್ಲಿ ಅದನ್ನು ಹಾಕಿದನು. ಅದು ಸ್ವಲ್ಪ ಹೊತ್ತಿಗೆ 'ಡಭಾರ್' ಎಂದು ಸಿಡಿದು ಅಮ್ಮಯ್ಯ ಪಿಳ್ಳೈಯ ಕಣ್ಣು, ಮೂಗು, ಮುಖ, ಅಂಗಿ—ಇವುಗಳ ಮೇಲೆ ಬಿದ್ದಾಗ ಅವರು ಬೆಚ್ಚಿ ಬಿದ್ದು ಎದ್ದು, " ಇದು ಯಾವ ಪೋಲಿಯ ಕೆಲಸ?" ವೆಂದು ಆರ್ಭಟಿಸಲು ಹುಡುಗರೆಲ್ಲರೂ ಗೊಳ್ಳೆಂದು ನಕ್ಕರು. ತೆನಾಲಿ ರಾಮನಾದರೊ, ಉಪಾಧ್ಯಾಯರ ಪರಿಸ್ಥಿತಿಯನ್ನು ನೋಡಿ ಕನಿಕರಿಸಿದವನಂತೆ ನಟಿಸಿ, " ಎಲೆಲಾ, ಮೂಗು, ಮುಖ—ಎಲ್ಲಾ ಮಸಿಯಾಗಿ ಬಿಟ್ಟಿವೆ? ಅಂಗಿ ಎಲ್ಲಾ ಕೆಟ್ಟು ಹೋಯಿತಲ್ಲಾ ಸಾರ್. ಇದು ಯಾವ ಹುಡುಗ ಮಾಡಿದ ಕೆಲಸ ? ಮುಟ್ಠಾಳ, ಉಪಾಧ್ಯಾಯರಿಗಿರುವ ಒಂದು ಅಂಗಿಯ ಮೇಲೆ ಮಸಿ ಬಿದ್ದರೆ—ಆ ಮೇಲೆ ನಾಳೆಗೆ ಅವರು ಏನನ್ನು ತೊಡುವರೆಂಬುದನ್ನು ಅರಿಯಬೇಡವೇ ? ನೀವು ಇಲ್ಲಿರುವಾಗಲೇ ಹುಡುಗರು ಹೀಗೆ ಮಾಡುವುದುಂಟೇ ? ಇಷ್ಟಕ್ಕೂ ನೀವು ನಿದ್ದೆ ಮಾಡಲಿಲ್ಲವಲ್ಲಾ " ಎಂದು ಸಮಾಧಾನಪಡಿಸಿದನು. ಆಗ ಉಪಾಧ್ಯಾಯರು, " ಯಾವ ಹುಡುಗ ಮಾಡಿದ್ದು? ಮರ್ಯಾದೆಯಿಂದ ನಿಜ ಹೇಳಿ ಬಿಡಲಿ, ಕ್ಷಮಿಸುತ್ತೇನೆ. ಇಲ್ಲವಾದರೆ ಹೆಡ್‌ಮಾಸ್ಟರಿಗೆ ಹೇಳಿ ಹೆಸರನ್ನು ವಜಾ ಮಾಡಿಸುತ್ತೇನೆ. " ಎಂದು ಹೆದ

ರಿಸಿದರು. ಮುತ್ತುಸ್ವಾಮಿ ಎಂಬ ಹುಡುಗ, "ನೀವು ಹೋಗಿ ಹೆಡ್ ಮಾಸ್ಟರ್ ಬಳಿ ಹೇಳಿ ಸ್ವಾಮಿ, ಅದೇ ಸರಿ. ಇಲ್ಲದಿದ್ದರೆ ನಿಜ ಹೊ ಬೀಳಲಾರದು." ಎಂದು ಹೇಳಿದನು. ರಾಮಯ್ಯ ಎಂಬ ಹುಡುಗ, "ಉಪಾಧ್ಯಾಯರು ಶಾಲೆಯಲ್ಲಿ ನಿದ್ದೆ ಹೋದುದು ನಿಜವೇ?" ಎಂದು ಕೇಳಿದನು. ಆಗ, "ನಾನು ಹೆಡ್‌ಮಾಸ್ಟರ್ ಬಳಿಗೆ ಹೋಗುತ್ತೇನೆ." ಎಂದು ಉಪಾಧ್ಯಾಯರು ಹೊರಟರು. ಕೃಷ್ಣಸ್ವಾಮಿ, "ನಾವು ನೋಡಿದ್ದು ಸಾಲದ ಎಲ್ಲರೂ ನೋಡಬೇಡವೇ ಈ ವೇಷವನ್ನು? ಹೋಗಿ ಸಾರ್." ಎಂದು ಹೇಳಿದನು. ಲಕ್ಷ್ಮಣನು, "ಅಲ್ಲಿ ಹೋದರೆ ಉಪಾಧ್ಯಾಯರಿಗೆ ತಾನೆ ದಂಡ ಬೀಳುವದು. ಮಸಿ ಹಾಕಿದಾಗ ನೀವು ಎಲ್ಲಿಗೆ ಹೋಗಿದ್ದಿರಿ ಎಂದು ಕೇಳಿದರೆ 'ನಿದ್ದೆ ಮಾಡುತ್ತಿದ್ದೆ' ಎಂದು ಹೇಳುವರೇ? ಹಾಗೆ ಹೇಳಿದರೆ ದಂಡ ಬೀಳುವದು ನಿಶ್ಚಯ" ಎಂದು ಹೇಳಿದನು. ಉಪಾಧ್ಯಾಯರಿಗೆ ಏನು ಮಾಡಬೇಕೆಂದು ತೋರದೆ ಮತ್ತೆ ತಾವಿದ್ದ ಸ್ಥಳಕ್ಕೆ ಬಂದು, "ನಾ ಯಿಂದ ಹೀಗೆ ಮಾಡಿ, ತೋರಿಸುತ್ತೇನೆ ನಿಮಗೆ" ಎಂದು ಎಚ್ಚರಿಸಲು ಸುಬ್ಬುಕುಟ್ಟಿ ಎಂಬ ಹುಡುಗ, "ನಾಳೆಯೂ ಮಾಡಿದರೆ ಈ ಹೊತ್ತು ಮಾಡಿದಂತೆ ಮಾಡುವಿರಾ?" ಎಂದು ಕೇಳಿದನು.

ಒಬ್ಬ ಬ್ರಾಹ್ಮಣ ಒಬ್ಬರ ಮನೆಗೆ ಹೋಗಿ, "ನನಗೆ ಅನ್ನ ಹಾಕು ತ್ತೀರಾ, ಇಲ್ಲ ನಿನ್ನೆ ಅಲ್ಲಿ ಮಾಡಿದಂತೆ ಮಾಡಿಬಿಡಲೇ?" ಎಂದನಂತೆ ಮನೆಯಾಕೆ ಹೆದರಿ, "ಹಾಗೆಲ್ಲಾ ಒಂದೂ ಮಾಡಬೇಡಿ. ನಾವು ದೇವರು ಎಂದು ಬಿದ್ದಿದ್ದೇವೆ. ಅನ್ನ ಹಾಕುತ್ತೇನೆ, ಊಟ ಮಾಡಿಕೊಂಡು ಹೋಗಿ" ಎಂದು ಒಳಗೆ ಕರೆದು ಅನ್ನ ಹಾಕಿದಳಂತೆ. ಊಟ ಮಾಡಿದಮೇಲೆ ಆ ಬ್ರಾಹ್ಮಣ ಹೊರಕ್ಕೆ ಬಂದಾಗ, "ನಿನ್ನೆ ಏನು ಮಾಡಿದಿರಿ ಹೇಳಿ" ಎಂದು ಕೇಳಿದಾಗ ಆತನು, "ಹೇಳಿ ಬಿಡಲೇ?" ಎನ್ನಲು, "ಊಟವಾಯಿತಲ್ಲವೇ ಹೇಳಿಯೇ ಬಿಡಿ" ಎಂದು ಆಕೆ ಹೇಳಿದಳು. "ನಾನು ಹೇಳಿಯೇ ಬಿಡು ತ್ತೇನೆ." ಎಂದು ಬ್ರಾಹ್ಮಣನು ಮತ್ತೆ ಹೆದರಿಸಿದನು. "ಹೇಳಿ" ಎಂದು ಕೇಳಿದಳು ಆಕೆ. ಆಗ ಬ್ರಾಹ್ಮಣನು ಹೇಳಿದನಂತೆ, "ನಿನ್ನೆಯೇ? ಈ ಎಡಗೈ ಇದೆಯಲ್ಲವೇ? ಇದನ್ನು ಕೆಳಗಿಟ್ಟುಕೊಂಡು ಉಪವಾಸ ಮಾಡುತ್ತ ಮ

ಗಿಯೇ ಬಿಟ್ಟೆ."- ಹೀಗೆಂದು ಒಂದು ಕಥೆಯುಂಟು. ಹಾಗೆ ಉಪಾಧ್ಯಾಯರೂ ಸ್ವಲ್ಪ ಹೆದರಿಸಿ ನೋಡಿದರು. ಫಲಿಸಲಿಲ್ಲ. ರಾಮಸುಬ್ಬನ್ ಎಂಬ ಹುಡುಗ, "ಇಲ್ಲ ಇಲ್ಲ. ನಾಳೆ ಹೀಗೆ ಮಾಡಿದರೆ ಅತ್ತು ಬಿಡುವರು." ತೆನಾಲಿ ರಾಮನು, " ಸುಮ್ಮನೆ ಇರೋ ಅವರು ಈಗಲೇ ಅಳುವ ಹಾಗೆ ತೋರುತ್ತದೆ. ನಾಳೆ ಅಳುತ್ತಾರಂತೆ. ನಾಳೆಯಿಂದ ಶಾಲೆಯಲ್ಲಿ ನಿದ್ದೆ ಮಾಡಿದರೆ ತಾನೆ. ಅವನು ಬಿದ್ದಿರುತ್ತಾನೆ. ನಾಳೆ ಮೊದಲು ನೀವು ನಿದ್ದೆಮಾಡಬೇಡಿ ಸಾರ್ " ಎಂದು ಹೇಳುತ್ತ ಅವರ ಮೇಲೆ ಬಿದ್ದಿದ್ದ ಮಸಿಯನ್ನು ಒರೆಸುನಂತೆ ಮಾಡಿ, ಅಂಗಿಯೆಲ್ಲ ಮಸಿಮಾಡಿ, ಮುಖವನ್ನು ಹಾಗೆಯೇ ತಿದ್ದಿ ವಿಕಾರಗೊಳಿಸಿದನು. ಅವರು ಪಾಪ ಮೊಹರಂಹಬ್ಬದಲ್ಲಿ ವೇಷ ಹಾಕುವವರಂತೆ ಕಾಣುತ್ತ ಎಲ್ಲರ ಹಾಸ್ಯಕ್ಕೂ ಗುರಿಯಾದರು.



## ೮. ಚೆಲುವಾದ ಒಳ್ಳೆಯ ಹುಡುಗ

ಇಲ್ಲಿ ಹೀಗೆ ಆಗುತ್ತಿರಲು, ಆ ವರ್ಗಕ್ಕೆ ಸಮೀಪದಲ್ಲಿರುವ ವ್ಯಾಯಾಮ ಮಾಡುವುದಕ್ಕೆ ಏರ್ಪಾಡಾಗಿದ್ದ ಒಂದು ಕೊಟ್ಟಿಗೆಯಲ್ಲಿ ಅಮ್ಮಯ್ಯ ಪಿಳ್ಳೆಯ ವಿದ್ಯಾರ್ಥಿಗಳೂ ಮೆಟ್ರಿಕ್ಯುಲೇಷನ್ ವರ್ಗದಲ್ಲಿ ಓದುತ್ತಿದ್ದವರೂ ಆದ ಶ್ರೀನಿವಾಸನ್ ಮತ್ತು ಸುಬ್ಬರಾಯನ್ ಎಂಬ ಹೆಸರಿನ ಹುಡುಗರು ಗಟ್ಟಿಯಾದ ಧ್ವನಿಯಲ್ಲಿ ಮಾತನಾಡಿಕೊಳ್ಳುತ್ತಿದ್ದರು. ಶ್ರೀನಿವಾಸನಿಗೆ ಹದಿನಾರು ವರ್ಷಗಳಿರಬಹುದು. ಅವನೇ ಶಿರುಕುಳದ ಮುತ್ತುಸ್ವಾಮಿ ಅಯ್ಯರ ಮನೆಯಲ್ಲಿ ನಿಶ್ಚಿತಾರ್ಥ ಮುಗಿಸಿಕೊಂಡು ಬಂದಿದ್ದ ರಾಮಸ್ವಾಮಿ ಶಾಸ್ತ್ರಿಗಳ ಮೊಮ್ಮಗ. ಅವರ ತಂದೆ ಕಲೆಕ್ಟರ್ ಆಫೀಸಿನಲ್ಲಿ ಶಿರಸ್ತೇದಾರರಾಗಿದ್ದ ನಾರಾಯಣ ಅಯ್ಯರ್. ಅವನ ಪುಷ್ಪಲತೆಯಂತಹ ತೆಳುವಾದ ಶರೀರವೂ, ಎರಕ ಹುಯ್ದ ಚಿನ್ನದ ಬಣ್ಣದ ದೇಹಕಾಂತಿಯೂ, ಅರಳಿದ ಗುಲಾಬಿ ಹೂವಿನಂತಿದ್ದ ಅವನ ವ... ...ದ್ದ ಅವನ ಕಣ್ಣುಗಳೂ, ಉದ್ದವಾದ ವ... ...ಪ್ಪ ಬಾಗಿ, ಚೂಪಾದ ಕೊಳೆಯುಳ್ಳದ್ದು- ...ೂ



ತೊದಲು ಇನ್ನೂ ಚೆನ್ನಾಗಿ ಮಾರ್ಪಡದಿದ್ದ ಮಾತೂ, ಅವನ ಬುದ್ಧಿ ಉತ್ಸಾಹವೂ, ಶಾಂತ ಗುಣವೂ ಇವೆಲ್ಲವೂ ಕಂಡವರೆಲ್ಲರನ್ನೂ ಮು ರಾಗುವಂತೆ ಮಾಡಿದುವು. ಅವನೊಂದಿಗೆ ಓದುತ್ತಿದ್ದ ಕೊಟ್ಟೆ ಮು ರಾಮಯ್ಯ ಎಂಬುವನು ಇವನನ್ನು "ಲೇಡಿ," "ಸ್ತ್ರೀರತ್ನ" ಎ ಕರೆಯುತ್ತಿದ್ದನು. ಕುಂಟು ಸುಬ್ಬಯ್ಯನು ಇವನನ್ನು "ನನ್ನ ಕಣ್ಮಣಿಯೆ ಎಂದು ಸಂಬೋಧಿಸುವನು. ಹೊಟ್ಟೆಬಾಕ ವೈದ್ಯಿ ಇವನನ್ನು "ಮಾ ಹೆಣ್ಣು" ಎಂದು ಕರೆಯುವನು. (ತಮಿಳು) ಭಾಷೆಯನ್ನು ಸ್ವ ಅಭ್ಯಾಸ ಮಾಡಿದ್ದ ಮುತ್ತುಸ್ವಾಮಿ ಎಂಬುವನು ಅವನನ್ನು ಕಂಡಾಗ "ಅಯ್ಯೋ! ಇವನ ರೂಪಲಾವಣ್ಯ ಚ್ಯುತಿ ಇಲ್ಲದ ಚೆಲುವಿ ಕೂಡಿದುದು" ಎಂದು ಪ್ರೌಢವಾದ ರೀತಿಯಲ್ಲಿ ವರ್ಣಿಸುವನು. ಅದ ಉದಾಹರಣೆಯಾಗಿ ಪೂರ್ವಕಾಲದ ಕವಿಗಳ ಒಂದು ಪದ್ಯವನ್ನು ಹೇ ವನು. ತೆನಾಲಿ ರಾಮನು ಅವನನ್ನು "ನನ್ನ ಚಿನ್ನ" ಎಂದು ಕರೆಯುವ ಮಾತ್ರವಲ್ಲದೆ, ಉಪಾಧ್ಯಾಯರು ಬರಲು ಸ್ವಲ್ಪ ನಿದಾನವಾದರೆ ಶ್ರೀ ವಾಸನನ್ನು ನೋಡಿ, ಒಂದು ಪದ್ಯವನ್ನು ಹೇಳಿ ತಾಳ ಹಾಕುತ್ತ ಕೀತ ಯನ್ನೇ ಹಾಡಲು ಆರಂಭಿಸುವನು. ಇಂಗ್ಲೀಷ್ ಅಧ್ಯಾಪಕರಾದ ನಿತ್ಯಾನ ಪಿಳ್ಳೆಗೆ ಆ ಶಾಲೆಯಲ್ಲೆಲ್ಲ ಅವನೊಬ್ಬನೇ ಗೊತ್ತಿದ್ದು, ಹೆಡ್ ಮಾಸ್ಟ ತಿರುಮಲಾಚಾರಿಯವರು ಪಾಠ ಮಾಡುವಾಗ ಅವನೊಬ್ಬನನ್ನು ಮಾ ಗಮನಿಸುತ್ತ ಮುಂದುವರಿಸುವರು. ಚಿಟಚಿಟವೆಂದು ಕೋಪಿಸಿಕೊಳ್ಳುವ ತಮ್ಮ ಕಸಬಾಗಿ ಮಾಡಿಕೊಂಡಿದ್ದ ಸಂಸ್ಕೃತ ಉಪಾಧ್ಯಾಯರಾದ ಅಪ ಶಾಸ್ತ್ರಿಗಳು ಸಹ ಇವನು ತಮಿಳು ಓದುವ ವಿದ್ಯಾರ್ಥಿಯಾಗಿದ್ದ ಇವನನ್ನು ನೋಡಿ ದಿನಕ್ಕೊಂದು ಬಾರಿಯಾದರೂ ಮಾತನಾಡಿಸುವ ಪುರುಷಲಕ್ಷಣಗಳಲ್ಲಿ ತನಗೆ ಮಿಗಿಲಾದವರಿಲ್ಲವೆಂದು ಗರ್ವಿಸಿದ ಶೇಷ ಚಲನಿಗೆ ಮಾತ್ರ ಇವನಲ್ಲಿ ಮತ್ಸರವಿತ್ತು. ಇದ್ದರೂ ಶ್ರೀನಿವಾಸ ಈ ಶೇಷಾಚಲಂ ವಿಚಾರವನ್ನೆತ್ತಿ, "ಶೇಷು ನಡೆಯುವ ಠೀವಿಯೇ ಠೀ ಅವನೊಂದಿಗೆ ಓಡುವುದರಲ್ಲಿ ಯಾರು ಸ್ಪರ್ಧಿಸಲಾದೀತು" ಎಂದು ಆ ಗಡಿಗೆ ಆಡುತ್ತಿದ್ದನು. ಇದರಿಂದ ಶೇಷಾಚಲಂ ತಾಳಿದ ಮತ್ಸರ

ನಿವಾಸನನ್ನು ಹೊಗಳುವವರ ಮೇಲೆ ಬೇಸರವಾಗಿ ಮೂರ್ಪಟ್ಟಿತು. ಗೆ ಎಲ್ಲರಿಗೂ ಸ್ನೇಹಿತನಾಗಿದ್ದ ಶ್ರೀನಿವಾಸನಿಗೆ ಮುಖ್ಯ ಸ್ನೇಹಿತ ದರೆ ಸುಬ್ಬರಾಯನೆನ್ನುವ ಹುಡುಗ. ಅವನು ಮಧುರೆಯಲ್ಲಿ ತಹ ಸ್ದಾರರಾಗಿದ್ದ ಕುಪ್ಪುಸ್ವಾಮಿ ಅಯ್ಯರ ಮಗ. ಅವನಿಗೆ ಇಪ್ಪತ್ತು ರ್ಗಗಳಾಗಿರಬಹುದು. ಈಗ ಅವರ ಪರಿಚಯು ಮೂರು ವರ್ಷದ್ದು ಮಾತ್ರ. ರೆ ಇವರಿಬ್ಬರೂ ಸಂಧಿಸಿದಾಗಲೆ ಬಹಳ ವರ್ಷಗಳಿಂದ ಪಳಗಿದವರಂತೆ ಹಿತರಾದರು.

ಶ್ರೀನಿವಾಸನು ಓದುತ್ತಿದ್ದ ವರ್ಗದಲ್ಲಿ ಹೊಸದಾಗಿ ಬಂದು ಸೇರಿದ ಬ್ಬರಾಯನ್ ಆ ವರ್ಗದಲ್ಲಿ ಗಣಿತವನ್ನೊಂದು ಬಿಟ್ಟು ಉಳಿದ ಎಲ್ಲ ಠಗಳಲ್ಲಿಯೂ ಶ್ರೀನಿವಾಸನು ಮೊದಲಿಗನಾಗಿದ್ದುದನ್ನು ಕಂಡು ಆಶ್ಚರ್ಯ ಂಡ. ಅವನ ಸ್ನೇಹವನ್ನು ಮಾಡಬೇಕೆಂದು ಶಾಲೆ ಬಿಟ್ಟಕೂಡಲೇ ಸನನ್ನು ಹುಡುಕಿಕೊಂಡು ಹೋದ. ಅಂದು ಐದು ಗಂಟೆಗೇ ಶ್ರೀನಿವಾಸನು ನೆಗೆ ಹೊರಟಿದ್ದನು. ಹುಡುಗರ ಗುಂಪಿನ ಮಧ್ಯೆ ನಡೆದು ಹೋಗು ದ್ದನು. ಬೇಟೆ ನಾಯಿಯೊಂದು ಈ ಗುಂಪಿನ ಕಡೆ ಓಡಿ ಬರಲು ಡುಗರು ಚಲ್ಲಾಪಿಲ್ಲಿಯಾಗಿ ಚದರಿದರು. ಶ್ರೀನಿವಾಸನು ಮಾತ್ರ ಎಲ್ಲಿಯೂ ಲಿಲ್ಲ. ಆ ನಾಯಿ ಅವನ ಹತ್ತಿರಕ್ಕೆ ಬಂದಿತು. ಅವನು ಕಿರುಚಿ ಂಡನು. ಆಗ ತಠಾರೆಂದು ಆ ನಾಯಿಯ ತಲೆಯಮೇಲೆ ಒಂದು ದೊಡ್ಡ ಟೂ, ಅನಂತರ ಒಂದು ಕಲ್ಲೂ, ಬಂದು ಬಿದ್ದುವು. ಶೀನು ಹಿಂತಿರುಗಿ ೋಡಿದನು. ತನ್ನ ಶಾಲೆಗೆ ಹೊಸದಾಗಿ ಬಂದು ಸೇರಿದ್ದ ಸುಬ್ಬರಾಯನು ನ್ನು ಕಾಪಾಡಿದನೆಂದು ತಿಳಿಯುವುದರೊಳಗಾಗಿ ಸುಬ್ಬರಾಯನು ನನ್ನೆತ್ತಿ ತನ್ನ ತೋಳಿನಲ್ಲಿ ಕುಳ್ಳಿರಿಸಿಕೊಂಡನು. ಆ ನಾಯಾದರೊ ನ್ನು ಬಗ್ಗಿಸಿಕೊಂಡು "ಬದುಕಿತು ಜೀವ" ಎಂಬಂತೆ ಓಟ ಕಿತ್ತಿತು. ಸಿವಾಸನು ಕೆಳಗಿಳಿದು ಸುಬ್ಬರಾಯನ ಕೈಯನ್ನು ಹಿಡಿದು ತನ್ನ ಣ್ಣಿಗೆ ಒತ್ತಿಕೊಂಡು ಕಣ್ಣೀರು ಸುರಿಸಿದನು. ಸುಬ್ಬರಾಯನು ಅವನನ್ನು ೋಡಿ "ಹೆದರಬೇಡ!" ಎಂದು ತಟ್ಟಿಕೊಂಡು ಅವನ ಪುಸ್ತಕಗಳನ್ನು ನು ತೆಗೆದುಕೊಂಡು, ನಾಯಿಯ ಮೇಲೆ ಬಿಸುಟು ಒಡೆದು ಹೋಗಿದ್ದ

ತನ್ನ ಸ್ಲೇಟನ್ನೂ ತೆಗೆದುಕೊಂಡು ಶ್ರೀನಿವಾಸನನ್ನು ತನ್ನ ಮನೆಗೆ ಕರೆದು ಕೊಂಡು ಹೋಗಿ ಅವನಿಗೆ ಉಪಹಾರವನ್ನು ಕೊಟ್ಟನು. ಅನಂತರ ಶ್ರೀನಿವಾಸನ ಮನೆಗೆ ಅವನನ್ನು ಕರೆದುಕೊಂಡು ಹೋಗಿ ಅಲ್ಲಿ ಶ್ರೀನಿವಾಸನ ತಾಯಿ ಅಜ್ಜಿಯವರ ಆಶೀರ್ವಾದಗಳನ್ನೂ ಶ್ರೀನಿವಾಸನ ವಂದನೆಗಳನ್ನೂ ಪಡೆದು ಮನೆಗೆ ಹಿಂತಿರುಗಿದನು. ಅಂದು ಮೊದಲು ಅವರು ಪ್ರಾಣ ಸ್ನೇಹಿತರಾದರು.

ಅವರಿಬ್ಬರಲ್ಲಿ ಒಬ್ಬರಿಗೊಬ್ಬರು ಹೇಳದ ರಹಸ್ಯವೇ ಇಲ್ಲ. ಯಾವಾ ಗಲೂ ಒಟ್ಟಾಗಿಯೇ ಓದು ಆಟ- ವಿಶ್ರಾಂತಿ. ಸುಬ್ಬರಾಯನ ಮನೆಯ ಮಹಡಿಯ ಮೇಲೆ ಒಂದು ಕೊಠಡಿ ಇವರ ಸ್ವಾಧೀನದಲ್ಲಿತ್ತು. ಕೆಲವು ದಿನ ಶ್ರೀನಿವಾಸನು ತನ್ನ ಮನೆಗೆ ಹೋಗದೆ ಇಲ್ಲಿಯೇ ಇದ್ದುಬಿಡುವನು. ಅವನನ್ನು ಯಾರೂ ಪರಿಹಾಸ್ಯಕ್ಕೆ ಗುರಿಮಾಡಲಾಗದು; ಮಾಡಿದರೆ ಸುಬ್ಬರಾಯನು ಜಗಳಕ್ಕೆ ಬಂದುಬಿಡುತ್ತಿದ್ದನು. ಅವನ ಸೌಂದರ್ಯವನ್ನು ನೋಡಿ ಯಾರಾದರೂ ಮೆಚ್ಚುಗೆಯ ಮಾತಾಡಿದರೆ ದೃಷ್ಟಿದೋಷ- ವಾಗಬಾರದೆಂಬ ಚಿಂತೆಯಿಂದ, " ಆಹಾ ! ಸೌಂದರ್ಯ ಸುರಿದು ಹೋಗುತ್ತಾ ಇದೆ. ಮಹಾ....ಕೆಂಪು ಚರ್ಮ.... ಇಷ್ಟೇತಾನೆ ? ಕೆಂಪಗಿರುವ ಹುಳಿ ಮಾವಿನಹಣ್ಣಿರುವುದಿಲ್ಲವೆ ? " ಎಂದು ಹೇಳಿ ಮಾತನ್ನು ತೇಲಿಸುವನು. ಮದುವೆ ಪ್ರಸ್ತಾಪ ಬಂದಂದಿನಿಂದ ಎಲ್ಲ ವಿಷಯಗಳನ್ನೂ ಶ್ರೀನಿ- ವಾಸನು ಮೊದಲು ಸುಬ್ಬರಾಯನಿಗೆ ತಿಳಿಸಿದ ಮೇಲೆಯೇ ಬೇರೆ ಕೆಲಸ ವನ್ನು ಮಾಡುವನು. ಅಮ್ಮಯ್ಯಪ್ಪ ಪಿಳ್ಳೆಗೆ ಅಲಾಬಿ ( ಮೊಹರಂ ) ವೇಷ ಹಾಕಿದ ದಿನ ಅವರಿಬ್ಬರೂ ತಮ್ಮಲ್ಲಿಯೇ ಮಾತಾಡಿಕೊಳ್ಳುತ್ತಿದ್ದರು -

ಶ್ರೀನಿವಾಸನ್:- " ಹೀಗೆಯೇ ಕುಳಿತುಕೊಳ್ಳೋಣ. ಈ ಒಂದು ಗಂಟೆ ವೃಥಾ ಕಾಲಕ್ಷೇಪವಾಯಿತು. ಇಷ್ಟು ದೊಡ್ಡ ಪಾಠಶಾಲೆಗೆ ಒಳ್ಳೆಯ ತಮಿಳು ಅಧ್ಯಾಪಕರು ಸಿಕ್ಕಲಿಲ್ಲವೇ ? "

ಸುಬ್ಬರಾಯನ್:- ರಾಮಸ್ವಾಮಿ ಅಯ್ಯರವರ ಪಾಠಶಾಲೆಯಲ್ಲಿದ್ದಾ ರಲ್ಲಾ, ರಾಘವಯ್ಯರ್, ಅವರು ಒಳ್ಳೆಯ ವಿದ್ವಾಂಸರಂತೆ.

ಶ್ರೀನಿವಾಸನ್:- "ಹೌದು, ಎಲ್ಲಾ ಒಂದೇ ಲೆಕ್ಕಾಚಾರ. ಇವರಿಗೆ ಪದ್ಯಗಳು ಬಾಯಿಪಾಠ. ಅವರಿಗೆ ಅದು ಕೂಡಾ ತಿಳಿಯದು. ಅದು ಹೋಗಲಿ. ಈ ಪ್ರಾತಃಕಾಲದ ಸಮಾಚಾರ ಕೇಳಿದೆಯಾ? ನಾನು ಈ ದಿನ ಎಣ್ಣೆ ನೀರು ಹಾಕಿಕೊಳ್ಳಬೇಕೆಂದು ಎಂಟು ಗಂಟೆಗೇ ಮನೆಗೆ ಹೋದೆನಲ್ಲವೇ? ಆಗ ಮನೆಯಲ್ಲಿ ಯಾವುದೋ ಹೊಸ ಧ್ವನಿ ಕೇಳಿಸಿತು. ಯಾರೆಂದು ನೋಡಿದೆ ನಮ್ಮ ಶಂಕರನೂ ಅವನ ತಾಯಿಯೂ ಬಂದಿದ್ದರು."

ಸುಬ್ಬರಾಮನ್:- "ಶಂಕರನೇ?"

ಶ್ರೀನಿವಾಸನ್:- "ಹೌದೋ, ಗೊತ್ತಿಲ್ಲವೇ? ಆಚೆ ಕಡೆಯ ಗೋಪುರಕ್ಕೆ ಹತ್ತಿರವಿಡೆ ಅವರ ಮನೆ."

ಸುಬ್ಬರಾಯನ್:- "ಓಹೋ! ನಮ್ಮ 'ಷೋಕಿ' ಶಂಕರನೇ? ಹಾಡುವನಲ್ಲಾ— ಅವನು ತಾನೆ?"

ಶ್ರೀನಿವಾಸನ್:- "'ಷೋಕಿ' ಶಂಕರನೇ—ಹಾಗೆ ಹೇಳಿದರೆ ತಾನೆ ನಿನಗೆ ಗೊತ್ತಾದೀತು. ಅವನೂ ಅವನ ತಾಯಿಯೂ ಶಿರುಕುಳಕ್ಕೆ ಹೋಗಿದ್ದರಂತೆ."

ಸುಬ್ಬರಾಯನ್:- "ನಿನ್ನ ಮಾವನ ಊರಿಗೋ?"

ಶ್ರೀನಿವಾಸನ್:- "ಅಷ್ಟರಲ್ಲೇ ಮಾವಾಂತ ಮಾಡಿ ಬಿಟ್ಟೆಯಾ? ಕೈಗೆ ಬಂದದ್ದು ಬಾಯಿಗೆ ಬರಬೇಕಲ್ಲ. ಉಳಿದ ಮಾತನ್ನೂ ಕೇಳು. ಆಗ ಅಲ್ಲಿ ಒಂದುಕಡೆ 'ದಿಮ್ಮ ರಂಗ' ಅಂತ ಕುಳಿತರಂತೆ. ಒಂದು ಸಣ್ಣ ಹುಡುಗಿ ತಂಬೂರಿಯನ್ನಿಟ್ಟುಕೊಂಡು ಹಾಡಿದಳಂತೆ. ಕೇಳು— ಕಂಬ ರಾಮಾಯಣವೇನು, ತಾಯುಮಾನವ ಸ್ವಾಮಿಗಳ ಪದ್ಯಗಳೇನು! ತೇವಾರ, ತಿರುವಾಚಕ, ತಿರುವಾಯ್ಮೊಳಿ, ಹಡಗಿನ ಹಾಡು, ಜಾವಳಿ, ಹೀಗೆ ಅನೇಕ ಬಗೆಯ ಹಾಡುಗಳನ್ನು ಜೋರಾಗಿ ಹಾಡಿ ಬಿಟ್ಟಳಂತೆ. ಬಹಳ ಜನ ರಿದ್ದರಂತೆ. ಹೆಂಗಸರೂ ಗಂಡಸರೂ ಅದರಲ್ಲಿಯೂ ಕಂಬ ರಾಮಾಯಣದ ಪದ್ಯಗಳನ್ನು ಹಾಡುತ್ತಿದ್ದಾಗ— ಗಂಗೆ ದಾಟಿದ ಸಂಧಿಯ ಮೊದ ಮೊದಲ ಪದ್ಯಗಳಿರಬೇಕು— ಕುಣಿಯದೆ ಇದ್ದವರು ಪಾಪಿಗಳು; ತಾಯುಮಾನವರ ಪದ್ಯಗಳನ್ನು ಹಾಡುವಾಗ ಕರಗಿ ಅಳದೆ ಇದ್ದವರು ಪಾಪಿಗಳು ವರ್ಣಿ

ಸುತ್ತಾ ಹೋಗುತ್ತಾನೆ.... ಬಹಳ ಅತಿಶಯವಾಗಿದೆ. ಹೇಳುವುದರಲ್ಲಿಯೇ ಅವನಿಗೆ ಆನಂದ ಉಕ್ಕಿ ಬರುತ್ತದೆ.... ಆ ಹೆಣ್ಣೇ ನನ್ನ ಸಹಧರ್ಮಿಣಿ ಆಗುವವಳು."

ಸುಬ್ಬರಾಯನ್:- "ಆ ! ಹಾಗೆಯೇ ! ಅಷ್ಟು ಹಾಡುಗಳೇ ! ನಿನ್ನ ಸಹಧರ್ಮಿಣಿಯೇ ? ಹತ್ತು ವರ್ಷದ ಬಾಲಕಿ ಅಲ್ಲವೇ ?"

ಶ್ರೀನಿವಾಸನ್:- "ಹತ್ತು ವರ್ಷದ ಬಾಲಕಿಯಾದರೇನು ? ಮುಂದೆ ಕೇಳು. ತಾಯಿ, ಮಗ, ಇಬ್ಬರೂ ಹೇಳುತ್ತಾರೆ: ಅವಳ ಗುಣಾತಿಶಯಗಳನ್ನು ಊರಿಗೆ ಊರೇ ಬಾಯಿತುಂಬ ಹೊಗಳುತ್ತದೆಯಂತೆ. ವ್ಯರ್ಥವಾದ ಮಾತು, ಹರಟೆ ಏನೂ ಇಲ್ಲವಂತೆ"

ಸುಬ್ಬರಾಯನ್:- "ನೀನೇ ಅದೃಷ್ಟಶಾಲಿಯಪ್ಪಾ !"

ಶ್ರೀನಿವಾಸನ್:- "ಮುತ್ತುಸ್ವಾಮಿ ಅಯ್ಯರ್ ಎನ್ನುವವರು ಕೊಬ್ಬಿದ ಶ್ರೀಮಂತರಂತೆ, ಅವರ ಹೆಂಡತಿ ಚೆನ್ನಾಗಿ ಓದಿದವಳಂತೆ. ಮಹಾಲಕ್ಷ್ಮಿ ಎಂದರೆ ಅವಳಿಗೇ ಸಲ್ಲುವುದಂತೆ. ಆ ಹುಡುಗಿಗೆ ತಾಯಿ ತಂದೆಗಳು ಬಹಳ ಉತ್ತಮವಾದ ರೀತಿಯಲ್ಲಿ ಓದು, ಸಂಗೀತ ಎಲ್ಲ ಶಿಕ್ಷಣವನ್ನೂ ಕೊಟ್ಟಿರುವರಂತೆ. ಕಂಬರಾಮಾಯಣ ಮೊದಲಿನಿಂದ ಕೊನೆಯವರೆಗೂ ಪಾಠ ಮಾಡಿರುವಳಂತೆ."

ಸುಬ್ಬರಾಯನ್:- "ಕಂಬರಾಮಾಯಣವನ್ನೇ ! ಅವಳು ಸಣ್ಣ ಹುಡುಗಿ!! ನನಗೆ ಕೋಣಕ್ಕೆ ಆದಂತೆ ಇಪ್ಪತ್ತು ವರ್ಷವಾಗಿದೆ. ನಾನು ಇನ್ನೂ ಅದರಲ್ಲಿ ಒಂದು ಪದ್ಯವನ್ನು ಸಹ ಅರಿತವನಲ್ಲ— ನೀನು ಹೇಳಿದುದನ್ನು ಬಿಟ್ಟರೆ"

ಶ್ರೀನಿವಾಸನ್:- "ಹೆಣ್ಣು ಮಿಂಚಿನ ಬಳ್ಳಿಯಂತೆ ಇದ್ದಾಳಂತೆ. ಬಹಳ ಲಕ್ಷಣವಾದ ರೂಪ. ಅವಳ ನಡೆ, ನೋಟ, ರೀತಿ ಈಗಲೇ ಬಹು ಚೆಲುವಾಗಿವೆಯಂತೆ."

ಸುಬ್ಬರಾಯನ್:- "ಬಹಳ ಸಮರ್ಪಕವಾಗಿದೆ."

ಶ್ರೀನಿವಾಸನ್:- "ಅವರ ಬಂಧುಗಳಲ್ಲಿ ಕೆಲವರು ದೊಡ್ಡ ದೊಡ್ಡ ಉದ್ಯೋಗಗಳಲ್ಲಿರುವರಂತೆ. ಮುತ್ತುಸ್ವಾಮಿ ಅಯ್ಯರವರ ದೊಡ್ಡಪ್ಪನ

ಗನೋ ಯಾರೊ ಮಂಜಾಕುಪ್ಪದಲ್ಲಿ ಡೆಪ್ಯುಟಿ ಕಲೆಕ್ಟರ್ ಕೆಲಸದಲ್ಲಿ ದ್ದರಂತೆ."

ಸುಬ್ಬರಾಯನ್ :- "ಮಂಜಾಕುಪ್ಪವೆ? ನಾರಾಯಣಸ್ವಾಮಿ ಯ್ಯರೆ? ಎಲ, ಎಲಾ! ಹಾಗೆ ಹೇಳು. ಸರಿಯೆ! ನಿನ್ನ ಮನೆಗೆ ಬರು ವಳನ್ನು ನಾನು ನೋಡಿದ್ದೇನೆ. ಹೇಗೆಂದು ಕೇಳು: ಹೋದ ವರ್ಷ ನನ್ನ ಂದೆ ನಾರಾಯಣಸ್ವಾಮಿ ಅಯ್ಯರವರ ಮನೆಯಲ್ಲಿ ಅವರ ಮಗಳ ಮದುವೆಗೆ ೋಗಿದ್ದರು. ಅಲ್ಲಿ ಒಂದು ಸಣ್ಣ ಹುಡುಗಿ ತಂಬೂರಿ ಇಟ್ಟುಕೊಂಡು ಾಡಿತು. ಎಲ್ಲರನ್ನೂ ಆನಂದಪರವಶರಾಗುವಂತೆ ಮಾಡಿತು. ಎಲ ಲಾ— ಭೇಷ್! ಭೇಷ್! ಹಾಗೆಯೇ? ಶ್ರೀನಿವಾಸಾ! ನಿನ್ನಂತಹ ಾಗ್ಯಶಾಲಿ ಇಲ್ಲವಯ್ಯಾ! ನಿನಗೆ ಸರಿಯಾದವಳು ಆ ಹೆಣ್ಣು! ಅವಳಿಗೆ ರಿಯಾದ ವರನೂ ನೀನೆ!" ಎಂದು ಹೇಳುತ್ತ ಸಂತೋಷದ ಭರದಿಂದ ವನ ಬೆನ್ನಿನ ಮೇಲೆ ತಟ್ಟಿದನು.

ಅಷ್ಟರಲ್ಲಿ ಅಮ್ಮಯ್ಯಪ್ಪ ಪಿಳ್ಳೆಯವರ ಬೈಲಾಟ ಮುಗಿದು, ಎಲ್ಲರೂ ೕಕೆ ಹಾಕುತ್ತ ನಗುವುದನ್ನು ಕೇಳಿ ಇವರಿಬ್ಬರೂ ಅಲ್ಲಿಗೆ ಓಡಿ ಅಮ್ಮ ್ಯಪ್ಪ ಪಿಳ್ಳೆಯವರ ಮುಖವೆಲ್ಲ ಕೆಂಪು ಕರಿ ಮಸಿಗಳ ಚುಕ್ಕಿ ಳಿಂದ ತುಂಬಿರುವುದನ್ನು ಕಂಡರು. ಕೂಡಲೇ ಶ್ರೀನಿವಾಸನು ಅವರ ರಿಸ್ಥಿತಿಯನ್ನು ನೋಡಿ, ಕನಿಕರಿಸಿ ತನ್ನ ಅಂಗಿಯನ್ನು ಬಿಚ್ಚಿ ಅವರಿಗೆ ೊಟ್ಟು, ತನ್ನ ಕೈವಸ್ತ್ರದಿಂದ ಅವರ ಮುಖವನ್ನು ಒರೆಸಿ ಶುದ್ಧಮಾಡಿದನು. ಪಾಧ್ಯಾಯರಿಗೆ ಇವನು ಮಾಡಿದ ಉಪಚಾರಗಳಿಂದ ಕಣ್ಣಿನಲ್ಲಿ ನೀರು ಂಬಿತು. ಇವನಿಗೆ ವಂದನೆ ಹೇಳಿದರು. "ನೀನು ಶೀಘ್ರದಲ್ಲಿಯೇ ಒಳ್ಳೆಯ ುಡುಗಿಯನ್ನು ಮದುವೆ ಮಾಡಿಕೊಂಡು ಬಹಳ ಕಾಲ ಸುಖವಾಗಿ ಬಾಳು" ಂದು ಮನಃಪೂರ್ವಕವಾಗಿ ಆಶೀರ್ವದಿಸಿದರು. ಪಕ್ಕದಲ್ಲಿದ್ದ ಸುಬ್ಬರಾಯನು, ಮದುವೆಗೆ ಮುಹೂರ್ತವನ್ನಿಟ್ಟಿದ್ದಾರೆ" ಎಂದು ಹೇಳಿದನು. ಉಪಾ ್ಯಾಯರು ಶ್ರೀನಿವಾಸನ ಕೈಯನ್ನು ಹಿಡಿದುಕೊಂಡು, "ನನಗೆ ನೀನು ಸಂಗತಿಯನ್ನು ಹೇಳಬೇಡವೆ? ಎಲ್ಲಿ? ಯಾವಾಗ ಮದುವೆ?" ಂದು ಕೇಳಿದರು. "ಶಿರುಕುಳದ ಮುತ್ತುಸ್ವಾಮಿ ಅಯ್ಯರ್" ಎಂದ

ಕೂಡಲೆ ಆವರಿಗಾದ ಸಂತೋಷಕ್ಕೆ ಪಾರವಿರಲಿಲ್ಲ. "ನನ್ನ ಅಜ್ಜ ಮುತ್ತು ಸ್ವಾಮಿ ಅಯ್ಯರವರೆ ? ಎಲ ಎಲಾ! ಉತ್ತಮವಾಯಿತಲ್ಲಾ ! ನಾನು ಅವರ ಗುಲಾಮನಲ್ಲವೆ ? ಆ ಮಹಾನುಭಾವನ ಮಗಳೆ? ನಿನಗೆ ನಿಶ್ಚಯ ಮಾಡಿದ್ದಾರೆಯೆ ? ನಿನಗೆ ದೇವರ ಅನುಗ್ರಹ ಪೂರ್ಣವಾಗಿರುವುದು. ನನಗೂ ಪತ್ರ ಬರುವುದು. ನಾನೂ ಬರುತ್ತೇನೆ ನಿನ್ನ ಮದುವೆಗೆ" ಎಂದು ಹೇಳಿದರು. ಅಮ್ಮಯ್ಯಪ್ಪ ಪಿಳ್ಳೆ ಒಟ್ಟಿನಲ್ಲಿ ಬಹಳ ಒಳ್ಳೆಯವರು. ಅವರ ಗುಣಾವ ಗುಣಗಳು ಮುಂದೆ ತಿಳಿದು ಬರುವುವು. ಅವರು ಈ ಚರಿತ್ರೆಗೆ ಸಂಬಂಧಿಸಿ ದವರು. ಶ್ರೀನಿವಾಸನ ಜೊತೆ ಅವರು ಮಾತನಾಡುತ್ತಿದ್ದಂತೆಯೇ ಗಂಟೆ ಹೊಡೆಯಿತು. ಶ್ರೀನಿವಾಸನು ಮುಂದಿನ ಪಾಠಕ್ಕೆ ಹೊರಟುಬಿಟ್ಟನು.

ಮರುದಿನ ರಾತ್ರಿ ಶ್ರೀನಿವಾಸನು ಸುಬ್ಬರಾಯನ ಮನೆಗೆ ಹೋದಾಗ ವಿಶೇಷ ಸಮಾಚಾರವನ್ನು ಅವನಿಗೆ ಹೇಳಲು ಆತುರನಾಗಿದ್ದನು. ಸುಬ್ಬ ರಾಯನು ಅವನ ತಂದೆ ಮುಂತಾದವರೊಡನೆ ಊಟ ಮಾಡುತ್ತಿದ್ದನು. ಶ್ರೀನಿವಾಸನು ಅವನು ಬರುವುದನ್ನು ಇದಿರು ನೋಡುತ್ತ ಮಹಡಿಯ ಮೇಲೆ ಓಡಾಡುತ್ತಿದ್ದನು.

ಮದುವೆಯ ನೆನಪನ್ನು ಬಿಟ್ಟು ಬೇರೆ ಯಾವುದೂ ಅವನ ಮನಸ್ಸಿ ನಲ್ಲಿರಲಿಲ್ಲ. ಓಡಾಡುತ್ತ, ಮೆತ್ತಗೆ ಹಾಡುತ್ತಿದ್ದನು. ಹಾಡಿದಮೇಲೆ ಯಾರಿಗೂ ತಿಳಿಯದಂತೆ ತನ್ನೊಳಗೇ ಮಾತಾಡಿಕೊಂಡನು. "ನನ್ನ ಮೇಲೆ ಅವಳಿಗೇನು ಅಷ್ಟು ಪ್ರೀತಿ ? ಚೆಲುವಾಗಿದ್ದೇನೆ ಎಂದೇ ? ಅವಳು ನನ್ನನ್ನು ನೋಡಿಯೇ ಇಲ್ಲವಲ್ಲಾ ? ಚೆನ್ನಾಗಿ ಓದುತ್ತೇನೆ ಎಂದೇ ?.... ನಮಗೇನು ಕೊರತೆ ? ಅಪ್ಪ ಉದ್ಯೋಗ ಮಾಡುತ್ತಾರೆ. ಇಬ್ಬರು ಅಜ್ಜಂದಿರೂ ಇದ್ದಾರೆ. ನನ್ನ ಮೇಲೆ ಗಾಳಿ ಆಡುವುದನ್ನೂ ಸಹಿಸಲಾರರು. ಇದಕ್ಕೂ ಮಿಗಿಲಾದ ಭಾಗ್ಯ ಉಂಟೇ? (ಕಣ್ಣುಗಳಲ್ಲಿ ನೀರು ತುಂಬಿತು) ಅವರ ಪ್ರೇಮವೇ ನನಗೆ ದೊಡ್ಡ ಐಶ್ವರ್ಯ. ಓದು, ಚೆಲುವು, ಐಶ್ವರ್ಯ— ಎಲ್ಲವೂ ಇದೆ. ಏನು ಕೊರತೆ ? ಎಲ್ಲಾ ವರ್ಗಗಳಲ್ಲಿಯೂ ನಾನಲ್ಲವೇ ಮೊದಲನೆಯವನು ? ಸರಿ. ಬಂತೇ ಗರ್ವ, ನಮಗೆ ಸಮನಾದವರು ಯಾರು ಇದ್ದಾರೆಂದು ? ಕತ್ತೆಗಾದಂತೆ ವಯಸ್ಸು ಹದಿನಾರಾಯಿತು, ಇನ್ನು ಮೆಟ್ರಿಕ್ಯುಲೇಷನ್

ಆಗಲಿಲ್ಲ. ಅಷ್ಟರಲ್ಲಿ ತಲೆ ಕಾಲು ತಿಳಿಯಲಿಲ್ಲ. ”—ಇಂತೆಲ್ಲ ತನ್ನನ್ನು ತಾನೇ ಪ್ರಶಂಸೆ ಮಾಡುತ್ತಲೂ, ಖಂಡಿಸಿಕೊಳ್ಳುತ್ತಲೂ ಸ್ವಲ್ಪ ಮಾತುಗಳನ್ನಾಡಿದಮೇಲೆ, “ ಮದುವೆಗೆ ಸಮನಾದುದಿಲ್ಲ ! ದೋತರವನ್ನು ಪಂಚಕಚ್ಚೆ ಹಾಕಿ ಉಟ್ಟುಕೊಂಡು, ಗಂಧವನ್ನು ಬಳಿದುಕೊಂಡು, ವೀಳೆದೆಲೆಯನ್ನು ಮೆಲ್ಲುತ್ತ ಜಮ್ ಎಂದು “ ದೇವರೇ ! ಈ ಮದುವೆಯನ್ನು ಮಾತ್ರ ಯಾವ ಲೋಪವೂ ಇಲ್ಲದೆ ನಡೆಸಿ ಕೊಡಬೇಕು. ಮೀನಾಕ್ಷಿ , ಐದು ತೆಂಗಿನ ಕಾಯಿ ಕೊಂಡು ಒಡೆಯುತ್ತೇನೆ. ಇನ್ನು ಹತ್ತು ದಿನಗಳಿವೆ— ಹತ್ತು ದಿನವೆಲ್ಲಿ ? ಒಂಬತ್ತು ದಿನಗಳು ಮಾತ್ರ—ಇಂದು ಕಳೆದು ಹೋಯಿತಲ್ಲಾ ” ಎಂದು ಹೇಳುತ್ತ ಉಲ್ಲಾಸವಾಗಿ ಒಂದು ಪದ್ಯವನ್ನು ಹಾಡತೊಡಗಿದನು. ಹೀಗೆ ಹಾಡುತ್ತ ಓಡಾಡುತ್ತಿದ್ದನು. ಆಗ ವಸಂತಕಾಲ, ತಂಗಾಳಿ ಬೀಸುತ್ತಿತ್ತು. ಸೊಗಸಾದ ಅರ್ಧಚಂದ್ರನು ಬೆಳ್ಳಿಕೋಡಿನಂತೆ ಮೇಲೆ ಪ್ರಕಾಶಿಸುತ್ತಿದ್ದನು. ಆದರಿಂದಲೂ ಶೀತಲವಾಗಿ ಸುರಿಯುತ್ತಿದ್ದ ಅಮೃತ ಝರಿಯಂತಹ ಬೆಳದಿಂಗಳಿನಿಂದಲೂ ಶ್ರೀನಿವಾಸನಿಗೆ ಅಮಿತವಾದ ಆನಂದವಾಯಿತು. “ ಆಹಾ ” ಎಂದು ತಲೆಯನ್ನು ತೂಗಿದನು. “ ಏನು ಸುಖವಾಗಿದೆ! ” ಎಂದನು. ಅವನಿಗೆ ಉಂಟಾದ ಆನಂದದಲ್ಲಿ “ ಏಕಾಂತದ ಸುಖವೇ ಸುಖ ” ಎಂದು ಹೇಳಿಕೊಳ್ಳುತ್ತಿರುವಾಗಲೇ ಸುಬ್ಬರಾಯನು ಬಂದನು. ಅವನು ಬಂದುದನ್ನು ಇವನು ಗಮನಿಸಲಿಲ್ಲ, ಸುಬ್ಬರಾಯನು “ ಏನು ದೀಪವನ್ನು ಹತ್ತಿಸಲಿಲ್ಲವೇ ? ” ಎಂದು ಕೇಳಿದನು. ಶ್ರೀನಿವಾಸನು “ ಹತ್ತಿಸಬಹುದು. ಬಾ, ಇಲ್ಲಿ ಸ್ವಲ್ಪ ಕುಳಿತುಕೋ ” ಎಂದು ಹೇಳಿ ಅವನ ಮಡಲಿನಲ್ಲಿ ತಲೆಯನ್ನಿಟ್ಟು, ತನ್ನ ಮೃದುವಾದ ಧ್ವನಿಯಲ್ಲಿ, “ ಇಗೋ ನೋಡು. ಈ ಬೆಳದಿಂಗಳು ಎಷ್ಟು ಸುಖವಾಗಿದೆ. ತಂಗಾಳಿ, ಈ ಗಿಡಗಳು, ಈ ತೋಟದ ಹೂಗಳು, ಆಹಾ ! ಭೇಷ್ ಎಂತಹ ರಾತ್ರಿ ! ಈ ಸಮಯದಲ್ಲಿ ಓಡಾಡಿ ಕುಪ್ಪಳಿಸಬೇಕು. ಕತ್ತೆಗಳನ್ನು ಬೀದಿಯಲ್ಲಿ ಓಡಿಸಿಕೊಂಡು ಹೋಗುತ್ತಾರೆಯೇ, ಅವರೂ ಸಹ ಈ ಬೆಳದಿಂಗಳಿನ ಸೊಬಗನ್ನೂ, ಸಂಪತ್ತನ್ನೂ ಅನುಭವಿಸುತ್ತಾರೆ. ಆಡುತ್ತ ಹಾಡುತ್ತ ಕುಣಿದಾಡಬೇಕೆನಿಸುತ್ತದೆ. ಸಾವಿರ ಮಾವಿನ ಹಣ್ಣುಗಳನ್ನು ತಿಂದರೂ ಈ ಸುಖವಿರ

ಲಾರದು. ಭೇಷ್ ! ಆಹಾ ! ಅಗೋ, ಬೀದಿಯಲ್ಲೋಡುವ ಮಗುವಿಗೆ ಕೂಡ ಏನು ಸಂತೋಷ ! ತಾಯಿ ಕರೆಯುತ್ತಾಳೆ- ಬರಲಾರೆ ಎಂದು ಓಡುತ್ತದೆ. ಈ ಬೆಳದಿಂಗಳೇ ಅದಕ್ಕೆ ಸಾಕು. ತಾಯಿಯೂ ಬೇಡ." ಎಂದು ಸಂತೋಷದ ಭರದಲ್ಲಿ ತೊದಲ್ನುಡಿಯಲ್ಲಿ ಹೇಳಿದನು. ಸುಬ್ಬ ರಾಯನು, "ಬೆಳದಿಂಗಳಿಗೆ ಸಮನಾದುದುಂಟೆ ?" ಎಂದನು. ಶ್ರೀನಿ ವಾಸನು, "ಅಗೊ ನೋಡು, ಪಕ್ಷಿಗಳು ಚಿಲಿಪಿಲಿಗುಟ್ಟುತ್ತಿವೆ. ಈ ಸಮಯ ದಲ್ಲಿ ಕಾಗೆ ಕೂಗಿದರೂ ಸಹ ಸೊಗಸಾಗಿರುತ್ತದೆ. ಹುಚ್ಚು ಕಾಗಿಗಳೆ! ಜಗಳ ಮಾತ್ರ ಆಡಬೇಡಿ, ಬೇರೆ ಏನು ಮಾಡಿದರೂ ಈ ಚಂದ್ರಿಕೆಯಲ್ಲಿ ಸುಖವಾಗಿರುವುದು. ಎಲ, ಎಲಾ, ಆ ತೆಪ್ಪ ಕೊಳವನ್ನು ನೋಡು. ಪಾಚಿಯಿಂದ ತುಂಬಿದ ಆ ಕೊಳಕ್ಕೆ ಕೂಡ ಏನು ಮಹಿಮೆಯುಂಟಾಗಿದೆ ನೋಡು. ಚಂದ್ರನು, ಅದರಲ್ಲಿ ನುಸುಳಿದ್ದಾನೆ, ಮುಳುಗುತ್ತಾನೆ, ಆಡು ತ್ತಿದ್ದಾನೆ. ಈ ರಾತ್ರಿಯಲ್ಲಿ ಕುಣಿದಾಡಬೇಕಯ್ಯಾ. ನೀನು ಆಡು, ನಾನು ಹಾಡುತ್ತೇನೆ. ಇಲ್ಲವಾದರೆ ನೀನು ಹಾಡು, ನಾನು ಆಡು ತ್ತೇನೆ. 'ಇರುಳಿನ ಜ್ಯೋತಿಯೇ, ಇಂದುವಿನ ಬೆಳಕೆ— ಹಾಡಯ್ಯಾ"— ಹೀಗೆಲ್ಲ ಹೇಳುತ್ತ ಶ್ರೀನಿವಾಸನು ಆನಂದ ತಾಂಡವವನ್ನೇ ಮಾಡತೊಡ ಗಿದನು. ಸುಬ್ಬರಾಯನು "ಚಂದ್ರಿಕೆ ಚನ್ನಾಗಿಯೇ ಇದೆ" ಎಂದು ಹೇಳಿ, "ನಿನ್ನ ಮದುವೆಯ ವೇಳೆಗೂ ಒಳ್ಳೆಯ ಬೆಳದಿಂಗಳಿರುವುದು. ಗ್ರಾಮಪ್ರದಕ್ಷಿಣೆ ಮಾಡುತ್ತ ಮೆರವಣಿಗೆಯಾದಾಗ ರಾತ್ರಿಯೆಲ್ಲ ಚಂದ್ರನ ಪ್ರಕಾಶವಿರುವುದು. ನೀನು ಪಲ್ಲಕ್ಕಿಯ ಮೇಲೆ ಉಲ್ಲಾಸವಾಗಿ ಹತ್ತಿ ಕೊಂಡು ಹೋಗುವಾಗ ನನ್ನ ನೆನಪು ಕೂಡ ನಿನಗಿರಲಾರದು." ಎಂದು ಹೇಳಿದನು. ಶ್ರೀನಿವಾಸನು, "ನಿನ್ನ ನೆನಪಿರಲಾರದೆ ? ನಿನ್ನನ್ನು ಬಿಟ್ಟು ನನಗೆ ಸಂತೋಷವಾದರೂ ಉಂಟೆ ? ನೀನಲ್ಲದೆ ನನಗೆ ಈ ಲೋಕದಲ್ಲಿ ಮನಗೊಟ್ಟ ಸ್ನೇಹಿತರಾರಿರುವರು ?" ಎಂದು ಹೇಳುತ್ತ ಅವನ ಕಣ್ಣಿ ನಲ್ಲಿ ನೀರು ಹೊಮ್ಮಿತು. ಅಷ್ಟರಲ್ಲಿ ಸುಬ್ಬರಾಯನು "ನಾನು ಪರಿಹಾಸ್ಯ ಮಾಡಿದೆ— ಅಷ್ಟೆ !" ಎಂದು ಸಮಾಧಾನಗೊಳಿಸಿದನು. ಶ್ರೀನಿವಾಸನು "ಮತ್ತೊಂದು ಸಂಗತಿಯನ್ನು ಕೇಳಿದೆಯಾ ? ಶಿರುಕುಳಕ್ಕೆ ನೆಲ್ಲಿಕುಪ್ಪದ

ಕಾಮಾಕ್ಷಿ ಅಮ್ಮ ಹೋಗಿದ್ದಳಂತೆ. ನನಗೆ ನಿಶ್ಚಯ ಮಾಡಿರುವ ಹೆಣ್ಣನ್ನು ಅವಳ ಚಿಕ್ಕಮ್ಮ ತನ್ನ ಅಣ್ಣನ ಮಗನಿಗೆ ಕೊಡಬೇಕೆಂದು ಒತ್ತಾಯ ಮಾಡಿದರಂತೆ. ಆ ಹೆಣ್ಣು ನನ್ನನ್ನು ಬಿಟ್ಟು ಬೇರೆ ಯಾರನ್ನೂ ಮದುವೆ ಮಾಡಿಕೊಳ್ಳುವುದಿಲ್ಲವೆಂದು ಹೇಳಿತಂತೆ!" ಎಂದು ಹೇಳಿದನು. ಸುಬ್ಬ ರಾಯನು, "ಈಗಲೇ ಏನು ಬುದ್ಧಿ! ಏನು ಪ್ರೀತಿ!" ಎಂದುದಕ್ಕೆ ಶ್ರೀನಿವಾಸನು ಸಂತೋಷದಿಂದ "ಈ ಹೆಣ್ಣು ನನಗೆ ಲಭಿಸುವುದಾದರೆ ನಾನು ಅದೃಷ್ಟಶಾಲಿಯೇ ಹೌದು" ಎಂದು ಹೇಳಿದನು.

ಶ್ರೀನಿವಾಸನು ಎಷ್ಟು ಬುದ್ಧಿಶಾಲಿಯಾಗಿದ್ದರೂ ಸಣ್ಣ ಮಗು ವಾಗಿದ್ದುದರಿಂದ ಲೋಕವನ್ನು ಅರಿಯನು. ಹೆಂಡತಿ ಎಂದರೆ "ಅಡಿಕೆ ಕೊಟ್ಟ ಭಾಗ್ಯವತಿ, ಹೂ ಕೊಟ್ಟ ಪುಣ್ಯವತಿ; ಚಂದನವನ್ನು ಕೊಟ್ಟ ಸರಸ್ವತಿ" ಎಂಬ ಭಾವನೆಗಳ ಹೊರತು ಬೇರೇನನ್ನೂ ಅರಿಯಲು ಅವನಿಗೆ ವಯಸ್ಸು ಸಾಲದು. ಆದರೂ "ಪ್ರೇಮಿಗಳಿಬ್ಬರೂ ಭಾವೈಕ್ಯ ದಿಂದ ಪರಸ್ಪರ ಆದರಿಸುವುದೇ ಸೌಖ್ಯ" ಇವೇ ಮುಂತಾದ ಸತ್ಯಗಳನ್ನು ಪುಸ್ತಕಗಳ ಮೂಲಕ ತಿಳಿದಿದ್ದನು. ಉಳಿದಿರುವ ಹತ್ತು ದಿನಗಳೂ ಅವನಿಗೆ ಹತ್ತು ಯುಗಗಳಾಗಿದ್ದುವು. ಹಗಲಾದರೆ "ಹಾಳು ಹಗಲೇ, ಬೇಗ ಸಾಗ ಲಾರೆಯಾ" ಎಂದು ನಿಂದಿಸುವನು. ಯಾವಾಗ ರಾತ್ರಿಯಾಗುವುದೆಂದು ಎದುರು ನೋಡುವನು. ರಾತ್ರಿ ಆದರೆ "ಸಾಗದಿರುವ ರಾತ್ರಿ! ಬೇಗ ಹೋಗು" ಎಂದು ನಿಂದಿಸುತ್ತ ಯಾವಾಗ ಬೆಳಗುವುದೆಂದು ಕಾದಿರುವನು. ಯಾವ ಪಾಠವೇ ಆಗಲಿ, ಲೆಕ್ಕವೇ ಆಗಲಿ—ಎಲ್ಲ ಮದುವೆಯಾದಮೇಲೆ ನೋಡಿಕೊಳ್ಳೋಣವೆಂದು ಒತ್ತಟ್ಟಿಗೆ ಇಡುವನು. ಇವನಿಗೂ, ಸುಬ್ಬ ರಾಯನಿಗೂ, ಪಂಚಾಂಗವನ್ನಿಟ್ಟುಕೊಂಡು ಕೂಟಗಳನ್ನು ನೋಡುವುದು, ಅದೃಷ್ಟ ಚಕ್ರಗಳ ಶೋಧನೆ— ಇವೇ ಕಸಬಾಯಿತು (ಜ್ಯೋಯಿಸರನ್ನು ಕೇಳುವುದಕ್ಕೆ ನಾಚಿಕೆ) ಹೀಗೆ ದಿನಗಳು ಕಳೆಯಲು ಮುಹೂರ್ತಕ್ಕೆ ಎರಡು ದಿನಗಳಿರಬೇಕಾದರೆ ಶಿರುಕುಳಕ್ಕೆ ಹೋಗುವುದಕ್ಕಾಗಿ ಸುಮಾರು ಇಪ್ಪತ್ತೈದು ಗಾಡಿಗಳು ಶ್ರೀನಿವಾಸನ ಮನೆಯ ಮುಂದೆ ಬಂದು ನಿಂತುವು.

# ೯. ಕಲ್ಲುಳಿಯೂ ಕುಪ್ಪಿ ಅಜ್ಜಿಯೂ.

ಮುತ್ತುಸ್ವಾಮಿ ಅಯ್ಯರ್ ದೊಡ್ಡ ಶ್ರೀಮಂತರೆಂದು ನಾವು ಈ ಮೊದಲೆ ಅನೇಕ ಬಾರಿ ಹೇಳಿದ್ದೇವೆ. ಭಾಗಮಾಡಿಕೊಳ್ಳುವ ವೇಳೆಗೆ ಅವರಿಗೆ ಐವತ್ತು ಸಾವಿರ ರೂಪಾಯಿ ಆಸ್ತಿ ಇದ್ದಿತು. ಕೆಲವು ದೊಡ್ಡ ವ್ಯಾಪಾರ ಗಳಲ್ಲಿ ಅವರು ತೊಡಗಿ ಅವುಗಳನ್ನು ದಕ್ಷತೆಯಿಂದ ನಡೆಯಿಸಿಕೊಂಡು ಬಂದುದರ ಫಲವಾಗಿ ಕೆಲವೇ ವರ್ಷಗಳಲ್ಲಿ ಅವರು ಒಂದು ಲಕ್ಷ ಐವತ್ತು ಸಾವಿರ ರೂಪಾಯಿ ಆಸ್ತಿಗೆ ಅಧಿಪತಿಯಾದರು. ಆದುದರಿಂದ ಆ ಪ್ರದೇಶ ದಲ್ಲಿ ಅವರು ದೊಡ್ಡ ಧನಿಕರೆಂದು ಪ್ರಸಿದ್ಧಿ ಪಡೆದಿದ್ದರು. ಅಷ್ಟೇ ಅಲ್ಲದೆ ಉತ್ತಮ ದಾನಿಗಳೆಂದೂ, ಅನೇಕ ವಿಷಯಗಳಲ್ಲಿ ಜ್ಞಾನ ಉಳ್ಳವ ರೆಂದೂ, ಒಳ್ಳೆಯ ಬುದ್ಧಿವಂತರೆಂದೂ, ಅವರ ಹೆಸರು ಎಲ್ಲೆಡೆಯಲ್ಲಿಯೂ ಪ್ರಸಿದ್ಧಿಯಾಗಿತ್ತು. ಅವರ ಕೈಯಿಂದ ಸನ್ಮಾನ ಪಡೆಯದ ದೊಡ್ಡ ವಿದ್ವಾಂಸರು ಈ ರಾಜಧಾನಿಯಲ್ಲಿಯೇ ಯಾರೂ ಇರಲಿಲ್ಲ. ಶಿರುಕುಳದ ಸುತ್ತು ಮುತ್ತಲಿರುವ ಗ್ರಾಮಗಳಲ್ಲೆಲ್ಲ ಬೆಳಗಿನಿಂದ ಸಂಜೆಯವರೆಗೂ ಮುತ್ತುಸ್ವಾಮಿ ಅಯ್ಯರವರ ಮನೆಯಲ್ಲಿ ನಡೆಯುವ ಮದುವೆಯ ಮಾತೇ ಮಾತು.

ಮೇಲ್ಪೈಪಾಳಯಂ ಎಂಬ ಗ್ರಾಮ. ಅಲ್ಲಿ ರಾಮಸ್ವಾಮಿ ಅಯ್ಯರ್ ಎಂಬ ಒಬ್ಬ ಬ್ರಾಹ್ಮಣರು ಊಟಮಾಡಿ ತಾಂಬೂಲ ಹಾಕಿಕೊಂಡು ಜಗು ಲಿಯ ಮೇಲೆ ಕುಳಿತಿದ್ದರು. ಆ ಹೊತ್ತಿಗೆ ಸರಿಯಾಗಿ ಊಟ ಮಾಡಿ, ವೀಳೆದೆಲೆಯನ್ನು ಕೈಯಲ್ಲಿ ಹಿಡಿದುಕೊಂಡು, ಈಗ ಹರಟೆ ಹೊಡೆಯಲು ಯಾರು ಸಿಕ್ಕಬಹುದು ಎಂದು ಹುಡುಕುತ್ತ, ಅಪ್ಪಯ್ಯ ದೀಕ್ಷಿತರು ಬಂದರು. ರಾಮಸ್ವಾಮಿ ಅಯ್ಯರ್ ಅವರನ್ನು ನೋಡಿದ ಕೂಡಲೆ, "ಬನ್ನಿ, ಬನ್ನಿ" ಎಂದು ಸ್ವಾಗತಿಸಿದರು. ದೀಕ್ಷಿತರು ಮೈಮೇಲಿನ ಅಂಗ ವಸ್ತ್ರವನ್ನು ಕೆಳಗೆ ಹಾಸಿ "ಅಬ್ಬಾ" ಎಂದು ಕುಳಿತರು. ಅಯ್ಯರ್ "ಈಗ ತಾನೇ ಭೋಜನವಾದಂತಿದೆ" ಎಂದುದಕ್ಕೆ "ಈಗ ತಾನೇ ಆಯಿತು." ಎಂದು ದೀಕ್ಷಿತರು ಉತ್ತರವಿತ್ತರು. ಆ ಮೇಲೆ ಸ್ವಲ್ಪ ಹೊತ್ತು

ಮೌನ. ಆನಂತರ ಅಯ್ಯರ್, "ಇವತ್ತು ತೇದಿ ೧೩ ಇದ್ದಂತೆ ಕಾಣುತ್ತದೆ. ಶಿರುಕುಳಕ್ಕೆ ಯಾವಾಗ ಪ್ರಯಾಣ? ನೀವು ಬರುತ್ತೀರೋ ಇಲ್ಲವೋ" ಎಂದುದಕ್ಕೆ ದೀಕ್ಷಿತರು ವೀಳೆದೆಲೆಯನ್ನು ಮೆಲ್ಲುತ್ತಲೇ, "ನಾನು ಬರುವುದು ಸಂದೇಹವೆ. ಶನಿ, ಬಂದು ಶ್ರಾದ್ಧ ಅಡ್ಡ ಬಂದು ಗೋಳಾಗಿದೆ. ಇಲ್ಲವಾದರೆ ಇಲ್ಲಿದ್ದುಕೊಂಡು ನಾನು ಏನು ಸಾಧಿಸಬೇಕಾಗಿದೆ! ಅಲ್ಲಿಗೆ ಹೋಗುವುದಕ್ಕಿಂತಲೂ ಏನು ದೊಡ್ಡ ಕೆಲಸ?" ಎಂದರು. ಅದಕ್ಕೆ ಅಯ್ಯರ್, "ಎಲ ಎಲಾ, ನೀವು ಅಷ್ಟೇ ಕೊಟ್ಟಿಟ್ಟದ್ದು. ಮೂರುಸಾವಿರ ರೂಪಾಯಿ ಮುಡುಪಾಗಿ ಕಟ್ಟಿ ಇಟ್ಟಿದ್ದಾರಂತೆ ಮದುವೆಗಾಗಿ. ಕೀವಳೂರು ಕಂದನ್ ಅವನ ನಾದಸ್ವರವಂತೆ. ಆವನಿಗೆ ೨೦೦ ರೂಪಾಯಿ ಮಾತನಾಡಿದ್ದಾರಂತೆ. ಹಾಡುವುದಕ್ಕೆ ರಾಘನಯ್ಯರ್—ಪೆರಿಯ ವೈದ್ದಿ. ದೊಡ್ಡ ಯುದ್ಧವೇ ನಡೆಯುವುದು. ಒಳ್ಳೇ ತಮಾಷೆಯಾಗಿರುತ್ತದೆ. ಇದಲ್ಲದೆ ಮೃದಂಗಕ್ಕೆ ಗೋವಿಂದಸ್ವಾಮಿ ರಾಯರು. ಆಮೇಲೆ ಪಿಟೀಲು ನುಡಿಸುವುದಕ್ಕೆ ನಟರಾಜನ್— ಇದೆಲ್ಲ ಸಾಧಾರಣವೇ! ಇಷ್ಟು ಸಾಲದೆಂದು ತಿರುಚಾರೂರ್ ರಾಜ್ಯಲಕ್ಷ್ಮಿ ನೃತ್ಯ," ಎಂದು ಹೇಳಲು, ದೀಕ್ಷಿತರು ತಾಂಬೂಲವನ್ನು ನುಂಗುತ್ತಲೇ "ಭೇಷ್, ಅವನಿಗೇನು ಕಡಮೆ! ಮಹಾರಾಜ....ಲಕ್ಷಾಧೀಶ. ಒಂದೇ ಹೆಣ್ಣು, ಅದಕ್ಕೆ ಮದುವೆ" ಎಂದು ಹೇಳಿದರು. ಅಯ್ಯರ್, "ನೀವು ಮಾತ್ರ ಬರುವುದಿಲ್ಲವೆನ್ನುತ್ತೀರಿ" ಎನ್ನಲು ದೀಕ್ಷಿತರು "ನಿಮಗಿಂತಲೂ ನನಗೆ ಹತ್ತರಷ್ಟು ಆಸೆ ಇದೆ. ಆಸೆ ಇದ್ದು ಏನು ಮಾಡೋದು? ಈ ಹಾಳು ಶಾದ್ಧ ಮಧ್ಯೆ ಬಂದು ಕತ್ತು ಕುಯ್ಯುತ್ತಿದೆ. ಒಳ್ಳೆಯ ದಿನವೆಂದರೆ ಅಂದೇ ಮನೆಯಾಕೆ ಮಗಳು ಬಹಿಷ್ಠೆಯಾದರಂತೆ, ಹಾಗಾಗಿದೆ ನಮಗೆ ಈಗ, ಈ ಶನಿ— ಈ ಹಾಳು ಶ್ರಾದ್ಧ! ತಾಳಿ. ನೋಡೋಣ ೧೮ ಕ್ಕೆ ಅಲ್ಲವೇ ಮುಹೂರ್ತ? ೧೮, ೧೯, ೨೦, ೨೧, ೨೨ ಈ ಐದು ದಿನಗಳವರೆಗೂ ಮದುವೆಯ ಕಲಾಪಗಳು ನಡೆಯುವುವು. ಇಲ್ಲಿ ೧೯ನೇ ತಾರೀಖು ಈ ಹಾಳು ಶ್ರಾದ್ಧ. ಅದನ್ನು ಮುಗಿಸಿಕೊಂಡು ೧೯ನೇ ರಾತ್ರಿಗೇ ಹೊರಟರೆ ೨೦ನೇ ಬೆಳಗಾಗುತ್ತಲೇ ಅಲ್ಲಿ ಸೇರಬಹುದು. ನೋಡೋಣ. ಹಾಗೆಯೇ ಮಾಡಬೇಕು." ಎಂದರು. ರಾಮ

ಸ್ವಾಮಿ ಅಯ್ಯರ್, "ಅದೇ ಸರಿ, ಹಾಗೆಯೇ ಮಾಡಿ. ನಾನು ಗ
ಹೊರಡುತ್ತೇನೆ" ಎಂದರು.

ಇಲ್ಲಿ ಹೀಗಿರಲು ತೆಂಗರೈ ಎಂಬ ಮತ್ತೊಂದು ಊರಿನಲ್ಲಿ ಸು
ಹ್ಮಣ್ಯ ದೇವರ ಗುಡಿಯಲ್ಲಿ 'ಹೆಗ್ಗಣ'ವೆಂಬ ಬಿರುದನ್ನು ಪಡೆ
ಮುತ್ತುವೂ ಮತ್ತು 'ಕಲ್ಲುಳಿ' ಎಂದೂ 'ಹಾರೆಭಕ್ಷಕ' ಎಂ
ಹೆಸರಾಂತ ಸುಬ್ಬಯ್ಯನೂ ಕಾಲಾಣೆ ಪಣವಿಟ್ಟು ಇಸ್ಪೇಟು ಆಡುತ್ತಿದ್ದ
ಸುಬ್ಬಯ್ಯ, "ಇನ್ನೊಂದು ಆಟವಾಡೇ ಮಗಳೇ—" ಎಂದಾಗ ಮುತ
"ಇನ್ನೇತಕಪ್ಪಾ, ಒಂದು ರೂಪಾಯಿ ಸೋತದ್ದಾಯಿತು. ಇನ್ನೊ
ಬೇಕೆ? ಅವನು ಹೇಳಿದಹಾಗೆ ಇನ್ನೂ ಒಂದು ರೂಪಾಯಿ ಹೊಡೆ
ಬೇಕೆಂದು ಹೊಂಚು ಹಾಕಿರುವೆಯಾ?" ಎಂದನು. ಅದಕ್ಕೆ ಕಲ್ಲ
"ಯಾರು ಹೇಳಿದಹಾಗೆ? – ಅವನು ಯಾರೂಂತ ಬಹಳ ದಿನಗಳ
ಗೊತ್ತಾಗಲಿಲ್ಲ- ಅವನಿರಲಿ. ಇನ್ನು ಒಂದೇ ಆಟ. ಚಿಂತಿಸಬೇಡ.
ಒಂದು ರೂಪಾಯಿಗೆ ಶಿರುಕುಳದ ಮುತ್ತುಸ್ವಾಮಿ ಅಯ್ಯರ್ ಮನೆ
ಮದುವೆಗೆ ತಿರುಚಾರೂರು ರಾಜಂ ಬರುತ್ತಾಳಂತೆ, ಅವಳ ಕೈಯಿಂ
ನಿನಗೆ ಗಂಧ ಬಳಿಸುತ್ತೇನೆ. ಭಯಪಡಬೇಡ, ಆಡು," ಎಂದು ಹೇಳಿದನ

ಇಲ್ಲಿ ಇದು ನಡೆಯುತ್ತಿರಲು, ವೀರಪಾಂಡ್ಯಂ ಎಂಬ ಮತ್ತೊಂ
ಗ್ರಾಮದಲ್ಲಿ ಕೆಲವು ಸಣ್ಣ ಹುಡುಗರು ಗುಂಪಾಗಿ ತಾಯಿ, ತಂದೆ, ಉ
ಧ್ಯಾಯರು, ಯಾರಿಗೂ ತಿಳಿಯದ ಹಾಗೆ ಶಿರುಕುಳದ ಮದುವೆಗೆ ಹೊ
ಬರುವುದಾಗಿ ರಹಸ್ಯವಾಗಿ ಯೋಚಿಸಿಕೊಂಡು ಒಬ್ಬೊಬ್ಬರಾಗಿ ಆ ಗ್ರಾವ
ಕಾಳಿಯ ಗುಡಿಯ ಬಳಿ ಸೇರಿದರು. "ನಿಮ್ಮ ಮನೆಯಲ್ಲಿ ಕೋಪಿ
ಕೊಳ್ಳುವರು- ನಿನ್ನಿಂದ ನಡೆಯಲಿಕ್ಕಾಗದು- ನೀನು ಮನೆಗೆ ಹೊರ
ಹೋಗು," ಎಂದು ಅವರಿಂದ ಬುದ್ಧಿ ಹೇಳಿಸಿಕೊಂಡು ತಿರುಗಿ ಕಳುಹಿಸಲ್ಪ
ಕಾಮೇಶ್ವರನ್ ಎಂಬ ಸಣ್ಣ ಹುಡುಗನು ಸರಸರನೆ ನಾಗೇಶ್ವರ ಸಾ
ಬಳಿ ಹೋಗಿ ಅವರ ಪಿತೂರಿಯನ್ನು ತಿಳಿಸುತ್ತಲೂ, ಊಟ ಮಾಡ
ಎಲೆಯ ಮುಂದೆ ಕುಳಿತ ನಾಗೇಶ್ವರ ಸಾರ್ ಊಟ ಮಾಡದೆ- ಉ
ಪಂಚೆಯ ಮೇಲೆ ಕಾಳಿಯಮ್ಮನ ಗುಡಿಗೆ ಬಂದರು. ಅವರನ್ನು ಕಂಡ

ತಡ, ತತ್‍ಕ್ಷಣವೆ ಹುಡುಗರೆಲ್ಲ ಶಿರುಕುಳದ ದಾರಿಯಲ್ಲಿ ಓಡಲಾರಂಭಿಸಿದರು. ಅದನ್ನು ನೋಡಿ ಉಪಾಧ್ಯಾಯರು, "ಎಲೈ ಹುಡುಗರಿರಾ! ನಿಜವೆ ? ಓಡುತ್ತೀರಾ ? ಮರ್ಯಾದೆಯಾಗಿ. ಬಂದು ಬಿಡಿ; ಇಲ್ಲವಾದರೆ ಸಿಪ್ಪೆ ಸುಲಿದು ಬಿಡುತ್ತೇನೆ. ಬಂದು ಬಿಡಿ, ಬಂದರೆ ಹೊಡೆಯುವುದಿಲ್ಲ. ಏನಿರೊ ! ಓಡುತ್ತಲೇ ಇದ್ದೀರಾ? ನಿಜವೇನಿರೊ ನಿಜವೇನಿರೊ...." ಎಂದು ಕೂಗಿಕೊಳ್ಳುತ್ತ ಓಡಲು, ಅವರು "ಹೌದು ನಿಜ ನಿಜ" ಎನ್ನುತ್ತ,

"ನಡು ದಾರಿಯಲ್ಲಿ ತಿರುಗುವುದೆ
ಪ್ರತಿ ನಿತ್ಯ ಈ ಗೋಳೆ
ಮೇಷ್ಟ್ರು ಸಾಯಬಾರದೆ
ಹೊಟ್ಟೆಯುರಿ ತೀರಲಾರದೆ–"

ಎಂದು ಹಾಡುತ್ತ ಓಡಿದರು. ಹೀಗೆ ಓಡುವ ಬಾಲಕರನ್ನು ಹಿಂಬಾಲಿಸಿ ಅರ್ಧ ಮೈಲು ಓಡಿದ ಉಪಾಧ್ಯಾಯರು ಹಸಿವಿನಿಂದ ಬಳಲಿ ಆಯಾಸಗೊಂಡು, ಒಂದು ಕಲ್ಲನ್ನು ಎಡವಿ ಕೆಳಗೆ ಬಿದ್ದರು. ಹಿಂದೆ ಹಿಂಡೆ ನೋಡುತ್ತ ಓಡುತ್ತಿದ್ದ ಹುಡುಗರು ಉಪಾಧ್ಯಾಯರು ಬಿದ್ದುದನ್ನು ಕಂಡು 'ಹುಯ್' ಎಂದು ಕೇಕೆ ಹಾಕಿ ನಗುತ್ತ 'ಆಗಬೇಕು' ಎಂದು ಹೇಳುತ್ತ ಓಡುತ್ತಲೆ ಹೋಗಿ ರಾತ್ರಿಯ ವೇಳೆಗೆ ಒಂದು ಛತ್ರದಲ್ಲಿ ತಂಗಿದ್ದು, ತಮ್ಮ ಕಾಲಿನಲ್ಲಿ ಎದ್ದಿದ್ದ ಗುಳ್ಳೆಗಳನ್ನು ವಾಸಿಮಾಡಿಕೊಂಡು, ಮರುದಿನ ಹಗಲು ಹತ್ತು ಗಂಟೆಗೆ ಶಿರುಕುಳವನ್ನು ತಲಪಿದರು. ಉಪಾಧ್ಯಾಯರಾದರೋ ಹಿಂತಿರುಗಿ ಬಂದು ತನ್ನ ಕಾಲನ್ನು ನೋಡಿಕೊಂಡಾಗಲೆಲ್ಲ "ಆ ಹುಡುಗರು ಬರಲಿ, ತಿಳಿಸುತ್ತೇನೆ" ಎಂದು ಹಲ್ಲನ್ನು ಕಡಿಯುತ್ತ ಅವರನ್ನು ಎದುರು ನೋಡುತ್ತಿದ್ದರು.

ಶಿರುಕುಳದ ಪಕ್ಕದಲ್ಲಿ ಕಡುಗನೂರು, ಕುಳ್ಳಪುರಂ, ವಿರುದಕ್ಕಪಟ್ಟಿ, ಶೋರನೂರು ಮುಂತಾದ ಪ್ರಬಲವಾದ ಗ್ರಾಮಗಳುಂಟು, ಅಲ್ಲಿನ ಮಹಾ ಜನಗಳ ಕಸಬೆಂದರೆ ಕಣಿ ಹೇಳುವುದು, ಪರಿಚಾರಿಕೆ ಮಾಡುವುದು, ಶ್ರಾದ್ಧದ ಊಟಮಾಡುವುದು, ಸುಳ್ಳು ಸಾಕ್ಷಿ ಹೇಳುವುದು– ಮುಂತಾದುವು. ಅವರ ಕೀರ್ತಿಗೆ ನಿದರ್ಶನವೇನೆಂದರೆ– ಯಾರನ್ನಾದರೂ ಹೀಯಾ

ಳಿಸಬೇಕಾದರೆ, "ಏನಯ್ಯ ಕುಳ್ಳಪುರದ ಬ್ರಾಹ್ಮಣನಾಗಿದ್ದೀಯ" ಎಂದ ಹೇಳುವುದು ರೂಢಿ. ಮುತ್ತುಸ್ವಾಮಿ ಅಯ್ಯರ್ ಮಗಳ ಮದು ಸಾಂಗವಾಗಿ ನಡೆಯಬೇಕೆಂದೆಣಿಸಿ ಈ ಬ್ರಾಹ್ಮಣೋತ್ತಮರು ತಮ್ಮ ತಮ ಮನೆಗಳಲ್ಲಿ, "ಲೀ, ಮುತ್ತುಸ್ವಾಮಿ ಅಯ್ಯರವರ ಮನೆಯಲ್ಲಿ ಮದು ಯಂತೆ— ಬರಲು ಹದಿನೈದು ದಿನಗಳಾಗಬಹುದು. ಮನೆಯನ್ನು ನೋ ಕೊಳ್ಳೆ. ಏನೇ ಆಗಬಹುದೇನೆ?" ಎಂದು ತಮ್ಮ ಗೃಹಿಣಿಯರಿಗೆ ತಾಕೀದ ಮಾಡಿ, ರುದ್ರಾಕ್ಷಿ, ವಿಭೂತಿ ಡಬ್ಬಿ, ಥಾಲಿ, ಚೆಂಬು, ಮಡಿ ಚೀಲ, ರೇಷ್ಮೆ ಹಗ್ಗ— ಮುಂತಾದ ಕಸಬಿನ ಚಿನ್ಹೆಗಳೊಡನೆ ಸರ್ವಾಭರಣ ಭೂಷಿ ರಾಗಿ ಶಿರುಕುಳವನ್ನುದ್ದೇಶಿಸಿ ಮದುವೆಯ ಸಮಾರಂಭಕ್ಕೆ ಒಂದು ವಾರಕ್ಕೆ ಮುಂಚಿತವಾಗಿಯೇ ತಮ್ಮ ಇಷ್ಟಮಿತ್ರ ಸಮಸ್ತ ಪರಿವಾರಸಮೇ ಮುಹೂರ್ತ ನಡೆಯಿಸಿಕೊಡಲು ನೂರಾರು ಜನ ಹೊರಟುಬಿಟ್ಟರು.

ಈ ರೀತಿಯಲ್ಲಿ ಶಿರುಕುಳದ ಸುತ್ತುಮುತ್ತಲಿನ ಪ್ರದೇಶಗಳ ಮುತ್ತುಸ್ವಾಮಿ ಅಯ್ಯರವರ ಮನೆಯಲ್ಲಿ ನಡೆಯುವ ಮದುವೆಯ ಮಾತೆ ಮಾತಾಗಿದ್ದಿತಲ್ಲದೆ ಎಲ್ಲ ಸ್ಥಳಗಳಿಂದಲೂ ಹುಡುಗರು, ಮುದುಕರು ಮೊದ ಲಾಗಿ ಎಲ್ಲ ಜನರೂ ಬಂದು ಕೂಡಿದರು. ಊರಲ್ಲೆಲ್ಲ ಅಲ್ಲೋಲಕಲ್ಲೋ ವಾಗಿತ್ತು. ಪೂರ್ವ, ಪಶ್ಚಿಮ, ಉತ್ತರ, ದಕ್ಷಿಣ ಎಲ್ಲ ದಿಕ್ಕು ಗಳಿಂದಲೂ ಬಂಡಿಗಳೂ, ಜನಗಳೂ ತರಂಗತರಂಗವಾಗಿ ಬಂದರು ಒಂದೊಂದು ಮನೆಯಲ್ಲಿಯೂ ನಲವತ್ತು ಐವತ್ತು ಜನರು ತಂಗಿದರು ಶಿರುಕುಳವೆಂಬ ಗ್ರಾಮ ಕೊಳವಾಗಿರದೆ, ಭೋರ್ಗರೆಯುತ್ತಿರುವ ಒಂದು ಸಮುದ್ರವಾಯಿತು.

ಬೀಗರು ಮತ್ತು ಅವರ ಇಷ್ಟಮಿತ್ರ ಪರಿವಾರ ಬಂಧುಗಳ ಪಡೆ ಭಾರಿ ಪಡೆಯಾಗಿದ್ದಿತು. ಅವರು ಗೊತ್ತುಮಾಡಿದ್ದ ಬಾಡಿಗೆ ಬಂಡಿಗಳ ೨೫ ಅಲ್ಲದೆ, ರಾಮಸ್ವಾಮಿ ಶಾಸ್ತ್ರಿಗಳ ಕುಮಾರರು ಶಿರಸ್ತೆದಾರ್ ನಾರಾ ಯಣ ಅಯ್ಯರ ಪೆಟ್ಟಿಗೆಬಂಡಿ ಒಂದು, ಶಾಸ್ತ್ರಿಗಳ ಬೀಗರಾದ ಕೃಷ್ಣಯ್ಯರ ಮನೆಯ ಬಂಡಿ ಎರಡು, ತಹಸೀಲ್‌ದಾರ್ ಕುಪ್ಪುಸ್ವಾಮಿ ಅಯ್ಯರ (ಸುಬ್ಬರಾಯನ ತಂದೆ) ಪೆಟ್ಟಿಗೆಬಂಡಿ ಒಂದು, ಡೆಪ್ಯುಟಿ ಕಲೆ

ಕ್ಟರ್ ರಾಮರಾಯರ ಕುದುರೆ ಬಂಡಿ ಒಂದು— ಈ ರೀತಿಯಲ್ಲಿ ೩೦ ಬಂಡಿಗಳು ಬೆಳಗಾಗಿ ಹತ್ತು ಘಳಿಗೆಗೆ ಪಯಣವನ್ನು ಆರಂಭಿಸಿದುವು. ಅಸ್ತಮಿಸಲು ಹತ್ತು ಘಳಿಗೆಗಳಿರಬೇಕಾದರೆ ಅವು ಊರಿನ ಎಲ್ಲೆಯನ್ನು ದಾಟಿದ್ದು, ಕತ್ತಲು ಬಿದ್ದ ಕೂಡಲೆ ಕೃಷ್ಣಯ್ಯರ್ 'ಲಾಂದರ' ಗಳನ್ನು ಕೈಯಲ್ಲಿ ಹಿಡಿದುಕೊಂಡು ಯಾರು ಏನು ಹೇಳಿದರೂ "ನಿಮಗೆ ಗೊತ್ತಿಲ್ಲ" ನೆಂದು ಹೇಳುತ್ತ ಆಳುಗಳೊಂದಿಗೆ ಬಂಡಿಗಳ ಜಾಡನ್ನು ಹಿಡಿದು ಹೋದುದು, ಚಿಟಿಕೆ ಹಾಕಿ ಅವರು ಗಾಡಿಯುವರಿಗೆ ಎಚ್ಚರಿಕೆ ಕೊಟ್ಟುದು, ಕಳ್ಳ ಕೊಂಪೆಯಾದ ನಗರಿ ಎಂಬ ಗ್ರಾಮ ಸಮೀಪಿಸುತ್ತಲೂ, ಕಗ್ಗತ್ತಲೆಯ ತೋಪನ್ನು ಹಾದು ಹೋಗುವಾಗ, ದೀಪಗಳೆಲ್ಲವನ್ನೂ ಮರೆ ಮಾಡಿಕೊಂಡು, ಮಕ್ಕಳ ಬಾಯನ್ನು ಮುಚ್ಚಿಸಿ– 'ಮಾತಾಡಬೇಡಿ, ಮಾತಾಡಬೇಡಿ' ಎಂದು ಮೆತ್ತಗೆ ಎಲ್ಲರೂ ಮಾತನಾಡಿಕೊಂಡುದೂ, ಒಂದೊಂದು ಮರದ ಹಿಂದೆಯೂ ಕಳ್ಳರಿರುವುದಾಗಿ ಹೆದರಿ ಗಾಡಿಯವರು ಕೂಡಾ ಎತ್ತನ್ನು ಗಟ್ಟಿಯಾಗಿ ಕೂಗಿ ಓಡಿಸದೆ, ಗಾಡಿಗಳನ್ನು ವೇಗವಾಗಿ ಬಿಟ್ಟುದೂ— ಆ ಊರು ದಾಟಿದ ಕೂಡಲೇ 'ಜೋರೋ' ಎಂದು ಮಳೆ ಹುಯ್ದಂತೆ ಎಲ್ಲರೂ ಅರಚಿಕೊಂಡುದೂ, ಮಾತನಾಡಿದುದೂ, ವನದೇವತೆಯ ಗುಡಿಯ ಬಳಿ ಎಲ್ಲರೂ ಪ್ರಾರ್ಥನೆ ಸಲ್ಲಿಸಿ ಮುಂದೆ ಹೋದುದೂ, ಮರುದಿನ ಒಂದು ದೊಡ್ಡ ತೋಟದಲ್ಲಿ ತಂಗಿ ಅಲ್ಲಿ ಊಟ ಮಾಡಿದುದೂ, ಅಲ್ಲಿ ಗಗನ ಮಾರ್ಗಕ್ಕೆ ಹೋಗುವ ಮರಗಳನ್ನು ಕಂಡು ಶ್ರೀನಿವಾಸನು ಅಚ್ಚರಿಗೊಂಡು, ಅವುಗಳ ಪಕ್ಕದಲ್ಲಿ ಹರಿಯುವ ನದಿಯಲ್ಲಿ ಅವುಗಳ ಕಪ್ಪಾದ ಛಾಯೆಯನ್ನು ಕಂಡು, ಅವನಿಗೆ ರೋಮಾಂಚವಾಗಿ "ಇವುಗಳ ಮೇಲೆ ಕೋತಿಗಳಂತೆ ಹತ್ತಿ ಕುಣಿದು ಆಟವಾಡಬೇಕೆಂಬ ಆಸೆಯಾಗುತ್ತೆ," ಎಂದು ಸುಬ್ಬರಾಯನಿಗೆ ಹೇಳಿದುದೂ, ಅನಂತರ ಎಲ್ಲರೂ ಹೊರಟು ಹೊಂಬಿಸಿಲು ಸೊಗಸಾಗಿ ಬೀಳುತ್ತಿರುವ ತರುಣದಲ್ಲಿ ಶಿರುಕುಳವನ್ನು ತಲುಪಿದುದೂ ಇವುಗಳನ್ನು ವಿಸ್ತರಿಸಿ ಹೇಳುವದು ಅನವಶ್ಯ.

ಬೀಗರು ಬಂದು ಅವರಿಗೆ ಗೊತ್ತಾಗಿದ್ದ ಸ್ಥಳಗಳಲ್ಲಿ ಇಳಿದಕೂಡಲೆ ಆಳಿಯನನ್ನು ಕರೆಯುವುದಕ್ಕಾಗಿ ಎರಡು ಕುದುರೆಗಳನ್ನು ಕಟ್ಟಿದ ಸಾರೋ

ಟೊಂದು ಬಂದು ನಿಂತಿತು. ಒಬ್ಬ ಜಮೀನುದಾರರಿಂದ ಮದುವೆಗಾ
ಮುತ್ತುಸ್ವಾಮಿ ಅಯ್ಯರವರು ಅದನ್ನು ತರಿಸಿಕೊಂಡಿದ್ದರು. ಅದು ಶಿ
ಕುಳದವರು ನೋಡದಿದ್ದ ಒಂದು ಅಪೂರ್ವ ವಸ್ತು. ಆ ಊರಿಗೆ ಬಂದವರೆ
ಊರಲ್ಲಿದ್ದವರೆಲ್ಲ ಅದನ್ನು ನೋಡಲು ಸೇರಿಬಿಟ್ಟರು. ಅದು ಬಂದು ನಿಂ
ಕೂಡಲೆ ಶ್ರಿನಿವಾಸನು ಅದರ ಮೇಲೆ ಹತ್ತಿ ಸಂಭ್ರಮವಾಗಿ ಕುಳಿತ
ಕೊಂಡು, ಎಲ್ಲರೂ ತನ್ನನ್ನೇ ನೋಡುತ್ತಿರುವರೆಂದು ಬಹಳ ತೃಪ್ತಿಗೊಂಡ
ಹೊರಟು, ಅರಮನೆಯಂತಿದ್ದ ತನ್ನ ಮಾವನ ಮನೆಯ ಹತ್ತಿರ ಇಳಿದು
ತಕ್ಕ ರೀತಿಯಲ್ಲಿ ಒಳಗೆ ಕರೆದೊಯ್ಯಲ್ಪಟ್ಟನು. ಕ್ರಮದಂತೆ ವೈದಿಕ
ಋಷಿಗಳ, ದೇವಗಣಗಳ ಸಮ್ಮುಖದಲ್ಲಿ ಅಗ್ನಿ ಸಾಕ್ಷಿಯಾಗಿ ಎಲ್ಲ ಕಾರ್ಯ
ಗಳು ನೆರವೇರಿದುವು. 'ಭಂ ಭಂ' ಎಂದು ಕೃಷ್ಣ ಭಗವಾನನು ತನ್ನ
ಪಾಂಚಜನ್ಯವನ್ನು ಊದಿದಂತೆ ನಾದಸ್ವರದಲ್ಲಿ ತನಗೆ ಎಣೆಯಿಲ್ಲ
ವೆಂಬ ಕೀರ್ತಿಯನ್ನು ಗಳಿಸಿದ್ದ ಕೀವಳೂರು ಕಂದನು ಮಾಡಿದ ಮಂಗಳ
ವಾದ್ಯದ ಘೋಷದಲ್ಲಿ ಮಾಂಗಲ್ಯಧಾರಣೆ ಆಯಿತು.

ಮುಹೂರ್ತವಾದ ಮೇಲೆ ಆಶೀರ್ವಾದಕ್ಕೆ ಎಲ್ಲರೂ ಸಿದ್ಧರಾಗು
ತ್ತಿರುವ ತರುಣದಲ್ಲಿ ತಟಾರೆಂದು, "ಅಯ್ಯಯ್ಯೋ! ನಾಶವಾಗಿ ಹೋಗ
ನಿನ್ನ ಕೈ ಮುರಿದು ಒಲೆಯಲ್ಲಿಡ, ನೀನು ಚಟ್ಟದಲ್ಲಿ ಹೋಗ, ನೀನು
ಸುಟ್ಟು ಹೋಗ, ನಿನ್ನ ಅಪ್ಪ, ಮೈದುನ, ಭಾವ, ಮಾವ, ಮಕ್ಕಳು,
ಮೊಮ್ಮಕ್ಕಳು,... ಎಲ್ಲರೂ ಹುಣ್ಣು ಹಿಡಿದು ನಾಶವಾಗಿ ಹೋಗ, ...
ಅಯ್ಯಯ್ಯೋ!" ಎಂದೀ ಬಗೆಯಲ್ಲಿ ಒಂದು ದೊಡ್ಡ ರೋದನ ಸ್ವರ
ಏಳಲು ಎಲ್ಲರೂ ಬೆಚ್ಚಿ ಬಿದ್ದು ಆಚೆ ಈಚೆ ಓಡಿದರು. "ಅತ್ತ ಹೋಗೇ!
ಆ ಪಕ್ಕಕ್ಕೆ ಹೋಗು... ಇಲ್ಲಿ ಬಂದರೆ ನೋಡು ಸುಲಿದು ಹಾಕಿಬಿಡುತ್ತೇನೆ.
ಹಾಕೋ... ಎರಡೇಟು. ಕತ್ತಿಯನ್ನು ತೆಗೆಯೋ ... ತಳ್ಳೋ ಆಚೆ. ಅ
ಮೇಲೆ ತುಳಿದೇ ಬಿಡುವೆ... ಇನ್ನೂ ನಾಲ್ಕು ಗುದ್ದು ಗುದ್ದುತ್ತೇನೆ."
ಎಂದೆಲ್ಲ ಒಬ್ಬೊಬ್ಬರು ಒಂದು ರೀತಿಯಾಗಿ ಕೂಗುತ್ತಿರಲು ನಿಂತಿದ್ದ ದೊಡ್ಡ
ಗುಂಪಿನ ಮಧ್ಯದಲ್ಲಿ ಕೆಳಗೆ ಬಿದ್ದು ನೆಲವನ್ನು ನೋಡುತ್ತ ಬಾಗಿದ
ದೇಹವೂ, ಚಾಚಿದ ಕಾಲೂ, ಮೈಮೇಲಿನ ವಸ್ತ್ರವು ಕಳಚಿ ಹೋಗಿ,

ತಲೆಯ ಮೇಲಿನ ಸೆರಗೂ ಇಲ್ಲದೆ ಬೋಳಿಸಿದ್ದ ತಲೆಯನ್ನೂ ಕಾಣಿಸಿಕೊಂಡು, ತಲೆಯನ್ನೂ ಎದೆಯನ್ನೂ ಹೊಡೆದು ಕೊಳ್ಳುತ್ತ ಸಪ್ತಲೋಕಗಳೂ ಗಡಗಡವೆಂದು ನಡುಗುವ ರೀತಿಯಲ್ಲಿ "ಅಯ್ಯೋ!" ಎನ್ನುತ್ತ ಬೊಬ್ಬೆ ಹಾಕಿ, ತಾಟಕಿಯಂತಹ ದೊಡ್ಡ ಆಕಾರದ ಮುದುಕಿ ಕುಳಿತಿದ್ದಳು. ಅವಳಿಗೆ ಸುಮಾರು ೮೦ ವರ್ಷವಿರಬಹುದು. ಆ ಊರಿನ ಹರಟೆಮಲ್ಲಿಗಳ ಸಭೆಯ ಉದ್ಯೋಗಸ್ಥರಲ್ಲಿ ಅವಳೊಬ್ಬಳು. ವ್ಯರ್ಥಾಲಾಪ, ವ್ಯವಹಾರ, ವಿಚಾರಣೆ — ಇವುಗಳಲ್ಲಿ ಶ್ಯಾನುಭಾಗ, ಪಟೇಲ ಯಾರೂ ಇವಳಿಗೆ ಸಮನಿಲ್ಲ.

ಒಮ್ಮೆ ಮಳೆಯಿಲ್ಲದೆ ಶಿರುಕುಳದ ಗದ್ದೆ ಹೊಲಗಳಲ್ಲಿ ಬೆಳೆ ಇಲ್ಲದೆ ಕ್ಷಾಮ ತೋರಿದುದರಿಂದ ಆ ಊರಿನ ರೈತರು ಕಂದಾಯ ವಸೂಲಿಯನ್ನು ಮುಂದೆ ಹಾಕಬೇಕೆಂದು ಸರಕಾರಕ್ಕೆ ಮನವಿ ಮಾಡಿಕೊಂಡರು. ಈ ಕ್ಷಾಮ ಪರಿಸ್ಥಿತಿಯನ್ನು ಪರಿಶೀಲಿಸುವುದರಲ್ಲಿ ಅನುಭವಸ್ಥರಾದ ತಹಸೀಲ್ದಾರರು ಈ ಮನವಿಯನ್ನು ತಳ್ಳಿಹಾಕಿ ಕಂದಾಯದ ವಸೂಲಿಯಾಗಬೇಕೆಂದು ಆಜ್ಞೆಯನ್ನು ಹೊರಡಿಸಿದರು. ಯಾರು ಎಷ್ಟು ಹೇಳಿಕೊಂಡರೂ ಅವರು ಕೇಳಲಿಲ್ಲ. ಹೀಗಿರಲು ಅವರ ಹೆಂಡತಿ ಒಮ್ಮೆ ಹೊಳೆಗೆ ಹೋದಾಗ ಈ ಮುದುಕಿ ಅವಳ ಹತ್ತಿರ ಹೋಗಿ, ಅವಳ ಮುಖವನ್ನು ಕಚ್ಚಿಬಿಡುವವಳಂತೆ ಸಮೀಪಿಸಿ, ಬಿರಬಿರನೆ ನೋಡಿ, "ನೀನು ಯಾರಮ್ಮಾ, ಈ ತಹಸೀಲು ಮಾಡಲು ಬಂದಿದ್ದಾರೆಯೇ, ಅವನ ಹೆಂಡತಿಯಾ? ಊರಿನ ಬಾಯಿನಲ್ಲೆಲ್ಲಾ ಬಿದ್ದಿದ್ದೀರಿ! ಮಕ್ಕಳು ಮರಿಗಳ ಜೊತೆ ಕ್ಷೇಮವಾಗಿರಬೇಕಮ್ಮಾ!" ಎನ್ನಲು, ಆ ಮಹಿಳೆ ಹೆದರಿ, ನದೀ ತೀರದಲ್ಲಿ ನಡೆದುದನ್ನು ಗಂಡನಿಗೆ ಹೇಳಿ, "ನಮಗೇಕೋ ಶನಿ ವಕ್ರಿಸಿದೆ. ಅವಳ ಬಾಯಿಯಲ್ಲಿ ಬಂದದ್ದು ನಚ್ಚುನುಡಿ ಎಂದು ಖಂಡಿತವಾಗಿದೆ. ಈ ಊರಿನವರಿಗೆ ವಿರೋಧ ಮಾಡಬೇಡಿ." ಎಂದು ಬೇಡಿದಳು. ಅವರೂ ಹೆದರಿ, ಕಂದಾಯ ವಸೂಲಿಯನ್ನು ಪೂರ್ತಿಯಾಗಿ ಮುಂದಕ್ಕೆ ಹಾಕಿದುದು ಮಾತ್ರವಲ್ಲದೆ ಆ ಊರಿಗೆ ಒಂದು ಕೊಳವನ್ನೂ ಮಾಡಿಕೊಟ್ಟು ಹೋದರಂತೆ. ಆ ಊರಿಗೆ ಇಷ್ಟು ದೊಡ್ಡ ಉಪಕಾರವನ್ನು ಮಾಡಿದ ಮುದುಕಿಯ ಹೆಸರು ಕುಪ್ಪಿಅಜ್ಜಿ ಅಂತ.

ಅವಳಿಗೆ "ಪಾಪ್ಪಾಪಟ್ಟಿ ಮನೆಯ ಮಚ್ಚುಕತ್ತಿ" ಎಂಬ ಬಿರುದುಂಟ
ಇದಕ್ಕೆ ಕಾರಣವೇನೆಂದರೆ ಸುಮಾರು ಇಪ್ಪತ್ತು ವರ್ಷಗಳ ಹಿಂದೆ ತನ
ಪಕ್ಕದ ಮನೆಯಾದ ಪಾಪ್ಪಾಪಟ್ಟಿ ಶಂಕರಯ್ಯರ್ ಮನೆಯ ಹಿತ್ತಲಲ್ಲಿ ಹಾಕಿ
ಸೌದೆಯನ್ನು ರಾತ್ರಿ ಕದ್ದು, ಮರುದಿನ ಆ ಸೌದೆಯನ್ನು ಕಡಿಯಲು ಮಚ್
ಕತ್ತಿಯನ್ನು ಕೇಳಲು ಅವರ ಮನೆಗೇ ಹೋದಳು. ಆಗ ಅವಳ ಕಳವು ಬಯ
ಲಾಯಿತು. ಆದುದರಿಂದ ಅಂದು ಮೊದಲು ಅವಳಿಗೆ "ಪಾಪ್ಪಾಪಟ್
ಮನೆಯ ಮಚ್ಚುಕತ್ತಿ" ಎಂಬ ಬಿರುದು ನಿಂತಿತು.

ಅವಳು ಬೀದಿಯಲ್ಲಿ ಹೋದಾಗಲೆಲ್ಲ ಆ ಊರಿನ ಹುಡುಗರು (ಕೆಲ
ಸಮಯಗಳಲ್ಲಿ ದೊಡ್ಡವರೂ ಸಹ) ಆ ಹೆಸರನ್ನಿಟ್ಟು ಕರೆದರೆ ಅವಳಿ
ಅಸಾಧ್ಯವಾದ ಕೋಪ ಉಂಟಾಗಿ ಅವಳು ಯದ್ವಾ ತದ್ವಾ ಬಯ್ಯುವಳ
ಹಾಗೆ ಬೈದರೆ, ಹುಡುಗರಿಗೆ ಮತ್ತಷ್ಟು ಉತ್ಸಾಹ. ಕೊನೆಯಲ್ಲಿ ಹೀ
ಕೂಗಿಸಿಕೊಳ್ಳುವುದರಲ್ಲಿಯೂ, ಕೋಪಿಸಿಕೊಳ್ಳುವುದರಲ್ಲಿಯೂ ಅವಳಿಗ
ಉತ್ಸಾಹ ಉಂಟಾಯಿತು. ಹೊತ್ತು ಹೋಗದಿದ್ದರೆ, ಅವಳು ಬೀದಿಯ
ನಡೆಯುತ್ತ ಸುಮ್ಮನೆ ಇರುವವನನ್ನು ನೋಡಿ, "ನೀನು ಒಳ್ಳೆಯ ಹುಡುಗ
ಏನೂ ಹೇಳಲಾರೆ." ಎನ್ನುವಳು. "ಹೌದಜ್ಜಿ" ಎಂದು ಅವಳೆದುರಿ
ಹೇಳಿ ಅವಳು ಸ್ವಲ್ಪ ದೂರ ಹೋದಕೂಡಲೇ, "ಪಾಪ್ಪಾಪಟ್ಟಿ ಮನೆ
ಮಚ್ಚುಕತ್ತಿ" ಎಂದು ಗಟ್ಟಿಯಾಗಿ ಕೂಗಿ ಓಡಿ ಹೋಗುವನು. "ಏನೋ
ಹಾಳಾಗಿ ಹೋಗು!" ಎಂದು ತನ್ನ ರಾಮಬಾಣವನ್ನು ತೊಡುವಳು. ಗೇ
ಮಾಡುವ ಹುಡುಗರು ಅವಳನ್ನು ನೋಡಿ ದಿನಕ್ಕೆ ಒಂದು ಸಲವಾದರ
"ಪಾಪ್ಪಾಪಟ್ಟಿ ಮನೆಯ ಮಚ್ಚುಕತ್ತಿ. ಎಂದು ಹೇಳಿದ್ದೇನೆಯೇ ಅಜ್ಜಿ?
"ಅಜ್ಜಿ, ಅವನು ಸುಮ್ಮನೆಯಾದರೂ ನಿನ್ನನ್ನು 'ಪಾಪ್ಪಾಪಟ್ಟಿ ಮನೆ
ಮಚ್ಚು ಕತ್ತಿ' ಎಂದು ಕರೆಯುತ್ತಾನೆ." ಎಂದು ಹೇಳದವರಂತೆ ಹೇಳ
ವುದೂ ವಾಡಿಕೆ.

ಈಗ ಅವಳಿದ್ದ ಸ್ಥಿತಿಯನ್ನು ಮುತ್ತುಸ್ವಾಮಿ ಅಯ್ಯರ್ ನೋಡಿ
ಕೂಡಲೆ ತಿಳಿದುಕೊಂಡರು. ಅವಳಿದ್ದ ಸ್ಥಳಕ್ಕೆ ಅವರು ಬಂದ ಕೂಡಲ
ಎಡಡು ಪಕ್ಕಗಳಲ್ಲಿಯೂ ಜನರು ಸರಿದರು. ನಡೆದುದು ಏನೆಂದರೆ, ಅವಳ

ವಾಡಿಕೆಯಂತೆ ಗ್ರಾಮ ಪ್ರದಕ್ಷಿಣೆಯನ್ನು ಮಾಡಿಕೊಂಡು ಬರುವವಳಂತೆ ಬಂದಾಗ ಮದುವೆಗೆ ಬಂದಿದ್ದವರಲ್ಲಿ ಒಬ್ಬನು ಆ ಊರಿನ ಹುಡುಗರಿಂದ ಪ್ರೇರೇಪಿಸಲ್ಪಟ್ಟು ಅವಳನ್ನು ಬಿರುದು ಸಹಿತ ಕರೆದ ಕೂಡಲೆ ಅವಳು ರೂಢಿಯಂತೆ ಬೈಯ್ಯುವುದಕ್ಕೆ ಪ್ರಾರಂಭಿಸಿದಳು. "ಮದುವೆಯ ಮನೆಯ ಚಪ್ಪರದಲ್ಲಿ ಬೈಯ್ಯಬೇಡ" ಎಂದು ಅವನೆಂದನು. ಅವಳು ಅದೇ ಸಮಯ ವೆಂದೆಣಿಸಿ, "ನಿನ್ನ ಮದುವೆಯನ್ನೂ ಕಂಡಿದ್ದೇನೇಳು. ನಿನ್ನ ಮದುವೆ ಹಾಳಾಗ" ಎಂದು ಬೈದ ಕೂಡಲೇ ಅಲ್ಲಿದ್ದವರಲ್ಲಿ ಒಬ್ಬನಿಗೆ ರೇಗಿ ಅವ ಳನ್ನು ಹಿಡಿದು ಆಚೆ ತಳ್ಳಿದನು. ಅವಳು ಕೆಳಗೆ ಬಿದ್ದು ಮತ್ತೆ ಹೆಚ್ಚಾಗಿ ಬೈಯ್ಯಲು, ಗುಂಪು ಸೇರಿತು. ಏನು ಮಾಡಿದರೂ ಅವಳು ಆ ಸ್ಥಳವನ್ನು ಬಿಟ್ಟು ಹೋಗದೆ ಇದ್ದುದರಿಂದ ಒಬ್ಬನು ಅವಳನ್ನು ಬಲವಾಗಿ ಹೊಡೆದನು. ಆ ಮೇಲೆ ಅವಳು ದೊಡ್ಡದಾಗಿ ಕೂಗಿಕೊಂಡು ಆರ್ಭಟಿಸಿದಳು. ಅದನ್ನು ಕೇಳಿಯೇ ಒಳಗಿದ್ದವರೆಲ್ಲರೂ ಓಡಿ ಬಂದರು.

ಮುತ್ತುಸ್ವಾಮಿ ಅಯ್ಯರ್ ಅವಳ ಬಳಿ ಹೋಗಿ, "ಇದೇನಜ್ಜಿ ಇದು ?" ಎಂದು ಕೇಳಲು ಅವಳು, "ಅಪ್ಪಾ! ಮುತ್ತುಸ್ವಾಮಿ, ಬಂದೆಯಾ? ಮಹಾರಾಜನಂತೆ ಇರುವೆಯಪ್ಪಾ! ಈ ಶನಿಗಳೆಲ್ಲ ನನ್ನನ್ನು ಹಾಕಿ ಹೊಡೆಯುತ್ತವೆ. (ಅಳುವಂತೆ ಭಾವಿಸಿಕೊಂಡು) ಇಗೋ ನೋಡು— ಇಲ್ಲಿ ಗಾಯ—ಇಲ್ಲಿ ಗಾಯ" ಎಂದು ಅವರ ಕೈಯನ್ನು ಹಿಡಿದುಕೊಂಡು ಅವಳ ಬೆನ್ನಿನ ಕಡೆ ಎಳೆದುಕೊಂಡು ಹೋಗಲು ಅವರು ಕೈಯ್ಯನ್ನು ಹಿಂದೆಳೆದುಕೊಂಡು, "ಅವರು ಬಿದ್ದಿರುತ್ತಾರೆ, ನೀನು ಒಳ್ಳೆಯವಳು. ಬುದ್ಧಿ ಶಾಲಿ, ಏಳು. ಒಳ್ಳೆಯ ಸಮಯವನ್ನು ಹುಡುಕಿದೆ. ಮನೆಗೆ ಹೋಗು! ನೀನು ಏನು ಮಾಡೀಯ ? ನಿನ್ನದೇನೂ ದೋಷವಿಲ್ಲ." ಎಂದು ಹೇಳಿ-ದರು. ಅವಳು, "ನನಗೆ ತೊಂಬತ್ತು ವರ್ಷವಾಯಿತು, ನನಗೆ ಏಟು ತಿನ್ನಲು ಶಕ್ತಿ ಇದೆಯೇನಪ್ಪ? ಮುತ್ತುಸ್ವಾಮಿ, ನನ್ನ ಚಿನ್ನ, ನೀನು ಇಲ್ಲದಿದ್ದರೆ...." ಎಂದು ಹೇಳಿ ಮುಗಿಸುವುದರೊಳಗೆ ಅವರು "ಸರಿ— ಹೋಗು. ನನಗೆ ನಡೆದುದೆಲ್ಲವೂ ಗೊತ್ತು. ಹೋಗು... ಸರಿಯೇ ಹೋಗು, ಅತ್ತಕಡೆ" ಎಂದು ಕೋಪಿಸುತ್ತ ಹೇಳಲು ಅವಳು ಏಳುತ್ತ, "ಏನಪ್ಪಾ,

ಹೆದರಿಸುತ್ತೀಯಲ್ಲ! ಒಳ್ಳೆಯುವನಪ್ಪಾ— ನಿನಗೆ ಸಮನಾರು? ನನ್ನ ಮಗ ಹೇಳುತ್ತಾನೆ" ಎಂದು ಹೇಳಲು, "ಒಳ್ಳೆಯುವನಾಗಿದ್ದುದನ್ನು ಕಂಡೇ ಇಷ್ಟು ದೂರಕ್ಕೆ ಬಂದಿದೆ. ನೀನೂ ಒಳ್ಳೆಯುವಳೆ. ಆ ಮೇಲೆ ಮಾತನಾಡೋಣ ವಂತೆ ಹೋಗು" ಎನ್ನಲು, ಅವಳು ತನ್ನ ಬಟ್ಟೆ ಬರೆಗಳನ್ನು ಸುತ್ತಿ ಗಂಟು ಮಾಡಿಕೊಂಡು ಹೊರಟಳು. ಅವಳು ಹೋದಮೇಲೆ ಮುತ್ತು ಸ್ವಾಮಿ ಅಯ್ಯರ್ ಹಿಂತಿರುಗಿದರು.

"ಇದೇನು ಅವಲಕ್ಷಣ— ಇಂತಹ ಶಕುನ ಸಂಭವಿಸಿತು" ಎಂದು ಕೃಷ್ಣ ಅಯ್ಯರವರೂ, ರಾಮಸ್ವಾಮಿ ಶಾಸ್ತ್ರಿಗಳೂ ಚಿಂತಿಸುತ್ತಿರಲು, ಕುಪ್ಪುಸ್ವಾಮಿ ಅಯ್ಯರ್ ಅವರನ್ನು ಸಂಧಿಸಿ, ಅವರ ಚಿಂತೆಯನ್ನು ಗ್ರಹಿಸಿ, ನಗುತ್ತ, "ಏನು ಮಾವ, ಒಳಗೆ ಹೋಗೋಣ, ಇದೊಂದು ವಿನೋದ. ಇವಳಂತೆ ಇನ್ನೂ ಇಬ್ಬರು, ಮೂವರು ಹುಚ್ಚರಿದ್ದಾರೆ ಈ ಊರಿನಲ್ಲಿ" ಎಂದರು. ಕುಪ್ಪಿ ಮಾಡಿದ್ದುದು ಅಪಶಕುನವೆಂದು ಮುತ್ತುಸ್ವಾಮಿ ಅಯ್ಯ ರವರಿಗೂ ಮುಟ್ಟಿತು. ಆದರೂ, ಅವಳು ಪೊನ್ನಮ್ಮಾಳ್ ಸಂಗಡ ಹಿಂದಿನ ದಿನ ಮಾತನಾಡುತ್ತಿದ್ದುನ್ನು ಕೇಳಿದ್ದ ಅವರು, ಅವಳನ್ನು ಆ ಪೊನ್ನ-ಮ್ಮಾಳೇ ಪ್ರೇರೇಪಿಸಿ ಕಳುಹಿಸಿರುವಳೆಂದು ಭಾವಿಸಿದರು. ಆದರೂ ಒಳ್ಳೆಯು ವೇಳೆ ಮಾಂಗಲ್ಯಧಾರಣೆಯ ಸಮಯಕ್ಕೇ ಬಂದು ಬಿಡದೆ ನಮ್ಮನ್ನು ಕಾಪಾ ಡಿದಳು ಎಂದು ಅವರಿಗೆ ಸಂತೋಷ. ಅವರು ಅವಳನ್ನು ಹುಚ್ಚಿ ಎಂದ ಕೂಡಲೆ ಕೃಷ್ಣ ಅಯ್ಯರ್, "ಅವಳು ಹುಚ್ಚಿಯಂತೆ ಕಾಣಿಸಲಿಲ್ಲವಲ್ಲಾ!" ಎಂದು ಹೇಳಿದರು. ಮುತ್ತುಸ್ವಾಮಿ ಅಯ್ಯರವರ ಮನಸ್ಸೂ ಸ್ವಲ್ಪ ಕಲಕಿತು. "ಅರ್ಧ ಹುಚ್ಚು. ಬಂದ ಕೆಲಸ ಬೇರೆ— ಆಮೇಲೆ ಹೇಳುತ್ತೇನೆ. ತಂಜಾ ವೂರವಳ ಚೇಷ್ಟೆ ಇದು." ಎಂದು ಹೇಳಿದರು. ರಾಮಸ್ವಾಮಿ ಶಾಸ್ತ್ರಿಗಳು, "ಆದರೂ ಹೀಗೆ ಮಾಡುವುದೇ?" ಎನ್ನಲು ಮುತ್ತುಸ್ವಾಮಿ ಅಯ್ಯರವರು "ಅವಳೇ! ಅವಳು ಎಲ್ಲ ಮಾಡುವಳು, ಮಾವಾ! ಸರಿ. ಅಂದರೆ... ಆ ಕತ್ತೆಯ ಮಾತೇಕೆ? ಬಿಟ್ಟುಕಳ್ಳಿ ಇದ್ದಂತೆ ಇದೆ. ಎಲ್ಲಕ್ಕೂ ಮೀನಾ ಕ್ಷಿಯೇ ಕಾಪಾಡಬೇಕು. ಅವಳ ಮೇಲೆ ಭಾರವನ್ನು ಹಾಕೋಣ. ಹಾಗೆಯೇ

ಬನ್ನಿ. (ಗಟ್ಟಿಯಾಗಿ) ಎಲ್ಲರೂ ಒಳಕ್ಕೆ ಬರಬೇಕು. ದಯಮಾಡಬೇಕು." ಎಂದು ಹೇಳುತ್ತಾ ಎಲ್ಲರನ್ನೂ ಒಳಗೆ ಕರೆದುಕೊಂಡು ಹೋದರು.

## ೧೦. ಮದುವೆಯ ಸಂಭ್ರಮ

ಮದುವಣಿಗನಾದ ಶ್ರೀನಿವಾಸನು ತನಗೆ ಮದುವೆಯಾಗುವುದನ್ನು ನೆನೆದು ತಾನು ಹೆಮ್ಮೆಪಟ್ಟುಕೊಂಡುದು ಅಷ್ಟಿಷ್ಟಲ್ಲ. ತನ್ನ ಪಕ್ಕದಲ್ಲಿ ಲಕ್ಷಣವಾದ ಒಂದು ಹೆಣ್ಣು ತನ್ನ ಹೆಂಡತಿಯಾಗಿ ಕುಳಿತಿರುವುದನ್ನು ನೆನೆದು ಅವನ ಮನಸ್ಸು ಅರಳಿತು. ಹೊಸದಾಗಿ ಪಟ್ಟಾಭಿಷೇಕವಾಗುವ ರಾಜ ಕುಮಾರನಿಗೂ ಅಷ್ಟು ಸಂತೋಷ, ಗರ್ವ ಇರಲಾರದು. ಅವನು ತನ್ನ ಆಸನದಲ್ಲಿ ಸ್ವಲ್ಪ ಕೂಡಾ ಬೆನ್ನನ್ನು ಬಗ್ಗಿಸದೆ ಗಂಭೀರವಾಗಿ ನೆಟ್ಟಗೆ ಕುಳಿತಿದ್ದನು. ಅಂಗವಸ್ತ್ರವನ್ನು ಆಗಾಗ್ಗೆ ಎಳೆದುಕೊಳ್ಳುತ್ತ ಸರಿಮಾಡಿಕೊಳ್ಳುವನು. ಬಲಗೈಯಿಂದ ಆಗಾಗ್ಗೆ ತನ್ನ ಮುಖ ಗಡ್ಡಗಳನ್ನು ಸವರಿಕೊಳ್ಳುತ್ತಿದ್ದನು. ತನ್ನ ಗಂಟಲನ್ನು ಸರಿಮಾಡಿಕೊಳ್ಳುವವನಂತೆ ಆಗಾಗ್ಗೆ ಕೆಮ್ಮುತ್ತಿದ್ದನು. ಕೆಲವು ವೇಳೆ ತನ್ನ ಎರಡೂ ಕೈಗಳಿಂದ ಮೊಳಕಾಲನ್ನು ಹಿಡಿದುಕೊಂಡು ಆನೆ ಊಗಲಾಡುವಂತೆ ಊಗಲಾಡುವನು. ಒಮ್ಮೆ ಬೆರಳುಗಳಿಂದ ಇಂಗ್ಲೀಷ್ ಅಕ್ಷರಗಳನ್ನು ದೊಡ್ಡದಾಗಿ ಕೆಳಗೆ ಬರೆಯುವನು. ಇನ್ನೊಮ್ಮೆ ತನ್ನ ಪಕ್ಕದಲ್ಲಿದ್ದ ಸುಬ್ಬರಾಯನ ಕಡೆ ತಿರುಗಿಕೊಂಡು ಅವನೊಡನೆ ಇಂಗ್ಲೀಷಿನಲ್ಲಿ ಮಾತು ಕಥೆ ನಡೆಸುವನು. ಹೋಮ ಮಾಡುವಾಗ ತನ್ನ ಕಣ್ಣಲ್ಲಿ ನೀರು ಹರಿಯಲು ಅದನ್ನು ಅಂಗವಸ್ತ್ರದಿಂದ ಒರೆಸಿ ಹಾಕದೆ, ತನ್ನ ಬೆರಳಿನಿಂದ ಓರೆ ಮಾಡಿ ಸುಬ್ಬರಾಯನನ್ನು ನೋಡಿ, ತನ್ನ ಹೆಂಡತಿಯ ಕಿವಿಯಲ್ಲಿ ಬೀಳುವಂತೆ, "ಆನಂದ ಬಾಷ್ಪ"ವೆಂದು ಹೇಳಿಕೊಂಡನು. ಹೊಸದನ್ನು ಕಂಡವನಂತೆ ಆಗಾಗ್ಗೆ ಮುಗುಳ್ನಗೆ ನಗುವನು. ನಿನ್ನೆಯವರೆಗೂ ಸರಿಯಾದ ರೀತಿಯಲ್ಲಿ ಪಂಚೆಯನ್ನು ಉಡಲೂ ಸಹ ಬಾರದ ಹುಡುಗನು ಈ ದಿನ ದೊಡ್ಡ ಮನುಷ್ಯನಂತೆ ನಡೆದುಕೊಂಡ ವೈಖರಿಯನ್ನು ನೋಡಿದರೆ,

ಪ್ರಾಯಶಃ ನಾವೂ ನಮ್ಮ ಮದುವೆಯ ಕಾಲದಲ್ಲಿ ಹೀಗೆಯೇ ನಡೆದ
ಕೊಂಡಿರಬಹುದು. ಅಲ್ಲದೆ, ಶ್ರೀನಿವಾಸನು ಸಣ್ಣ ವಯಸ್ಸಿನವನೆ ಅಲ್ಲವೆ

ಬಹಳ ದೊಡ್ಡ ಮನುಷ್ಯರಾದ ಮ. ರಾ. ರಾ. ರಾಜಮಾನ್ಯ
ಶ್ರೀಮಂತ ಶ್ರೀನಿವಾಸ ಅಯ್ಯರವರು ತಮ್ಮ ಆಸನದಲ್ಲಿ ಈ ಬಗೆಯಲ್ಲಿ
ಮಂಡಿಸಲು, ಮಗುವಾದ ಲಕ್ಷ್ಮಿ ಮೈಯನ್ನು ಕುಗ್ಗಿಸಿಕೊಂಡು, ತಲೆ
ಬಗ್ಗಿಸಿ, ಅವರಿಂದ ಒಂದು ಮೊಳ ದೂರದಲ್ಲಿ ಚಿನ್ನದಲ್ಲಿ ಎರಕ ಹುಯ್ದ
ಪ್ರತಿಮೆಯಂತೆ ಅಲುಗಾಡದೆ ಕುಳಿತಿದ್ದಳು. ಪತಿದೇವನನ್ನು ಈವರೆಗೂ
ಅವಳು ಚೆನ್ನಾಗಿ ನೋಡಿರಲೇ ಇಲ್ಲ. ಅವಳು ಸಭಾಮಂಟಪಕ್ಕೆ ಬಂದಾಗ
ಒಂದು ಕ್ಷಣ ಶ್ರೀನಿವಾಸನು ಜ್ಯೋತಿಯಂತೆ ಕುಳಿತಿದ್ದುದು ಮಾತ್ರ ಅವ
ಳಿಗೆ ಕಾಣಿಸಿತು. ಆದರೆ ಅವನ ರೂಪವನ್ನೂ, ಮುಖವನ್ನೂ ಇನ್ನೂ
ಸರಿಯಾಗಿ ನೋಡಿರಲಿಲ್ಲ. ಯಾರಿಗೂ ತಿಳಿಯದೆ ಓರೆಗಣ್ಣಿನಿಂದ ಅವನನ್ನು
ನೋಡಬೇಕೆಂಬ ಇಷ್ಟವೇನೋ ಇದ್ದಿತು. ಆದರೆ, ಎಲ್ಲರೂ ಅವಳನ್ನೇ
ಗಮನಿಸುತ್ತಿದ್ದಂತೆ ಅವಳಿಗೆ ತೋರಿದುದರಿಂದ ಹೀಗೆ ನೋಡಲು ಬಹಳ
ನಾಚಿಕೊಂಡಳು. ಶ್ರೀನಿವಾಸನಾದರೂ ಇವಳನ್ನು ನೋಡಿದ್ದನೆ! ಅದೂ
ಇಲ್ಲ: ಅವನಿಗೆ ಹೆಂಗಸರಿಗಿಂತಲೂ ಹತ್ತರಷ್ಟು ನಾಚಿಕೆ. ಅವಳನ್ನು ನೋಡ
ಬೇಕೆಂಬ ಆಸೆಯಂತೂ ಪೂರ್ಣವಾಗಿದ್ದಿತು. ಆದರೆ ನಾಚಿಕೆ. ಇದಕ್ಕೆ ಅವ
ಕಾಶವೇ ಆಗಲಿಲ್ಲ. ಇವರ ಪರಿಸ್ಥಿತಿ ಹೀಗಿರಲು ತಾಟಕಿಯಾದ ಕುಪ್ಪಮ್ಮನ
ರೋದನ ಸ್ವರ ಕೇಳಿಸಿತು. ಕೂಡಲೆ ರಾಮಣ್ಣ ಪುರೋಹಿತರು, ಮತ್ತು
ಕೆಲವರು ಮಾತ್ರ ಉಳಿದು, ಎಲ್ಲರೂ ಎದ್ದು ಹೋದರು. ರಾಮಣ್ಣ
ಪುರೋಹಿತರೂ ಬಾಗಿಲವರೆಗೂ ಹೋಗಿ ಆ ಕೂಗಿನ ಕಾರಣವನ್ನು ತಿಳಿದು
ಬಂದು, "ಈ ಕಡುಪಾಪಿಗೆ ಸಾಯುವ ಕಾಲ ಬರಲಿಲ್ಲವಲ್ಲ. ಇವಳನ್ನು
ತುಂಡುತುಂಡಾಗಿ ಕಡಿದು ಹಾಕಿದರೆ ತಾನೆ ಏನು?" ಎಂದು ಗೊಣ
ಗುತ್ತ ಹಿಂತಿರುಗಿದರು. ಮಗು ಲಕ್ಷ್ಮಿಯಾದರೊ ಆ ಅಳುವಿನ ಧ್ವನಿಯನ್ನು
ಕೇಳಿ, ಬೇಟೆಗಾರರ ಕಹಳೆಯನ್ನು ಕೇಳಿದ ಜಿಂಕೆಯಂತೆ ಬೆಚ್ಚಿ ಬಿದ್ದು
ನಡುಗಿದಳು. ಇಷ್ಟರಲ್ಲಿ ಶ್ರೀನಿವಾಸನು ವಿಷಯವನ್ನು ತಿಳಿದುಕೊಂಡು
ಬರಲು ಸುಬ್ಬರಾಯನನ್ನು ಕಳುಹಿಸಿಕೊಟ್ಟು ಪುರೋಹಿತರನ್ನು ನೋಡಿ

ಬಹಳ ಗಂಭೀರವಾಗಿ, "ತಾತಾ! ಅಲ್ಲಿ ಏನು ವಿಶೇಷ?" ಎಂದು ಕೇಳಿ, "ಈ ಅಲ್ಪ ವಿಷಯವೇ ತಾನೆ— ಬೇರೇನು ಇಲ್ಲವಲ್ಲ?" ಎಂದು ಬಹಳ ಅಲಕ್ಷ್ಯದಿಂದ ಹೇಳಿದನು. ಪುರೋಹಿತರ ಉತ್ತರವನ್ನು ಕೇಳಿದ ಲಕ್ಷ್ಮಿ ಮನಸ್ಸಿನಲ್ಲಿ ನೆಮ್ಮದಿ ತಾಳಿ, ಗುಂಪು ಚದುರಿದುದನ್ನು ಒಂದು ದೊಡ್ಡ ಭಾರ ಇಳಿದಂತೆ ಭಾವಿಸಿ, ತನ್ನ ಬಗ್ಗಿಸಿದ ತಲೆಯನ್ನು ಸ್ವಲ್ಪ ನೆಟ್ಟಗೆ ಮಾಡಿಕೊಂಡಳು. ಶ್ರೀನಿವಾಸನು ಮತ್ತೆ ಗುಂಪು ಸೇರುವುದರೊಳಗಾಗಿ ತನ್ನ ಹೆಂಡತಿಯನ್ನು ನೋಡಿಬಿಡಬೇಕೆಂಬ ಸಂಕಲ್ಪವನ್ನು ಮಾಡಿ ದೂಲವನ್ನೂ ಕೈಸಾಲೆಯನ್ನೂ, ಗೋಡೆಯನ್ನೂ ನೋಡುವನಂತೆ ನಟಿಸಿ ಮೆಲ್ಲಗೆ ಮೆಲ್ಲಗೆ ತನ್ನ ಹೆಂಡತಿಯನ್ನು ನೋಡುವ ಸಾಹಸಮಾಡಿದನು.

ಹೀಗೆ ಇವನು ಕಳ್ಳತನದಿಂದ ನೋಡುವಾಗ, ಅವಳು ತಲೆಯನ್ನು ಸರಿಮಾಡಿಕೊಳ್ಳುವಂತೆ ನಟಿಸಿ ಇವನ ಸೌಂದರ್ಯವನ್ನು ಸೂಕ್ಷ್ಮವಾಗಿ ನೋಡಿ ಬಹಳ ಆನಂದಗೊಂಡು ಮಂದಹಾಸವನ್ನು ಬೀರುತ್ತ, ಅವನ ದೇಹದಿಂದ ತನ್ನ ಕಣ್ಣುಗಳನ್ನು ಬೇರ್ಪಡಿಸಲಾರದವಳಾಗಿರಲು ಆಕಸ್ಮಿಕವಾಗಿ ಇಬ್ಬರ ಕಣ್ಣುಗಳೂ ಸಂಧಿಸಿದುವು.

ಕೂಡಲೆ ಲಕ್ಷ್ಮಿ ತಲೆ ಬಗ್ಗಿಸಿಬಿಟ್ಟಳು. ಅವಳ ಮುಖ ಬೆವರಿತು. ಕೈಕಾಲುಗಳು ಕಂಪಿಸಿದುವು. ರೋಮಾಂಚವಾಯಿತು. ಬೆಳಗಿನ ಸೂರ್ಯನನ್ನು ನೋಡಿದವನ ಕಣ್ಣಿಗೆ ಎಲ್ಲಿ ನೋಡಿದರೂ ಹೇಗೆ ಸೂರ್ಯಬಿಂಬವೇ ಕಾಣುವುದೋ, ಹಾಗೆಯೇ ಸ್ವಲ್ಪ ಹೊತ್ತು ಲಕ್ಷ್ಮಿಯ ಕಣ್ಣಿಗೆ ತನ್ನ ಪತಿಯ ಕೆಂದಾವರೆಯಂತಹ ಅರಳಿದ ಮುಖ, ಚೆಲುವಿನಿಂದಲೂ, ಗಾಂಭೀರ್ಯದಿಂದಲೂ ತುಂಬಿದ ನೋಟ—ಎಲ್ಲೆಲ್ಲಿಯೂ ಕಾಣತೊಡಗಿದುವು! ಸಂತೋಷದಲ್ಲಿ ಅವಳ ಮೈ ಹಿಗ್ಗಿತು. ಶ್ರೀನಿವಾಸನಿಗೆ ಆದ ಆನಂದಕ್ಕೆ ಮೇರೆ ಇರಲಿಲ್ಲ. ಅವನ ಕಣ್ಣುಗಳು ಮಕರಂದವನ್ನು ಸವಿದ ದುಂಬಿಗಳಂತೆ ಸಂತೋಷದಿಂದ ಪ್ರಕಾಶಿಸುತ್ತ ಅವನ ಮನಸ್ಸಿನ ಆಹ್ಲಾದವನ್ನು ವ್ಯಕ್ತ ಮಾಡಿದುವು. ಲಕ್ಷ್ಮಿಯ ಕೋಮಲವಾದ ಮುಖದಲ್ಲಿ ತೋರಿದ ಮಂದಹಾಸವೂ ಅವಳ ವಿಶಾಲ ನೇತ್ರಗಳಲ್ಲಿ ಕಾಣಿಸಿದ ಹೊಳಪೂ ಅವನ ಅಂತರಂಗವನ್ನು ಸೂರೆಗೊಂಡುವು. "ಏನು ಪ್ರೇಮ! ಏನು ಪ್ರೇಮ!

ನನ್ನನ್ನು ನೋಡಿದ ಅವಳು ಬೀರಿದ ಮಂದಹಾಸ ಒಂದು ಸಾಲದೆ ? ಎಂದು ಅವನು ನೆನೆನೆನೆದು ಅಮೃತ ಉಂಡವನಂತೆ ಸಂತಸಗೊಂಡನು ಹೀಗೆ ಪರಸ್ಪರ ಇಬ್ಬರೂ ಆನಂದಾನುಭವದಲ್ಲಿ ಮಗ್ನರಾಗಿ ಮೈಮರೆತಿದ್ದರು

ಈ ವೇಳೆಗೆ ಕುಪ್ಪಿ ಅಜ್ಜಿಯ ಬೈಲಾಟ ಮುಗಿದು ಎಲ್ಲರೂ ಹಿಂತಿರು ಗಿದರು. ಆದುದರಿಂದ ಮತ್ತೆ ವಧೂವರರು ಒಬ್ಬರನ್ನೊಬ್ಬರು ನೋಡುವ ಅವಕಾಶ ಉಂಟಾಗಲಿಲ್ಲ. ಆದರೆ ಲಕ್ಷ್ಮಿಯು ತನ್ನ ಕಂಠದಲ್ಲಿ ಶೋಭಿ ಸುತ್ತಿದ್ದ ಮಾಂಗಲ್ಯ ಸೂತ್ರವನ್ನು ಮುಟ್ಟಿಮುಟ್ಟಿ ನೋಡಿಕೊಳ್ಳು ತ್ತಿದ್ದಳು. ಶ್ರೀನಿವಾಸನು ಇದನ್ನು ಕಂಡು ಈ ರೀತಿಯಲ್ಲಿ ತನ್ನ ಮೇಲೆ ಅವಳಿಗಿರುವ ಪ್ರೇಮವನ್ನು ವ್ಯಕ್ತಮಾಡುತ್ತಿರುವಳೆಂದು ಕೊಂಡನು. ಮುಟ್ಟಿದಾಗಲೆಲ್ಲ ಅದನ್ನು ಮುತ್ತಿಟ್ಟಂತೆ ಭಾವಿಸಿದನು. ಅದು ನಿಜವೋ ಅಲ್ಲವೊ, ನನಗೆ ತಿಳಿಯದು. ಆದರೆ ಅವನು ತನಗೆ ಹಾಕಿದ್ದ ಜನಿವಾರ ವನ್ನೂ, ಪಂಚೆ ಕಚ್ಚೆಯನ್ನೂ ತೀಡಿಕೊಳ್ಳುತ್ತಿದ್ದನೆಂಬುದು ವಾಸ್ತವದ ಮಾತು. ಆಶೀರ್ವಾದ ಮುಗಿದು ಎಲ್ಲರೂ ಏಳುವ ತರುಣದಲ್ಲಿ, ಹಿಂದೆ ಒಬ್ಬರಿಂದೊಬ್ಬರು ಬಹಳ ದೂರವಿದ್ದ ವಧೂವರರಲ್ಲಿ ಒಂದು ಗೇಣಷ್ಟೂ ಅಂತರವಿರಲಿಲ್ಲ. ಅನಂತರ ಏಳುವಾಗ ತನ್ನ ಅಂಗವಸ್ತ್ರವನ್ನು ಸರಿಮಾಡಿ ಕೊಳ್ಳುವ ನೆವದಿಂದ ಅದನ್ನು ಅವಳ ಮೇಲೆ ಬೀಸಿದನು. ಎಲ್ಲವನ್ನೂ ಸೂಕ್ಷ್ಮವಾಗಿ ಸಂತೋಷದಿಂದ ಗಮನಿಸುತ್ತಿದ್ದ ಸುಬ್ಬರಾಯನಿಗೆ ಇದು ಗೋಚರವಾಯಿತು.

ಅಂದು ಸಂಜೆ ವಾಡಿಕೆಯಂತೆ ಕೂಡಿದ ಹರಟೆಮಲ್ಲಿಗಳ ಮಹಾ ಸಭೆಯಲ್ಲಿ ಸುಬ್ಬಮ್ಮಾಳ್, "ಏನು ಮಕ್ಕಳಿದ್ದಯೆ ಏನು ? ಮಕ್ಕಳಿದ್ದಯೆ ಮುತ್ತುಸ್ವಾಮಿ ಮನೆಯ ಅಳಿಯನಂತೆ ಇಯಬೇಕು. ಇಲ್ಲವಾದಯೆ ಹುಟ್ಟಲೇ ಬಾಯದು." ಎಂದು (ಪಾಣಿನಿಯಲ್ಲಿಯೂ ಸಹ ಇಲ್ಲದ 'ರೆಯಯೋಃ ಅಭೇದಃ' ಎಂಬ ಸೂತ್ರದ ಪ್ರಕಾರ 'ರ' ಗಳನ್ನು 'ಯ' ವೆಂದು ಉಚ್ಚ ರಿಸುತ್ತ) ಬಹಳ ಖಚಿತವಾದ ಅಭಿಪ್ರಾಯವನ್ನು ದಯಪಾಲಿಸಿದಳು. ಕೂಡಲೆ ನಾಗು, "ಏಕೆ? ಹೆಣ್ಣಿಗೆ ಮಾತ್ರ ಏನು ಕಡಮೆ ಹೆಣ್ಣೂ ಚೆನ್ನಾಗಿಲ್ಲವೆ" ಎನ್ನಲು ವೇಂಬು, "ನನ್ನನ್ನು ಕೇಳಿದರೆ, ಅಳಿಯನಿಗಿಂತ

ಹುಡುಗಿ ಚೆನ್ನಾಗಿದ್ದಾಳೆ. ಅವಳ ನಗು ಒಂದು ಸಾಲದೆ?" ಎಂದಳು. ಕೂಡಲೆ ಸುಬ್ಬು ಆವೇಶ ಬಂದವಳಂತೆ ಕೈಯನ್ನು ಬೀಸಿ, "ಇಗೋ, ಅದೆಲ್ಲಾ ನನಗೆ ತಿಳಿಯದು. ಅಳಿಯ, ಮದುವಣಗಿತ್ತಿ ಚೆನ್ನಾಗಿ ಹೊಂದಿಕೆಯಾಗಿದೆ. ಇಗೊ, ಆವಯ ಮನೆಯಲ್ಲಿ ಮಾಡಿದಯಲ್ಲ ತಾಳೆಗಿಡದಂತೆ ಅಳಿಯನೂ, ಮಯದ ಗೊಂಬೆಯಂತೆ ಹುಡುಗಿಯೂ!" ಎಂದು ಗೇಲಿ ಮಾಡಿದಳು.

ವಸ್ತುತಃ ಲಕ್ಷ್ಮಿ ಚೆಲುವಿನಲ್ಲಿ ಶ್ರೀನಿವಾಸನಿಗೆ ಕಡಿಮೆಯಾದವಳಲ್ಲ. ಅಂಗಾಂಗಗಳೆಲ್ಲವೂ ಬಹು ಸೌಂದರ್ಯದಿಂದ ಶೋಭಿಸುತ್ತಿದ್ದುವು. ವೀಣೆಯ ಸ್ವರಗಳು ಪ್ರತಿಯೊಂದೂ ಇಂಪಾಗಿರುವುದು ಮಾತ್ರವಲ್ಲದೆ ಎಲ್ಲವೂ ಕೂಡಿ ಸೊಗಸಾದ ಗಾನವಾಗಿ ಪರಿಣಮಿಸುವಂತೆ ಆ ಪ್ರತಿಯೊಂದು ಅಂಗವೂ ಲಕ್ಷಣವಾಗಿ ರೂಪುಗೊಂಡು ಅವೆಲ್ಲವೂ ಸೇರಿ ಅವಳ ಸೌಂದರ್ಯಕ್ಕೆ ಶೋಭಾಯಮಾನವಾಗಿದ್ದುವು. ದೈವಿಕ ವರಪ್ರಸಾದದಿಂದ ಕವಿತ್ವವನ್ನು ಮಾಡಿದ ಕಂಬರ್ ಮುಂತಾದವರ ರಚನೆಯಲ್ಲಿ ಹೇಗೆ ಒಂದು ಪದವನ್ನು ಬದಲಾಯಿಸುವುದರಿಂದ ಅವರ ಕವಿತ್ವವೆಲ್ಲ ಕೆಡುವುದೋ ಹಾಗೆಯೇ ಲಕ್ಷ್ಮಿಯ ಯಾವ ಅಂಗವನ್ನು ಸ್ವಲ್ಪ ಬದಲಾಯಿಸಿದ್ದರೂ ಅವಳ ಸೌಂದರ್ಯಕ್ಕೆ ಲೋಪ ಬರುತ್ತಿತ್ತೇ ಹೊರತು ಅದು ವೃದ್ಧಿಯಾಗುತ್ತಿರಲಿಲ್ಲ. 'ಕತ್ತು ಸ್ವಲ್ಪ ಉದ್ದವಾಗಿದ್ದರೆ ಚೆನ್ನಾಗಿತ್ತು' 'ಕಾಲು ಸ್ವಲ್ಪ ಗಿಡ್ಡಾಗಿದ್ದು, ಕೈ ಸ್ವಲ್ಪ ಉದ್ದವಾಗಿದ್ದರೆ' ಎಂದು ಹೀಗೆಲ್ಲ 'ರೆ'-'ಇತ್ತು' ಎಂಬ ಪ್ರಯೋಗಗಳಿಗೆ ಅವಕಾಶವಿಲ್ಲದಂತೆ ಅವಳ ಚೆಲುವು ಸರ್ವಾಂಗ ಸುಂದರವಾಗಿತ್ತು.

ಶ್ರೀನಿವಾಸನ ರೂಪದಲ್ಲಿ ಶಾರೀರಿಕ ಸೌಷ್ಟವಕ್ಕಿಂತ ಮೃದುತ್ವವೂ ಕಾಂತಿಯೂ ವಿಶೇಷವಾದ ಲಕ್ಷಣಗಳು. ಸಂಗೀತದಲ್ಲಿ ತ್ಯಾಗರಾಜರ ಕೃತಿಗೂ ಇಂಗ್ಲೀಷು ನೋಟಿಗೂ ಯಾವ ವ್ಯತ್ಯಾಸವಿರುವುದೋ, ಆ ವ್ಯತ್ಯಾಸವೇ ಈ ಈರ್ವರ ಶರೀರ ರಚನೆಯಲ್ಲಿಯೂ ಇದ್ದಿತು. ಅವರ ಮುಖ ಲಕ್ಷಣಗಳಲ್ಲಿಯೂ ಈ ವಿಧವಾದ ವ್ಯತ್ಯಾಸಗಳಿದ್ದುವು. ಶ್ರೀನಿವಾಸನು ಮಾತನಾಡುವಾಗ ಅವನ ಕಣ್ಣಿನ ಹೊಳಪು ನೋಡುವವರಿಗೆ ಬಿಟ್ಟುಬಿಟ್ಟು ಥಳ

ಥಳಿಸುವ ಮಿಂಚಿನ ನೆನಪನ್ನು ಉಂಟು ಮಾಡುವುದು. ಲಕ್ಷ್ಮಿ ಮಾ
ನಾಡುವಾಗ ಅವಳ ಮುಖ ಲಕ್ಷಣ ಆಗಾಗ್ಗೆ ಸೊಗಸಾಗಿ ಬದಲಾಗುವುದು
ಥಗಥಗವೆಂದು ಹಲವು ವಿಧದಲ್ಲಿ ಪ್ರಕಾಶಿಸುವ ವಜ್ರದ ಹರಳನ್ನು ನೆನಪ
ಮಾಡುವುದು. ಅವಳು ಮಾತಾಡುವಾಗ ಅವಳು ಮಾಡುವ ಅಭಿನಯ
ದಿಂದಲೂ, ಮುಖದಲ್ಲಿ ತೋರುವ ಬದಲಾವಣೆಗಳಿಂದಲೂ, ದೂರ ಇರು
ವವರೂ ಅವಳ ಅಭಿಪ್ರಾಯವನ್ನು ಗ್ರಹಿಸುವಂತಿತ್ತು. ಅವಳ ಎತ್ತರವಾದ
ತುಟಿ, ವಿಶಾಲವಾದ ಕಣ್ಣು, ಎಷ್ಟು ಕಷ್ಟ ಬಂದರೂ ತೋರಿಸಿಕೊಳ್ಳದ
ಸಹಿಸಬಲ್ಲ ದೃಢಚಿತ್ತವನ್ನೂ ತಾಳ್ಮೆಯನ್ನೂ ವ್ಯಕ್ತ ಮಾಡುತ್ತಿದ್ದುವು
ನೆಗೆದಾಡುವ ಮೀನುಗಳಂತೆ ಓಲಾಡುವ ಅವಳ ನೇತ್ರಗಳೂ ಅವಳ ಕೆನ್ನೆ
ಯಲ್ಲಿ ಉಂಟಾಗುವ ಗುಣಿಗಳೂ, ಅವಳ ಸೊಗಸಾದ ಹಲ್ಲಿನ ಸಾಲುಗಳೂ
ಅವಳ ಮುಖಕ್ಕೆ ಒಂದು ಅಪೂರ್ವವಾದ ವಶೀಕರಣ ಶಕ್ತಿಯನ್ನುಂಟು
ಮಾಡಿದ್ದುವು. ಅವಳ ನೋಟ ಬಹು ಉತ್ತಮವಾದ ನೆಮ್ಮದಿಯನ್ನೂ
ಶಾಂತತೆಯನ್ನೂ ಉಳ್ಳದ್ದಾದರೂ, ಅವಶ್ಯವಿದ್ದಾಗ ನೋಡಿದವರಲ್ಲಿ ಕಂಪನ
ವನ್ನುಂಟುಮಾಡಬಲ್ಲ ಒಂದು ತೀಕ್ಷ್ಣತೆಯೂ ಅದರಲ್ಲಿತ್ತೆಂದು ಊಹಿಸಿ
ಕೊಳ್ಳಲು ಅವಕಾಶವಿತ್ತು. ಶ್ರೀನಿವಾಸನ ಮುಖಲಕ್ಷಣ ಬೇರೆ ತರಹದ್ದು.
ಅವನ ಎತ್ತರವಾದ ಕಪೋಲವೂ, ವಿಶಾಲವಾದ ಹಣೆಯೂ, ದುಂಡಾದ
ಮುಖವೂ, ಅವನ ನೋಟಕ್ಕೆ ಅದೊಂದು ಗಾಂಭೀರ್ಯವನ್ನೊದಗಿಸಿದ್ದುವು.
ಸ್ವಲ್ಪಮಟ್ಟಿಗೆ ಕೆಳಗೆ ಬಾಗಿದ್ದ ಅವನ ಕಣ್ಣುಗಳೂ, ಸ್ವಲ್ಪ ಮುಂದೆ ಚಾಚಿದ್ದು
ಒಂದರ ಮೇಲೊಂದು ಕುಳಿತಿದ್ದ ತುಟಿಗಳೂ, ಶಾಂತತೆಯನ್ನೂ ಒಮ್ಮೊಮ್ಮೆ
ಉದಾಸೀನತೆಯನ್ನೂ ವ್ಯಕ್ತಮಾಡುತ್ತಿದ್ದುವು. ಆದರೆ ಅವನ ಚೂಪಾದ
ಮೂಗು, ಎಡೆಬಿಡದೆ ಚಲಿಸುತ್ತಿದ್ದ ಕಣ್ಣುಗಳು ಅವನ ಮುಖದ ಮಂಕು
ತನವನ್ನು ಪೂರ್ತಿಯಾಗಿ ದೂರಮಾಡಿ, ಅವನ ತೀಕ್ಷ್ಣವಾದ ಬುದ್ಧಿಯನ್ನೂ
ಮನೋಹರವಾದ ಲವಲವಿಕೆಯನ್ನೂ ಹೃದಯಪೂರ್ವಕವಾದ ಉತ್ಸಾಹ
ವನ್ನೂ ಪ್ರಕಾಶಿಸುವಂತೆ ಮಾಡಿದ್ದುವು.

ಎಷ್ಟು ಬಗೆಯಲ್ಲಿ ವರ್ಣಿಸಿದರೂ ಸಾಕಾಗದ ಸೌಂದರ್ಯದಿಂದ
ಕೂಡಿದ ಲಕ್ಷ್ಮಿಯೂ, ಅವಳಿಗಾಗಿಯೇ ಸೃಷ್ಟಿಯಾದವನಂತೆ ಕಂಡ,

ಚಿತ್ರದಲ್ಲಿಯೂ ಬಣ್ಣಿಸಲಾಗದಂತಹ ಚೆಲುವನ್ನು ಪಡೆದಿದ್ದ ಶ್ರೀನಿವಾಸನೂ ವಿವಾಹ ಮಂಟಪದಲ್ಲಿ ಕುಳಿತಿದ್ದಾಗ ಈ ದೃಶ್ಯವನ್ನು ಕಣ್ಣುತುಂಬ ನೋಡಿ ಆನಂದಿಸದವರು ಇಲ್ಲ. ಇವರ ಉರುಟಣೆಯೂ, ತೆಂಗಿನಕಾಯಿ ಯನ್ನು ಉರುಳಿಸಿ, ಹೂ ಚೆಂಡಿನಿಂದ ಆಡಿದುದೂ ಬಹು ಚೆನ್ನಾಗಿತ್ತು. ಮಹಿಳೆಯರೆಲ್ಲರೂ ಶ್ರೀನಿವಾಸನೊಡನೆ ಮಾತನಾಡುವುದೇ ಒಂದು ದೊಡ್ಡ ಆನಂದವೆಂದು ಭಾವಿಸಿದರು! ಅವನ ಸರಿಸುಮಾರಿನ ಸಮ ವಯಸ್ಕರಾದ ಹೆಣ್ಣುಮಕ್ಕಳು ನಿಷ್ಕಳಂಕವಾದ ರೀತಿಯಲ್ಲಿ ಅವನೊಡನೆ ಪರಿಹಾಸ್ಯವನ್ನು ಮಾಡಿ ವಿನೋದಗೊಂಡರು. ವಿಶಾಲಾಕ್ಷಿ ಎಂಬ ಹುಡುಗಿ ಅವನನ್ನು ನೋಡಿ, “ ಅಳಿಯನಿಗೆ ಏನೇ ಆಗಲಿ ಇಷ್ಟು ಗರ್ವ ಇರಬಾರದು. ” ಎಂದು ಹೇಳಿ ಬಿದ್ದು ಬಿದ್ದು ನಕ್ಕಳು. ಸುಬ್ಬುಲಕ್ಷ್ಮಿ ಎಂಬ ಹುಡುಗಿ “ ಹಾಗೆ ಹೇಳಬೇಡವೆ, ನನ್ನ ಸೋದರ ಮಾವನ ಮಗಳ ಗಂಡ ತುಂಬ ಸಾಧು, ಹೊಡೆದರೂ ಅಳುವುದಕ್ಕೆ ಬಾರದು ” ಎಂದಳು. ಭಾಗೀರಥಿ ಅವನ ಬೆನ್ನಿನ ಮೇಲೆ ಹಪ್ಪಳವನ್ನು ತಟ್ಟಿದಳು. ಕಾವೇರಿ ಅವನ ಜಡೆಯ ಅಲಂಕಾರ ವನ್ನು ಹಿಡಿದೆಳೆದಳು. “ಕಾಮಾಕ್ಷಿ, ನನ್ನ ಅತ್ತೆ ಮಗಳ ಗಂಡನಿಗೆ ಹೆಣ್ಣು ವೇಷ ಹಾಕಿದರೆ ಚೆನ್ನಾಗಿ ಕಾಣಿಸುವುದು.” ಎಂದಳು. ಈ ರೀತಿಯಲ್ಲಿ ಎಲ್ಲ ಹುಡುಗಿಯರು ಏನಾದರೂ ಸಂಬಂಧವನ್ನು ಹೇಳಿಕೊಳ್ಳುತ್ತ ಅವನನ್ನು ಪರಿಹಾಸ್ಯಕ್ಕೆ ಗುರಿಮಾಡಿದರು. ಮೊದಲು ಸುಬ್ಬರಾಯನು ಜೊತೆಯಲ್ಲಿ ದ್ದಾಗ ಸ್ವಲ್ಪ ಸಂಕೋಚಗೊಂಡರು. ಆ ಮೇಲೆ ಅವನಿದ್ದರೂ ಲಕ್ಷ್ಯ ಮಾಡಲಿಲ್ಲ. ಮದುವೆಯ ಮೂರನೆಯ ದಿನ ಶ್ರೀನಿವಾಸನು ಔಪಾಸನ ವನ್ನು ಮಾಡುತ್ತಿದ್ದಾಗ ಗೋದಾವರಿ ಎಂಬ ಹುಡುಗಿ ಸದ್ದುಮಾಡದೆ ಹಿಂದೆ ಬಂದು ಒಂದು ಚೂರು ದಾರದಿಂದ ಅವನ ತಲೆಕೂದಲಿಗೂ ಲಕ್ಷ್ಮಿಯ ಜಡೆಗೂ ಗಂಟು ಹಾಕಿದಳು. ಔಪಾಸನವಾದ ಕೂಡಲೆ ನಡೆ ದಿದ್ದ ಈ ಚೇಷ್ಟೆಯನ್ನು ಅರಿತ ಶ್ರೀನಿವಾಸನು ಗಂಟನ್ನು ಬಿಡಿಸಲು ಪ್ರಯತ್ನಿಸಿದನು. ಅಷ್ಟರಲ್ಲಿ ನಾಲ್ಕೈದು ಹುಡುಗಿಯರು ಸೇರಿ, ಲಕ್ಷ್ಮಿಯ ಕೈಯನ್ನು ಹಿಡಿದು ಮನೆಯ ಒಳಭಾಗಕ್ಕೆ ಎಳೆದೊಯ್ಯಲು ಶ್ರೀನಿವಾಸನು ಗಂಟು ಬಿಚ್ಚಲಾಗದವನಾಗಿ ಅವನೂ ಒಳಗೆ ಒಯ್ಯಲ್ಪಟ್ಟನು. ಅವನು

ಅದನ್ನು ತಡೆಯಲು ಏನು ಪ್ರಯತ್ನ ಮಾಡಿದರೂ ಆಗಲಿಲ್ಲ. ಆ ಚೇಷ್ಟೆಯ ಹುಡುಗಿಯರು ಅವಳನ್ನು ಎಳೆದಾಡುತ್ತಿದ್ದ ಹಾಗೆಯೇ ಅವನು ಲಕ್ಷ್ಮಿಯ ಮೇಲೆ ಮೆತ್ತಗೆ ಹಲವು ಬಾರಿ ವಾಲುವಂತೆ ಆಯಿತು. ಇವರಿಬ್ಬರು ಒಬ್ಬರನ್ನೊಬ್ಬರು ಸೋಕಿದಾಗ ಎಲ್ಲರೂ ಗೊಳ್ಳೆಂದು ನಕ್ಕರು. ಇಷ್ಟರಲ್ಲಿ ದೊಡ್ಡ ಗುಂಪೇ ಸೇರಿತು. ಬಂದ ಹುಡುಗಿಯರಾದರೂ ಆ ಗಂಟನ್ನು ಬಿಚ್ಚಿದರೇ ? ಅದೂ ಮಾಡಲಿಲ್ಲ. ಎಲ್ಲರೂ— " ಹಾಗೆಯೇ ಎಳೆದುಕೊಂಡು ಹೋಗಿ— ಒಳಗೆಳೆದು ಅವರನ್ನು ಬಿಟ್ಟು ಬಾಗಿಲನ್ನು ಹಾಕೋಣ " "ಸಿಕ್ಕಿ ಬಿದ್ದರಪ್ಪಾ ವಿಠ್ಠಲ ಭಟ್ಟರು— ಸಿಕ್ಕಿ ಬಿದ್ದರಯ್ಯಾ " ಎಂಬ ಉದ್ಗಾರವನ್ನೆಬ್ಬಿಸಿದರು. ಕೆಲವರು ಶ್ರೀನಿವಾಸನನ್ನು ಸುತ್ತುವರಿದು, ಪ್ರಾಸಬದ್ಧವಾದ ಕುಚೋದ್ಯವಾದ ಹಾಡುಗಳನ್ನು ಹಾಡುತ್ತ ಕುಣಿದಾಡಿದರು. ಒಬ್ಬಳು ಹಿಂದುಗಡೆಯಿಂದ ಬಂದು ಅವನ ಮುಖವನ್ನು ದೃಷ್ಟಿಸಿ ನೋಡಿ " ಅಳಿಯಂದಿರೇ, ! ಅಳಬೇಡಿ— ಅಳಬಾರದು. ಬೇಡ—" ಎಂದಳು. ಮತ್ತೊಬ್ಬಳು, " ಬಿಡ್ರೇ ! ಪಾಪ— ಅಳುತ್ತಾರೆ— ಮಗು— ಪಾಪ " ಮಗದೊಬ್ಬಳು, " ನಗುವವರಿಗೆ ನಾಚಿಕೆಯಿಲ್ಲ. ಹೆಂಗಸರನ್ನು ದಾಟಿ ಹೋಗಲು ಸಾಧ್ಯವಾಗಲಿಲ್ಲ! ನಗು ಬೇರೆ ಇದಕ್ಕೆ" ಎಂದಳು. ಮತ್ತೊಬ್ಬಳು, "ಅಳಿಯನ ಧೋತ್ರವನ್ನು ನೋಡು— ಅಜ್ಜಿ ಉಟ್ಟುಕೊಂಡಂತೆ ಇದೆ—" ಎಂದಳು. ಇವರು ಹೀಗೆ ಪರಿಹಾಸ್ಯ ಮಾಡಿದುದು ಶ್ರೀನಿವಾಸನಿಗೆ ಸಹಿಸಲಿಕ್ಕಾಗಲಿಲ್ಲ. ಅದರೂ ಅಷ್ಟು ಚೆಲುವಾದ ಪ್ರಾಯದ ಯುವತಿಯರು ಇಷ್ಟು ಉಲ್ಲಾಸದಿಂದ ಅವನೊಂದಿಗೆ ವಿನೋದಗೊಳ್ಳಲು ಅವನಿಗೆ ಕೋಪ ಬಂದೀತೆ ? ಕೋಪಿಸಿಕೊಳ್ಳುವವನಂತೆ ಹಲವು ಬಾರಿ ನಟಿಸಿದನು. ಅದಕ್ಕೆ ಅವರು " ಕೋಪಿಸಿಕೊಳ್ಳಲು ಗೊತ್ತಿದ್ದರೆ ಕೋಪಿಸಿಕೊಳ್ಳಬೇಕು. ಇಲ್ಲವಾದರೆ ಸುಮ್ಮನಿರಬೇಕು—" ಎಂದು ಹೇಳಿ ನಗಲು, ಅವನೂ ನಗುತ್ತ ಅವರ ಜೊತೆಯಲ್ಲಿ ಬೆರೆತು ವಿನೋದವಾಗಿದ್ದನು.

ನಾಲ್ಕು ದಿಕ್ಕಿನಲ್ಲಿಯೂ ಆ ಹುಡುಗಿಯರನ್ನು ಅಟ್ಟಿಸುತ್ತ ಓಡಾಡಿದನು. ಅವರನ್ನು ಪ್ರತಿಯಾಗಿ ತಾನೂ ಗೇಲಿಗೆಬ್ಬಿಸಿದನು. ಒಬ್ಬಳನ್ನು ನೋಡಿ, " ತಾಳು, ತಾಳು– ನಿನ್ನ ಗಂಡನೊಂದಿಗೆ ಹೇಳುತ್ತೇನೆ "

ಎಂದನು. ಇನ್ನೊಬ್ಬಳನ್ನು ನೋಡಿ, "ಅಗೋ ನೋಡು, ನಿನ್ನ ಯಜಮಾನರು ಬಂದುಬಿಟ್ಟರು" ಎಂದನು. ಅವನು ತನ್ನ ಬೆಳ್ಳಿಯ ಪಂಚಪಾತ್ರೆಯನ್ನು ಕೈಯಲ್ಲಿ ಹಿಡಿದು ಬೀಸುತ್ತ, ಎದೆಯ ಮೇಲೆ ಗಟ್ಟಿಯಾಗಿ ತನ್ನ ಧೋತ್ರವನ್ನು ಬಿಗಿದು ಅಲಂಕಾರವಾಗಿ ಪಂಚೆಕಚ್ಚೆಯನ್ನುಟ್ಟು ದುಮ್ಮಿಕ್ಕುತ್ತ ಓಡಿದುದೂ, ಆ ಅದ್ಭುತ ಯೌವನತಾರುಣ್ಯದಲ್ಲಿ ಹುಡುಗಿಯರು ಪಾದರಸದಂತೆ ಕುಣಿದಾಡುತ್ತ ಅವರ ಕಾಲುಗೆಜ್ಜೆಗಳು ಶಬ್ದ ಮಾಡುತ್ತ, ಅವನು ಸುತ್ತಲೂ ಓಡುತ್ತ ಆಟವಾಡಿದುದೂ, ಒಂದು ಮಿಂಚಿನ ಬಳ್ಳಿ ಥಳಥಳವೆಂದು ಪ್ರಕಾಶಿಸುತ್ತಿದ್ದಂತೆ ಬಹು ಸೊಗಸಾದ ನೇತ್ರೋತ್ಸವವಾಗಿ ಪರಿಣಮಿಸಿತು ಬೃಂದಾವನದಲ್ಲಿ ಬಾಲಕೃಷ್ಣನು ಗೋಪಿಕಾಸ್ತ್ರೀಯರೊಡನೆ ಲೀಲೆಯನ್ನಾಚರಿಸಿದಂತಿತ್ತು ಶ್ರೀನಿವಾಸನ ರೀತಿ. ಕೊನೆಗೆ ಶ್ರೀನಿವಾಸನು, "ಆ ಒಳಗೆ ತಾನೇ ಹೋಗಬೇಕೆನ್ನುತ್ತೀರಿ? ನಾನೇ ಹೋಗುತ್ತೇನೆ. ನೀವು ದಾರಿ ಬಿಡಿ." ಎಂದು ಹೇಳಿ ಲಕ್ಷ್ಮಿಯನ್ನು ನೋಡಿ ಗಟ್ಟಿಯಾಗಿ, "ಆ ಕೋಣೆಗೆ ಹೋಗೋಣ ಬಾ" ಎಂದ ಕೂಡಲೆ, ಎಲ್ಲರೂ "ಹೆಂಡತಿಯೊಂದಿಗೆ ಮಾತಾಡಿಬಿಟ್ಟನು. ನಾಚಿಕೆಯಿಲ್ಲದೇ ಹೆಂಡತಿ ಜೊತೆಗೆ ಮಾತೇ ಆಡಿಬಿಟ್ಟನು." ಎಂದು ಬಿದ್ದು ಬಿದ್ದು ನಕ್ಕರು. ಇಷ್ಟರಲ್ಲಿ ಅಕಸ್ಮಾತ್ತಾಗಿ ರಾಮಣ್ಣ ಪುರೋಹಿತರು ಬಂದರು. ಬಂದಕೂಡಲೆ ಶ್ರೀನಿವಾಸನು ಅವರನ್ನು ನೋಡಿ ಗಂಟನ್ನು ಬಿಚ್ಚುವಂತೆ ಹೇಳಿದಾಗ ಆ ಹುಡುಗಿಯರು, "ಅವರಿಗೆ ಗಂಟು ಬಿಚ್ಚಲು ತಿಳಿಯದು. (ಗಂಟುಬಿಚ್ಚುವುದೆಂದರೆ ಕದಿಯುವುದು ಎಂಬ ಅರ್ಥವೂ ಆಗುತ್ತದೆ.) ಅಜ್ಜಾ! ಬಿಚ್ಚುತ್ತೀರಾ? ನೋಡಿಕೊಳ್ಳಿ... ಬೊಜ್ಜುಭದ್ರ—" ಎಂದು ಹೇಳಿ ಅವರನ್ನು ತಡೆದರು ಬಹಳ ದಿನ ಕಷ್ಟಪಟ್ಟು ಸಂಪಾದಿಸಿದ್ದ ಬೊಜ್ಜನ್ನು ಕಳೆದುಕೊಳ್ಳಲು ಅವರಿಗಿಷ್ಟವಿರಲಿಲ್ಲ. ಸ್ವಲ್ಪ ಹೊತ್ತಿನಲ್ಲಿ ಮುತ್ತುಸ್ವಾಮಿ ಅಯ್ಯರವರೇ ಬಂದರು. ಅವರು ಬಂದ ಕೂಡಲೆ ನಡೆಯುತ್ತಿರುವ ಸಂಗತಿಯನ್ನು ಗ್ರಹಿಸಿಕೊಂಡು, ಶ್ರೀನಿವಾಸನ ಗುಣವನ್ನು ಕಂಡು ಸಂತೋಷಿಸಿ, ಅವನ ಬಳಿ ಬಂದು ಗಂಟನ್ನು ಬಿಚ್ಚಲು, ಆ ಹುಡುಗಿಯರೆಲ್ಲರೂ, "ಬಿಚ್ಚ ಬೇಡಿ,ಮಾವಾ, ಬಿಚ್ಚಬೇಡಿ—ಅಪ್ಪಾ" ಎಂದು ಹೇಳಲು ಅವರು ನಗುತ್ತ, "ದುಷ್ಟ ಹುಡು

ಗಿಯರವ್ಮಾ! ಹುಗ್ಗಿ ಊಟ ಮಾಡಬೇಡವೆ? ಹೊತ್ತಾಗಲಿ ಲ್ಲವೆ? ಬ
ವಾಗಿ ಹಾಕಿದ್ದಾಳೆ ಗಂಟನ್ನು ಯಾರೇ ಹಾಕಿದ್ದು?" ಎಂದು ಕೇಳುತ್ತ
ಅದನ್ನು ಬಿಚ್ಚಿ ಹಾಕಿದರು. ಕೂಡಲೆ ಶ್ರೀನಿವಾಸನು ತನ್ನ ಬಿಡಾರಕ್ಕೆ
ಹೊರಟನು. ಆ ಹುಡುಗಿಯರು, "ಬಿಚ್ಚಿದ ಕೂಡಲೆ ಕತ್ತೆ ಕಂಬಿ ಕಿತ್ತ
ತಂತೆ" ಎಂದು ಕೂಗಿಕೊಳ್ಳುತ್ತ ಅವನನ್ನು ಬಾಗಿಲವರೆಗೂ ಅಟ್ಟಿಕೊಂಡು
ಹೋಗಿ ನಗುತ್ತ ಹಿಂತಿರುಗಿದರು.

ಅಂದು ಮಧ್ಯಾಹ್ನ ಭೋಜನಾನಂತರ ಶ್ರೀನಿವಾಸನು ಸುಬ್ಬರಾಯನ
ಜೊತೆಯಲ್ಲಿ ಮಾತನಾಡುತ್ತಿದ್ದಾಗ ಇದ್ದಕ್ಕಿದ್ದ ಹಾಗೆ ಒಂದು ಹುಡುಗಿ
"ಇಗೊ — ನಿನ್ನ ಹೆಂಡತಿ ಕಾಗದವನ್ನು ಕೊಟ್ಟಳು." ಎಂದು
ಹೇಳಿ, ಒಂದು ಪತ್ರವನ್ನು ಅವನ ಮಡಿಲಿನಲ್ಲಿ ಹಾಕಿ ಓಡಿಹೋದಳು.
ಅದನ್ನು ಅವನು ಬಹಳ ಕುತೂಹಲದಿಂದ ತೆಗೆದು ನೋಡಿದನು. ಅದು ಒರಟು
ಕಾಗದದಲ್ಲಿ ಬರೆಯಲಾಗಿತ್ತು. ಸಾಲುಗಳು ಬಹಳ ಸೊಟ್ಟಾಗಿದ್ದುದು ಮಾತ್ರ
ವಲ್ಲದೆ, ಅಕ್ಷರಗಳು ವಿಕಾರವಾಗಿಯೂ ಅಶುದ್ಧವಾಗಿಯೂ ಇದ್ದುವು.
ಅದರಲ್ಲಿ ಬರೆವಣಿಗೆ ಈರೀತಿ ಇತ್ತು—

"ನೀನು ಈ ದಿನ ಬೆಳಗ್ಗೆ ಹಾಗೆಯೇ ನನ್ನಮೇಲೆ ಬೀಳೋದು!
ಆಗ ಬಿದ್ದದ್ದು ಇನ್ನೂ ನನಗೆ ನೋವಾಗಿದೆ. ಅಳು ಕೂಡ ಬರುತ್ತದೆ. ಹೆಂಡತಿ
ಮಕ್ಕಳನ್ನು ಹಾಗೆ ತಿವಿದುಕೊಂಡು ಓಡಿ, ನನ್ನನ್ನು ತಿವಿಯೆಂದು ಹೇಳಿದೆ
ಯೇನು. ಇನ್ನುಮುಂದೆ ಹಾಗೆ ಮಾಡಬಾರದು. ಎಲ್ಲಾ ಹುಡುಗಿಯರೆದು
ರಿಗೆ ನನ್ನೊಡನೆ ಮಾತಾಡಬಹುದೆ? ಛೀ— ಇದೇನು ನಾಚಿಕೆಗೇಡು—
ಕಲ್ಯಾಣಿ (ಲಕ್ಷ್ಮಿ)." ಈ ಪತ್ರವನ್ನು ಶ್ರೀನಿವಾಸನು ನೋಡಿದಕೂಡಲೆ,
ಅವನಿಗೆ ಏನೂ ಹೇಳಲು ತೋರಲಿಲ್ಲ. ಅವನ ಕಣ್ಣುಗಳು ಕೋಪದಿಂದ
ಕೆಂಪಾದುವು. ತುಟಿಗಳು ಬಡಬಡವೆಂದು ಬಡಿದುಕೊಂಡುವು. ಕೈಗಳು
ಕಾತರಗೊಂಡುವು. ಹೀಗೆ ಸ್ವಲ್ಪಹೊತ್ತು ಮೌನವಾಗಿದ್ದು ಅನಂತರ ನಿಟ್ಟು
ಸಿರು ಬಿಟ್ಟು ಸುಬ್ಬರಾಯನನ್ನು ನೋಡಿ, "ಇದನ್ನು ನೋಡಿದೆಯಾ?"
ಎಂದು ಹೇಳಿ ಅವನ ಕೈಯಲ್ಲಿ ಪತ್ರವನ್ನು ಬಿಸುಟನು. ಶ್ರೀನಿವಾಸನು
ಓದುತ್ತಿದ್ದಾಗಲೆ ಜೊತೆಯಲ್ಲಿ ಓದಿದ ಸುಬ್ಬರಾಯನು ಮತ್ತೆ ಅದನ್ನು

ದಿ, "ಏನಾಶ್ಚರ್ಯ? ಎಷ್ಟು ಧೈರ್ಯ?" ಎಂದನು. ಶ್ರೀನಿವಾಸನು, "ಧೈರ್ಯ ಮಾತ್ರವೇ? ನೀವು, ನಾವು ಮುಂತಾದ ಮರ್ಯಾದೆಯ ಪ್ರಯೋಗಗಳೂ ಲ್ಲ. ವಯಸ್ಸು ಸಾಲದು. ಅವಳು ಏನು ಮಾಡಿಯಾಳು? ಬಲವಾಗಿ ಮೇಲೆ ಬಿದ್ದೆ— ಅವಳಾದ ಕಾರಣ ತಾಳಿಕೊಂಡಳು. (ಪತ್ರವನ್ನು ತೆಗೆದು ಕೊಂಡು) ಅಳು ಬರುತ್ತದಂತೆ—ಅಳು. ನಿನ್ನನ್ನು ಮದುವೆ ಮಾಡಿಕೊಂಡು ದ್ಕಾಗಿ ನಿನಗಿಂತಲೂ ನನಗೆ ಹೆಚ್ಚಾಗಿ ಅಳುಬರುತ್ತದೆ." ಎಂದನು.

ಸುಬ್ಬರಾಯನ್:- "ಅವಳೇ ಬರೆದಿದ್ದಾಳೆಂದು ಭಾವಿಸುವೆಯಾ?"

ಶ್ರೀನಿವಾಸನ್:- "ಅವಳು ಬರೆಯದೆ ಬೇರೆ ಯಾರು ಬರೆದಾರು? ಎಷ್ಟು ಧೈರ್ಯ? ನಾನು ಅವಳ ಕೈಯನ್ನು ಹಿಡಿಯುವುದಕ್ಕೆ ಮೊದಲೇ ಅವಳು ನನ್ನ ಕೈಯನ್ನು ಹಿಡಿಯುತ್ತಾಳೆ! ಎಷ್ಟು ಸಾಹಸವೆನ್ನುತ್ತಿ. ಯಾರು ಯಾರು ಎಷ್ಟು ಕೊಟ್ಟು ಇಟ್ಟಿರುವರೊ ಅಷ್ಟೇ ಸಿಕ್ಕೀತು. ಆಯಾಸ ಪಟ್ಟು ಪ್ರಯೋಜನವೇನು?"

ಸುಬ್ಬರಾಯನ್: "ಛೀ! ಅವಳು ಬರೆದಿರಲಾರಳೋ. ಕಂಬರಾಮಾ ಯಣಾದಿಯಾಗಿ ಓದಿದವಳ ಅಕ್ಷರ ಹೀಗಿರುವುದೆ? ಹುಡುಗಿಯರು ಯಾರೊ ಈ ಕುಚೋದ್ಯವನ್ನು ಮಾಡಿದ್ದಾರೆ. ನಾನು ಹೇಳುತ್ತೇನೆ ನೋಡು."

ಶ್ರೀನಿವಾಸನ್:- "ಒಳ್ಳೆಯದು, ಇರಲಿ. ನಾಚಿಕೆಗೇಡೆ? ಹಾಗೆಯೆ? ನನ್ನನ್ನು ಕಂಡರೆ ಲಕ್ಷ್ಯವಿಲ್ಲ."

ಸುಬ್ಬರಾಯನ್:- "ಏನು, ನಿಶ್ಚಯವಾಗಿ ಅವಳು ಇದನ್ನು ಬರೆ ಯಲ್ಲವೆಂದು ನಾನೇ ಹೇಳುತ್ತೇನಲ್ಲ. ಅವಳ ಮುಖವನ್ನು ನೋಡಿದರೇನೇ ಗೊತ್ತಾಗುವುದಿಲ್ಲವೆ? ಹುಡುಗಿಯರು ಯಾರೊ ಬರೆದಿದ್ದಾರೆ. ಆಮೇಲೆ ತಾನಾಗಿಯೇ ಬಯಲಾಗುತ್ತದೆ. ನೀನೇ ಅವಳನ್ನು ಕೇಳಬಾರದೇ?"— ಹೀಗೆನ್ನಲು ಶ್ರೀನಿವಾಸನು, "ಮತ್ತೂ ಅವಳ ಜೊತೆಯಲ್ಲಿ ಮಾತಾಡಲೂ ಬೇಕೆ?" ಎಂದು ಕಣ್ಣೀರು ಬಿಡಲು ಆರಂಭಿಸಿದ ಕೂಡಲೆ, ಸುಬ್ಬರಾಯನು ಅವನನ್ನು ಸಮಾಧಾನ ಗೊಳಿಸಿದನು. ಮರುದಿನವೂ ಅಂದಿನಂತೆಯೇ ಎಲ್ಲ ಹುಡುಗಿಯರೂ ಅವನೊಡನೆ ಉಲ್ಲಾಸವಾಗಿ ಆಟವಾಡಿದರು. ಅವನು ನಿದ್ರಿ ಸುತ್ತಿದ್ದಾಗ ಅವನ ಹಣೆಯ ಮೇಲೆ ಸುಣ್ಣವನ್ನೂ, ಹರಳೆಣ್ಣೆಯನ್ನೂ

ಬೆರೆಸಿ ನಾಮವನ್ನು ಹಾಕಿ, ಅವನು ಎಲೆಯ ಮುಂದೆ ಊಟ
ಕುಳಿತಾಗ, ಪರಿಷೇಚನ ಮಾಡುವವರೆಗೂ ಬಾಯಿ ಮುಚ್ಚಿಕೊಂಡಿದ್ದ
ಅನಂತರ ಎಲ್ಲರೂ ಗೊಳ್ಳೆಂದು ಪರಿಹಾಸ್ಯ ಮಾಡಿ ಆಟವಾಡಿದರು. ಆದ
ಒಬ್ಬರಾದರೂ ಬಹಳ ಹೊತ್ತು ಪತ್ರದ ಸಂಗತಿಯನ್ನು ಕುರಿತು ಹೇಳಲ
ಇಲ್ಲ. ಅದು ಶ್ರೀನಿವಾಸನಿಗೆ ಒಂದು ವಿಧದಲ್ಲಿ ಕ್ಲೇಶವನ್ನುಂಟು ಮಾಡಿದರ
ಆ ಅಸಂಬದ್ಧವಾದ ಪತ್ರ ಅವರಿಗೆ ತಿಳಿದಿರಲಿಲ್ಲವೆಂಬ ವಿಷಯ ಅವನಿ
ಸ್ವಲ್ಪ ಸಮಾಧಾನವನ್ನು ಕೊಟ್ಟಿತು. ಅನಂತರ ಅವರೇ ಬರೆದರೆಂಬ ವಿಷಯವ
ಬಯಲಿಗೆ ಬಂತು.

ಮರುದಿನ ಶ್ರೀನಿವಾಸನು ಊಟ ಮಾಡುವಾಗ ಕೆಲವರನ್ನು ಮಾತ್ರ
ಉಳಿದು ಪ್ರಾಯಶಃ ಎಲ್ಲ ಹುಡುಗಿಯರೂ ಕೂಡಿರಲು ಅವನೊಂದಿಗೆ ಒಬ್ಬ
ರಾದರೂ ಮಾತನಾಡಲಿಲ್ಲ. ಅದರಲ್ಲಿ ಏನೋ ಒಂದು ವಿಶೇಷವಿದೆಯೆಂದು ಸ್ವಲ್ಪ
ಮನಸ್ಸಿನಲ್ಲಿ ಭಯವಿದ್ದರೂ ವಿನೋದವಾಗಿ ಕೇಳುವವರಂತೆ, "ಏನು ಈ
ಹೊತ್ತು ಎಲ್ಲರೂ ಮೌನವಾಗಿದ್ದೀರಿ?" ಎಂದು ಕೇಳಲು ಒಬ್ಬಳು, "ನಿನ್ನೊಡನೆ
ಏನು ವಿನೋದ? ನಾಳೆ ಬೆಳಗಾಗುತ್ತಲೇ ನೀನೆಲ್ಲೋ, ನಾವೆಲ್ಲೋ?"
ಎಂದಳು. ಮತ್ತೊಬ್ಬಳು: "ನೀನು ತಾನೆ ನಮ್ಮೆಲ್ಲರನ್ನೂ ಬಿಟ್ಟು ಊರಿಗೆ
ಹೋಗುತ್ತೀಯಲ್ಲ. ನಿನ್ನೊಡನೆ ಏನು ಮಾತು ಇಟ್ಟಿದೆ?" ಎಂದಳು.
ಮತ್ತೊಬ್ಬಳು ನಿಟ್ಟುಸಿರು ಬಿಡುತ್ತ, "ಈ ಎರಡು ಮೂರುದಿನ ಎಷ್ಟೊ ಸಂತೋ
ಷವಾಗಿ ಆಟವಾಡಿ, ನಾಳೆ ಹೇಗೆ ಕಾಲ ಕಳೆದೀತೆಂದು ಈಗಲೇ ಚಿಂತೆಯಾಗಿದೆ.
ಇಷ್ಟೇ. ಎಷ್ಟು ದಿನ ತಾನೇ ಸಂತೋಷವಾಗಿರಲಾದೀತು?" ಎಂದಳು. ಹೀಗೆ
ಎಲ್ಲರೂ ತಾನು ಊರಿಗೆ ಹೋಗುವ ವಿಷಯವನ್ನು ಕುರಿತು ನಿಜವಾದ ವ್ಯಸನ
ವನ್ನು ವ್ಯಕ್ತ ಮಾಡಲು, ಶ್ರೀನಿವಾಸನಿಗೆ ಊಟ ಮಾಡುತ್ತಿರುವಾಗಲೇ
ತನಗೆ ತಿಳಿಯದೆ ಕಣ್ಣುಗಳಲ್ಲಿ ನೀರು ತುಂಬಿತು. ಅದನ್ನು ಅಡಗಿಸುವಷ್ಟು
ವ್ಯಸನ ಉಕ್ಕುತ್ತಿತ್ತು. ಅವನು ಕಣ್ಣೀರಿಟ್ಟುದನ್ನು ನೋಡಿ ಅವನೊಡನೆ
ವಿನೋದ ಮಾಡಿದ ಹುಡುಗಿಯರೆಲ್ಲರೂ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದರು.
ಅಲ್ಲಿದ್ದ ಮುದುಕಿಯರು ಕೆಲವರು, "ಚೆನ್ನಾಗಿದೆ ಮದುವೆ ಮನೆ! ಅಳೋದು
ನೋಡೆ, ಎಲೆ ಹುಚ್ಚು ಹುಡುಗಿಯರಿರಾ!" ಎಂದು ಕೋಪಿಸಿಕೊಳ್ಳಲು

ವರು ಒಬ್ಬೊಬ್ಬರಾಗಿ ಮುಖವನ್ನು ಒರೆಸಿಕೊಳ್ಳುತ್ತ ಆ ಸ್ಥಳವನ್ನು ಟ್ಟು ಹೋದರು. ಶ್ರೀನಿವಾಸನೂ ಅನ್ನವನ್ನು ಹಾಗೆಯೇ ಉಳಿಸಿ ಮೂಗು ಣ್ಣುಗಳನ್ನು ಒರೆಸಿಕೊಂಡು ಹೊರಗೆ ಹೊರಟನು.

ಮದುವೆಯ ಸಂಭ್ರಮವನ್ನು ಕುರಿತು ಹೆಚ್ಚು ವಿಸ್ತರಿಸುವುದು ನವಶ್ಯ. ಜನಗಳು ದಿನವೂ ಹೊರಕ್ಕೆ ಹೋಗಿ ಬಂದಾಗಲೆಲ್ಲ, “ಇಂತಹ ಂಭ್ರಮವಾದ ಮದುವೆ ಕಂಡದ್ದೂ ಇಲ್ಲ, ಕೇಳಿದ್ದೂ ಇಲ್ಲವಪ್ಪಾ! ಲ ಎಲಾ! ಭೇಷ್. ಏನು ಏರ್ಪಾಡು! ಏನು ವಿತರಣೆ!!” ಎಂದು ಹೊಗಳು ಲೇ ಇದ್ದರು. ಆ ಪ್ರದೇಶದಲ್ಲೆಲ್ಲ ಮುತ್ತುಸ್ವಾಮಿ ಅಯ್ಯರವರ ಪ್ರಶಂಸೆ ಂಬಿತ್ತು. ನಾಲ್ಕೈದು ಡೆಪ್ಯುಟಿ ಕಲೆಕ್ಟರುಗಳು, ಹತ್ತು ಹದಿನೈದು ಹಸೀಲ್ದಾರರು, ಇಪ್ಪತ್ತು ಮೂವತ್ತು ಸಿರಸ್ತೆದಾರರು, ನಲವತ್ತು ವತ್ತು ಸಬ್ ಮ್ಯಾಜಿಸ್ಟ್ರೇಟರು, ನೂರು ನೂರೈವತ್ತು ಕಚೇರಿ ಉದ್ಯೋ ಸ್ಥರು, ಇನ್ನೂರು ಮುನ್ನೂರು ಗುಮಾಸ್ತರು, ಐನೂರು ಆರುನೂರು ೖದಿಕರು—ಹೀಗೆ ನಾನಾ ಬಗೆಯ ಸಾವಿರಾರು ಜನರು ಸೇರಿದ್ದರು. ಂದೆಯೇ ಹೇಳಿದಂತೆ ಪೆರಿಯವೈದಿ, ರಾಘವಯ್ಯರ್ ಮೊದಲಾದ ಂಗೀತ ವಿದ್ವಾಂಸರು ಮಾತ್ರವಲ್ಲದೆ, ತಾವಾಗಿ ಆ ಪ್ರದೇಶಕ್ಕೆ ಬಂದಿದ್ದ ಂಜಾವೂರು ಸಂಸ್ಥಾನದ ವೈಣಿಕರಾದ ಮಹಾವಿದ್ವಾನ್ ಚಲ್ಲಗಾಲಿ ೃಷ್ಣಯ್ಯ ಅವರೂ, ಪ್ರಖ್ಯಾತಿಗೊಂಡ ರಾಮದಾಸ್ ವಿಕಟಕವಿಯೂ ುದುವೆಗೆ ಆಹ್ವಾನಿತರಾಗಿದ್ದರು. ಪೆರಿಯವೈದಿಯೂ, ರಾಘವಯ್ಯರೂ ರಸ್ಪರ ಸ್ಪರ್ಧೆಯಿಂದ ಹಾಡಿದರು. ರಾಜಲಕ್ಷ್ಮಿ ನೃತ್ಯವನ್ನು ಮಾಡಿದಳು. ೃಷ್ಣಯ್ಯ ವೀಣೆ ನುಡಿಸಿದರು. ರಾಮದಾಸ್ ‘ವಿಕಟ’ ಮಾಡಿದರು. ಮುತ್ತು ಸ್ವಾಮಿ ಅಯ್ಯರ್ ಮನೆಯ ವಿವಾಹಮಂಟಪ ತುಂಬುರು ನಾರದರು ಾಡಲು, ಊರ್ವಶಿ ತಿಲೋತ್ತಮೆಯರು ನೃತ್ಯ ಮಾಡಲು, ಆನಂದಮಯ ಾಗಿ ಶೋಭಿಸುವ ದೇವೇಂದ್ರಸಭೆಗೆ ಸಮವಾಗಿ ವಿರಾಜಿಸುತ್ತಿತ್ತು. ಅಲ್ಲಿದ್ದ ನಗಳಾದರೂ ಸಶರೀರರಾಗಿಯೇ ದೇವಲೋಕದ ಭೋಗವನ್ನು ಪಡೆದವ ಂತಾದರು. ತಮ್ಮ ಚಿಂತೆಗಳನ್ನೂ ಕಷ್ಟಗಳನ್ನೂ ಮರೆತು “ಆಹಾ! ಹೌದು! ಹೌದು! ಹಾಗೆ ತಾನೇ! ನಿಜ-ನಿಜ!-ಎಲ ಎಲಾ! ಭೇಷ್ ಭೇಷ್!”

ಎಂದು ಹೇಳುತ್ತಲೇ ತಮ್ಮನ್ನು ತಾವೇ ಅರಿಯದೆ, ತಲೆಯನ್ನೂ ಕೈಗಳನ
ಆಡಿಸುವುದೇ ಅಲ್ಲಿ ಸೇರಿದ್ದ ಸರ್ವರಿಗೂ ಕಸಬಾಗಿತ್ತು.

ಶ್ರೀ ರಾಮರು ಕೊಟ್ಟು ತೃಪ್ತಿ ಹೊಂದದ ವೈದಿಕರು ಸಹ ಈ ಮ
ನೆಯಲ್ಲಿ "ನಿಮಗೇನು ದಕ್ಷಿಣೆ, ನಿಮಗೇನು ದಕ್ಷಿಣೆ" ಎಂದು ಒಬ್ಬರನ
ನೋಡಿ ಮತ್ತೊಬ್ಬರು ಹಲ್ಲು ಕಿರಿಯುತ್ತ ರಹಸ್ಯವಾಗಿ ಕೇಳಿ, "ಒಳ್ಳೇ ದಕ್ಷಿ
ಒಳ್ಳೆಯ ಮನಸ್ಸು! ಮಹಾರಾಜನಾಗಿರಬೇಕು." ಎಂದು ಆಶೀರ್ವದಿ
ಸಂತುಷ್ಟಿ ಪಡೆದರೆಂದಮೇಲೆ ಮದುವೆಯ ಏರ್ಪಾಡು ಹೇಗಿತ್ತೆಂಬುದನ
ಬೇರೆ ಹೇಳಬೇಕೆ?

ಗಾಯಕರು ಬ್ರಹ್ಮಾನಂದವಾಗಿ ಹಾಡಲು, ವಿಕಟಕವಿ ಬಹಳ ಉಲ
ಸದಿಂದ ವಿಕಟಮಾಡಲು, ತಿರುವಾರೂರು ದಾಸಿ ಬಹಳ ಮನೋರಂಜ
ವಾಗಿ ನಾಟ್ಯಮಾಡಲು, ತಮ್ಮ ಉದ್ದವಾದ ಕಂಠದಲ್ಲಿ ಆರು ತಿಂಗಳ
ಬೇಕಾಗುವಷ್ಟು ನೀರನ್ನು ಶೇಖರಿಸಿಕೊಳ್ಳುವ ಒಂಟೆಗಳಂತೆ ಬ್ರಾಹ್ಮಣೋತ್ತ
ಮರು ಒಂದು ವರ್ಷಕ್ಕೆ ಆಗುವಷ್ಟು ಭೋಜನವನ್ನು ಘಟವಾದ
ವನ್ನು ಹೋಲುವ ತಮ್ಮ ಬೊಜ್ಜೆಗಳಲ್ಲಿ ಶೇಖರಿಸಿಕೊಂಡರು. ತಮ
ತಮ್ಮಲ್ಲಿಯೇ ಸ್ಪರ್ಧೆಗಿಟ್ಟುಕೊಂಡು ಬಾಯಿಲ್ಲದ ಪ್ರಾಣಿಗಳಾದ ಬಾ
ಹಣ್ಣು, ವಡೆ, ಹೋಳಿಗೆ ಮೊದಲಾದ ಭಕ್ಷ್ಯಗಳನ್ನು ಬಕಾಸುರ
ಭೀಮಸೇನ — ಇವರಂತೆ ಧ್ವಂಸ ಮಾಡಿದರು. ಹನುಮಂತ ಯುದ
ಭೂಮಿಯಲ್ಲಿ ರಾಕ್ಷಸರನ್ನು ಚಲ್ಲಾಪಿಲ್ಲಿ ಮಾಡಿದಂತೆ ಭೋಜನ ಕಾಲ
ದಲ್ಲಿ ಕೈಯಲ್ಲಿ ಸಿಕ್ಕಿದುದೆಲ್ಲವನ್ನು ಹಿಸುಕಿ, ಛಿದ್ರಗೊಳಿಸಿ, ತೇಗಿ ಗರ್ಜ
ಮಾಡಿದರು. ಊಟ ಮಾಡಿದ ಶ್ರಮವನ್ನು ತೀರಿಸಿಕೊಳ್ಳಲು ಮರಳಿನಲ್ಲಿ
ಬಿದ್ದು ಹೊರಳಾಡುವ ಮದಗಜಗಳಂತೆ ಹೊರಳಾಡಿದುದನ್ನೂ, ಮುತ್ತು
ಸ್ವಾಮಿ ಅಯ್ಯರವರು ಇವರ ಹೊಟ್ಟೆಯೆಂಬ ಹೋಮಕುಂಡಗಳನ್ನು ಬೇಸ
ವಿಲ್ಲದೆ ಸಂತೋಷದಿಂದ ಬೆಳೆಸಿದುದನ್ನೂ ಈಗಲೂ ಆ ಪ್ರದೇಶದಲ್ಲೆಲ್ಲ ಎಲ್ಲರ
ಬಾಯಲ್ಲಿಯೂ ಕಥೆಯಂತೆ ಕೇಳಬಹುದಾದೆ. ಈ ವಿಧವಾಗಿ ಎಲ್ಲ ಬಗೆಯ
ಜನರನ್ನೂ ತೃಪ್ತಿಗೊಳಿಸಿದ ಮುತ್ತುಸ್ವಾಮಿ ಅಯ್ಯರ್ ರಾಜಸೂಯ
ಯಾಗವನ್ನು ಮಾಡಿ ಅದರಿಂದ ಲಭ್ಯವಾದ ಸಾಮ್ರಾಟ್ ಪಟ್ಟವನ್ನು

ಪಡೆದ ಯಶೋವಂತನಾದ ಧರ್ಮಪುತ್ರ ಮಹಾರಾಜನಂತೆ ಹೆಸರು ಪಡೆದರು. ಚಂದ್ರನ ಕಿರಣಗಳು ನಾಲ್ಕೂ ಕಡೆಗಳಲ್ಲಿ ಪಸರಿಸಿ, ಬಡವ- ಬಲ್ಲಿದ, ಬಾಲ-ವೃದ್ಧ, ಬ್ರಾಹ್ಮಣ ಶೂದ್ರ, ಸ್ತ್ರೀ - ಪುರುಷ ಮೊದಲಾದ ಎಲ್ಲರ ಮನಸ್ಸನ್ನೂ ಭೇದವಿಲ್ಲದೆ ತಂಪುಗೊಳಿಸುವಂತೆ ಮುತ್ತುಸ್ವಾಮಿ ಅಯ್ಯರವರ ಧರ್ಮವೂ, ಕೀರ್ತಿಯೂ ಎಲ್ಲೆಲ್ಲಿಯೂ ಹರಡಿ ಎಲ್ಲರನ್ನೂ ಸಂತೋಷದಲ್ಲಿ ಮುಳುಗಿಸಿತು.

## ೧೧. ವಶೀಕರಣದ ಔಷಧಿ

ಮುತ್ತುಸ್ವಾಮಿ ಅಯ್ಯರ್ ಮನೆಯಲ್ಲಿ ನಡೆದ ನಿಶ್ಚಿತಾರ್ಥಕ್ಕೆ ಅವರ ತಮ್ಮ ಸುಬ್ರಹ್ಮಣ್ಯ ಅಯ್ಯರ್ ಹೋಗಲಿಲ್ಲವೆಂದು ಹಿಂದೆ ಹೇಳಿರುವೆವಲ್ಲವೆ ? ಅವರು ಅರೆತಲೆ ನೋವಿನಿಂದ ಪಾಡು ಪಡುತ್ತಿದ್ದಾರೆಂದು ಅವರನ್ನು ಕರೆದುಕೊಂಡು ಬರಲು ಹೋದ ಸುಬ್ಬುಳಿ ಎಂಬವನ ಮೂಲಕ ಅರಿತ ಮುತ್ತುಸ್ವಾಮಿ ಅಯ್ಯರ್ ನಿಶ್ಚಿತಾರ್ಥ ಮುಗಿದ ಮರುಕ್ಷಣವೆ ಅವರನ್ನು ನೋಡಿಕೊಂಡು ಬರಲು ಅವರ ಮನೆಗೆ ಹೋದರು. ಅವರು ಬರುವುದನ್ನು ಕಂಡ ಸುಬ್ರಹ್ಮಣ್ಯ ಅಯ್ಯರ್ ಹಿಂದಿಗಿಂತಲೂ ಹತ್ತರಷ್ಟು ಹೆಚ್ಚಾಗಿ ನರಳುತ್ತ ಹಾಸಿಗೆಯನ್ನು ಹಿಡಿದುಕೊಂಡು ಅತ್ತಕಡೆ ಇತ್ತಕಡೆ ತಲೆಯನ್ನು ಕೆದರಿಕೊಂಡು ಹೊರಳಾಡುತ್ತಿದ್ದರು. ಅವಳ ಪ್ರಿಯ ಪತ್ನಿಯಾದ ಪೊನ್ನಮ್ಮಾಳೋ ಅವರ ತಲೆಯನ್ನು ಗಟ್ಟಿಯಾಗಿ ಹಿಡಿದು ಕೊಂಡು: “ಅಯ್ಯೋ ದೈವವೆ! ಏನು ಮಾಡಲಿ!” ಎಂದು ಬಿಕ್ಕಿಬಿಕ್ಕಿ ಅಳುತ್ತ ಕಣ್ಣೀರನ್ನು ಧಾರೆಧಾರೆಯಾಗಿ ಸುರಿಸಿಕೊಂಡು ಭಾವನವರನ್ನು ನೋಡಿ ನಾಚಿಕೊಂಡವಳಂತೆ ಒಳಗೆ ಹೋದಳು. ಇವರ ಗೋಳನ್ನು ಕಂಡ ಮುತ್ತುಸ್ವಾಮಿ ಅಯ್ಯರಿಗೆ ತನಗೆ ತಿಳಿಯದೆಯೇ ಕಣ್ಣುಗಳಲ್ಲಿ ನೀರು ತುಂಬಿತು. ಅದನ್ನು ಅವರು ಮರೆಯಾಗಿ ಒರೆಸಿಕೊಂಡು,“ಸುಬ್ರಹ್ಮಣ್ಯಾ ! ಸುಬ್ರಹ್ಮಣ್ಯಾ ! ಏನು ಆಗುತ್ತದೆಯಪ್ಪಾ? ತಲೆ ನೋವಿದ್ದರೆ ಹಿಂದೆಯೇ ನನಗೆ ಹೇಳಬಾರದಾಗಿತ್ತೆ?” ಎಂದು ಹೇಳಿ ಅವನ ಕೈಯನ್ನು ಹಿಡಿದು ನೋಡಿದರು. ಕೈನಾಡಿ ಚೆನ್ನಾ

ಗಿಯೇ ಇತ್ತು. ಆದರಲ್ಲಿ ಯಾವ ವ್ಯತ್ಯಾಸವೂ ತೋರಲಿಲ್ಲ. ಅನಂತ
ತಲೆಯನ್ನು ಹಿಡಿದು ನೋಡಿದರು. ಅಲ್ಲಿಯೂ ಯಾವ ವಿಧವಾದ ಬದಲಾ
ವಣೆಯೂ ಇಲ್ಲ. ಇಷ್ಟು ವಿಪರೀತವಾದ ತಲೆನೋವು ಕೂಡ ಕೈನಾಡಿಯಲ್ಲಿ
ಕಾಣಿಸದೆ ಇದ್ದುದನ್ನು ಕಂಡು ಅವರು ಆಶ್ಚರ್ಯದಿಂದ ಸ್ವಲ್ಪ ತಲೆಯನ್ನು
ಎತ್ತಿ ನೋಡಿದರು. ತಾನು ಮಾಡಿದ ತಂತ್ರವನ್ನು ತನ್ನ ಭಾವನವರೂ
ಧಾರಳವಾಗಿ ನಂಬಿದುದನ್ನು ಕಂಡು ನಗು ಬರಲು ಅದನ್ನು ಅಡಗಿಸುವು
ದಕ್ಕೆ ತನ್ನಿಂದ ಸಾಧ್ಯವಾದಷ್ಟು ಶ್ರಮಿಸುತ್ತಿದ್ದ ಪೊನ್ನಮ್ಮಾಳ ಮುಖವು
ತಲೆ ಎತ್ತಿದ ಕೂಡಲೆ ಅವರ ಕಣ್ಣುಗಳಿಗೆ ಅಕಸ್ಮಾತ್ತಾಗಿ ಕಾಣಿಸಿತು. ಅದನ್ನು
ಕಂಡ ಕೂಡಲೆ ತಲೆನೋವು ಸುಳ್ಳೋ ನಿಜವೋ ಎಂದು ಸಂದೇಹಗೊಳ್ಳು
ತ್ತಿದ್ದ ಅವರಿಗೆ ತಾಳಲಾರದಷ್ಟು ಕೋಪವೂ, ದುಃಖವೂ ಉಕ್ಕಿ ಬಂತು. ಆ
ಕೆಟ್ಟ ಗಯ್ಯಾಳಿ ಮಾಡಿದ ಮೋಸವನ್ನೂ ಅವಳ ಕೈಯಲ್ಲಿ ಅನ್ಯಾಯವಾಗಿ
ಸಿಕ್ಕಿಕೊಂಡು ಬುಗುರಿಯಂತೆ ಒದ್ದಾಡುತ್ತಿರುವ ತನ್ನ ತಮ್ಮನ ಸ್ಥಿತಿ
ಯನ್ನೂ ತಮ್ಮ ಸೂಕ್ಷ್ಮ ಬುದ್ಧಿಯಿಂದ ಕಂಡು ಕೊಂಡರು. ಅವರಿಗೆ
ಅನಂತರ ಅರ್ಧ ನಿಮಿಷ ಕೂಡ ಅಲ್ಲಿ ಇರಲು ಸೇರಲಿಲ್ಲ. ತತ್ಕ್ಷಣವೇ
ಅವರು, "ನಾನು ಹೋಗಿ ವೈದ್ಯರನ್ನು ಕಳುಹಿಸುತ್ತೇನೆ" ಎಂದು ಹೇಳಿ
ಥಟಕ್ಕನೆ ಎದ್ದು ಹೊರಟು ಬಿಟ್ಟರು. ಮರುದಿನ ತನ್ನ ತಮ್ಮನನ್ನು ಬರಮಾಡಿ
ಕೊಂಡು ದೇಹಸ್ಥಿತಿಯನ್ನು ಕುರಿತು ಸ್ವಲ್ಪ ವಿಚಾರಿಸಿ, ತುಂಬ ವ್ಯಾಕುಲ
ಗೊಂಡವರಂತೆ ಕೆಲಹೊತ್ತು ಮೌನತಾಳಿ, ಆಮೇಲೆ ಅವರನ್ನು ನೋಡಿ,
"ಅಯ್ಯೋ ಹುಚ್ಚಾ, ಹೆಂಗಸರಲ್ಲಿ ಸಾವಿರವಿದ್ದರೂ ಅದೆಲ್ಲವನ್ನೂ ನಾವು
ಮೈಮೇಲೆ ಹಾಕಿಕೊಳ್ಳಲು ಆದೀತೆ?" ಎಂದು ಒಂದು ಬಗೆಯಲ್ಲಿ ಅವನನ್ನು
ಖಂಡಿಸಿ ಮದುವೆಯ ವಿಷಯಗಳನ್ನು ಕುರಿತು ಅವರ ಸಲಹೆಗಳನ್ನು ಕೇಳಿ,
ಅನಂತರ "ಸಾವಿರ, ಸಾವಿರದ ಐನೂರು ರೂಪಾಯಿಗೆ ಜವಳಿಯನ್ನು
ಕೊಂಡುಕೊಳ್ಳಬೇಕು. ಈಗಿನಿಂದ ಪದಾರ್ಥಗಳನ್ನು ಶೇಖರಿಸಲು
ಏರ್ಪಾಡು ಮಾಡಿದರೇನೆ ಮುಹೂರ್ತದ ವೇಳೆಗೆ ಸರಿಯಾಗಿ ಒದಗುವುದು.
ನೀನೇ ಎಲ್ಲವನ್ನೂ ಸಮರ್ಪಕವಾಗಿ ನೋಡಿಕೊಳ್ಳಬೇಕು" ಎಂದರು.
ಅವರೂ ಹಾಗೆಯೇ ಮಾಡುವುದಾಗಿ ಧಾರಳವಾಗಿ ಒಪ್ಪಿಕೊಂಡರು.

ಅವರು ತಮ್ಮ ಅಣ್ಣನ ವಿಷಯದಲ್ಲಿ ತುಂಬ ಭಯ ಭಕ್ತಿ ವಿಶ್ವಾಸಗ ಳುಳ್ಳವರು. ಅವರನ್ನು ತಂದೆಗೆ ಸಮಾನವೆಂದು ಭಾವಿಸುತ್ತಿದ್ದರು. ಅವರೆದುರಿಗೆ ನಿಂತುಕೊಂಡು ಸಹ ಮಾತಾಡಲಾರರು. ಮದುವೆಗೆ ಬಂದಿದ್ದವರೆಲ್ಲರೂ ಅವರ ಸಹೋದರ ಪ್ರೇಮವನ್ನೂ, ಮರ್ಯಾದೆಯನ್ನೂ,ವಿತರಣೆಯನ್ನೂ ತುಂಬ ಪ್ರಶಂಸಿಸುವಂತೆ ಮದುವೆಯ ಕಾರ್ಯವೆಲ್ಲವನ್ನೂ ಅವರೇ ತಾಳ್ಮೆಯಿಂದ ನಿರ್ವಹಿಸಿದರು.

ಇವರು ಎಷ್ಟರಮಟ್ಟಿಗೆ ಮದುವೆಯನ್ನು ಶೋಭಿಸುವಂತೆ ಮಾಡಿದರೆ ಅಷ್ಟೇ ಪ್ರಮಾಣದಲ್ಲಿ ಅವರ ಹೆಂಡತಿಯಾದ ಪೊನ್ನಮ್ಮಾಳ್ ಅದನ್ನು ಕೆಡಿಸಲು ಪ್ರಯತ್ನಿಸಿದಳು. ಮದುವೆಯನ್ನು ನಿಲ್ಲಿಸಲು ಕೂಡ ಅವಳು ಕೆಲವು ಪ್ರಯತ್ನಗಳನ್ನು ಮಾಡಿದಳು. ಒಳ್ಳೆಯ ವೇಳೆ — ಯಾವುದೂ ಫಲಕಾರಿಯಾಗಲಿಲ್ಲ. ಅನಂತರ ಅದನ್ನು ತಡೆಯದಿದ್ದರೆ ಹೋಗಲಿ, ಕೆಡಿಸಿಯಾದರೂ ಕೆಡಿಸಬೇಕೆಂದು ತೀರ್ಮಾನಿಸಿ, ಅಡುಗೆಯನ್ನು ಆಕ್ಷೇಪಿಸಿದಳು; ಕೊಡುವ ಉಡುಗೊರೆ, ಪಾತ್ರೆ ಇವುಗಳ ವಿಚಾರದಲ್ಲಿ ಟೀಕೆ ಮಾಡಿದಳು; ಹುಡುಗಿಯ ಮೇಲೆ ದೂರೆಬ್ಬಿಸಿದಳು—ಕೊನೆಗೆ ಕಮಲಾಂಬಾಳನ್ನು ಕುರಿತು ಅವರ ಬೀಗರೊಂದಿಗೇ ಚಾಡಿಯನ್ನು ಹೇಳುವ ಸಾಹಸ ಮಾಡಿದಳು. ನಡೆದ ಸಂಗತಿಗಳೆಲ್ಲವನ್ನೂ ತನ್ನ ಸೂಕ್ಷ್ಮ ಬುದ್ಧಿಯಿಂದರಿತ ಕಮಲಾಂಬಾಳ್ ಎಲ್ಲವನ್ನೂ ಸಹಿಸಿಕೊಂಡು ಹೋದುದು ಮಾತ್ರವಲ್ಲದೆ ತಮ್ಮಂತಹ ವಾರಿಗಿತ್ತಿಯರು ಲೋಕದಲ್ಲೇ ಇಲ್ಲವೆಂದು ನೋಡುವವರು ಹೇಳುವ ರೀತಿಯಲ್ಲಿ ಅವಳೊಡನೆ ಸರಸಸಲ್ಲಾಪಗಳನ್ನು ಮಾಡುತ್ತ ಸಂತೋಷವಾಗಿದ್ದಳು. ಅವಳ ಸ್ವಭಾವ ಬಹಳ ದೊಡ್ಡ ಸ್ವಭಾವವಾದುದರಿಂದ ಹಿಂದೆ ತನ್ನನ್ನು ಪೊನ್ನಂಬಾಳ್ ನದಿಯ ತೀರದಲ್ಲಿ ಬೈದ ಮಾತುಗಳು ಅವಳ ನೆನಪಿನಲ್ಲಿ ಸಹ ಇರಲಿಲ್ಲ. ಇವಳು ಪ್ರೀತಿ ತೋರಿಸಿದಷ್ಟೂ, ಪೊನ್ನಮ್ಮಾಳಿಗೆ ಇವಳ ವಿಷಯದಲ್ಲಿ ಮತ್ಸರ ಹೆಚ್ಚಿತು. ಸುಬ್ರಹ್ಮಣ್ಯ ಅಯ್ಯರ್ ಚಟುವಟಿಕೆಯಿಂದ ಓಡಾಡುತ್ತ ಕಾರ್ಯ ಮಾಡುವುದನ್ನು ಕಂಡಾಗಲೆಲ್ಲ ಅವಳಿಗೆ ಉಂಟಾದ ಕೋಪಕ್ಕೂ ಹೊಟ್ಟೆಯುಕಿಚ್ಚಿಗೂ ಮಿತಿ ಇರಲಿಲ್ಲ. ಮದುವೆ ಇನ್ನೂ ನಾಲ್ಕು ದಿನಗಳಿರಬೇಕಾದರೆ ಅವರು ಮನೆಯನ್ನು ಬಿಟ್ಟು ಹೋದವರು ಅನಂತರ

ತನ್ನ ಮನೆಯ ಕಡೆ ಹೋಗಲೇ ಇಲ್ಲ. ಮದುವೆ ಮುಗಿಯುವವರೆಗೂ ಅವರಿ
ಮನೆಗೆ ಹೋಗುವ ಆವಶ್ಯಕತೆ ಇರಲಿಲ್ಲ. ಪೊನ್ನಮ್ಮಾಳ ದಯೆಯೂ ಬೇಕ
ಗಿರಲಿಲ್ಲ. ಆದುದರಿಂದ ಅವಳು ಮನೆಗೆ ಬರುವಂತೆ ಎಷ್ಟು ಸನ್ನೆ ಮಾಡಿದರು
ಅವುಗಳನ್ನು ನೋಡದವರಂತೆ ಸುಮ್ಮನೆ ಇದ್ದರು. ಅವಳೂ ಸ್ವಲ್ಪ ಜರು
ರಾಗಿ ಬಂದು ಹೋಗುವಂತೆ ಸುಮಾರು ಸಾವಿರ ಜನರ ಬಳಿ ಹೇಳಿ ಕಳುಹಿ
ಸಿದಳು. ಇವರು ಹೋಗಲೇ ಇಲ್ಲ. ಆದರೂ ಅವಳ ವಿಚಾರದಲ್ಲಿ ಇದ್ದ ಭಯ
ಅವರಿಗೆ ತಪ್ಪಲಿಲ್ಲ. ಒಂದುಸಲ ಸಿಕ್ಕಿಬಿದ್ದರೆ ಆಮೇಲೆ ತಪ್ಪಿಸಿಕೊಳ್ಳುವುದ
ಈ ಜನ್ಮದಲ್ಲಿಯೇ ಸಾಧ್ಯವಿಲ್ಲವೆಂದು ಅವರಿಗೆ ಚೆನ್ನಾಗಿ ತಿಳಿದಿತ್ತು. ಎಲ್ಲಿ
ಅವಳು ಬಂದು ಬಿಡುವಳೊ, ಎಂದು ಅವರು ಸುತ್ತುಮುತ್ತಲೂ ನೋಡುತ್ತ
ಲಿರುವರು. ಬರುವಳೆಂದು ತಿಳಿಯಿತೊ, ತತ್‌ಕ್ಷಣವೇ ಯಾವುದೊ ಒಂದ
ದೊಡ್ಡ ಕೆಲಸವನ್ನು ಮಾಡುವವರಂತೆ ಬಹಳ ಅವಸರವಾಗಿ ಹೊರಡುವರು
ಅವಳು ಒಳಕ್ಕೆ ಬಂದರೆ ಇವರು ಹೊರಕ್ಕೆ ಹೋಗುವರು,ಅವಳು ಹೊರಕ್ಕೆ
ಬಂದರೆ ಇವರು ಒಳಗೆ ಹೋಗುವರು. ಅವಳು ಬರುವಳೆಂಬ ಸುದ್ದಿ ಬಂದರೆ
ಇವರು ಒಂಟಿಯಾಗಿರುವುದೇ ಇಲ್ಲ (ಏನು ಮಾಡಿಬಿಡುವಳೋ ಎಂಬ ಭಯ
ಪಾಪ!) ಎಲಾ ರಾಮಸ್ವಾಮೀ, ಸುಬ್ಬಣ್ಣಾ — ಎಂದು ಏನಾದರೊಂದು ಹೆಸ
ರನ್ನು ಹೇಳಿ ಕೂಗುತ್ತ, ಗುಂಪಿನ ಮಧ್ಯೆ ಅವಿತುಕೊಳ್ಳುವರು. ಇವರು
ಹೀಗೆ ಓಡಿ ಅವಿತುಕೊಳ್ಳುವುದನ್ನು ಕಂಡ ಕೆಲವು ಪೋಕರಿ ಹುಡುಗರು
ಸುಳ್ಳುಸುಳ್ಳಾಗಿ, "ಪೊನ್ನಮ್ಮಾಳ್ ಬರುತ್ತಿದ್ದಾಳೆ" ಎಂದು ಹೇಳಿ ಬಿಡುವುದು
ಇವರು 'ಹುಲಿ ಬರುತ್ತದೆ' ಎಂದು ಕೇಳಿದ ಕೂಡಲೆ ಓಡಿದ ಕುರಿಯನ್ನು
ಮೇಯಿಸುವವನು ಕಥೆಯಲ್ಲಿ ಮಾಡಿದಂತೆ ಎದ್ದು ಬಿದ್ದು ಓಡುವುದು — ಹೀಗೆ
ಅವಳ ಹೆಸರಿಗೇ ಭಯಗೊಂಡು ಓಡಿ ಬಚ್ಚಿಟ್ಟುಕೊಂಡಿದ್ದರಿಂದ, ಅವಳು
ಅವರನ್ನು ಯಾವ ತಂತ್ರದಿಂದ ಓಡಿಸಿ ಬೇಟೆಯಾಡಿದರೂ ಅವರು ಸಿಕ್ಕಿ ಬೀಳು
ವಂತಿರಲಿಲ್ಲ. ಅವಳು ಅವರನ್ನು ನೋಡಿ, ಹಲ್ಲು ಕಡಿದುಕೊಂಡು, ಬೆರಳನ್ನು
ಮುರಿಯುತ್ತ ತನ್ನ ಕಣ್ಣುಗಳ ಮುಖಾಂತರ ಎಷ್ಟು ಕೋಪವನ್ನು ಹೊರ
ಗೆಡಹಬಹುದೋ ಅಷ್ಟನ್ನೂ ಮಾಡಿದಳು. ಯಾವುದೂ ಫಲಕಾರಿಯಾಗಲಿಲ್ಲ
ಅವರಿಗೆ ಇಷ್ಟು ಧೈರ್ಯ ಬಂದುದನ್ನು ನೋಡಿ ಅವಳಿಗೆ ಆಶ್ಚರ್ಯವಾಯಿತು.

ಅವರನ್ನು ಹೇಗೆ ದಂಡಿಸಬೇಕೆಂದೂ ಅವಳಿಗೆ ತೋರದಾಯಿತು. ಅವರ ಧೈರ್ಯವನ್ನೂ, ಅಲಕ್ಷ್ಯವನ್ನೂ, ನೆನೆನೆನೆದು ಅವಳಿಗೆ ಆಶ್ಚರ್ಯವಾಗಿದ್ದುದರಿಂದ ಅವಳು ರಾತ್ರಿಯೆಲ್ಲಾ ನಿದ್ದೆ ಹೋಗದೆ ಬಿಡುವಿಲ್ಲದೆ ಯೋಚನೆಗಳನ್ನು ಮಾಡತೊಡಗಳು. ತನ್ನ ಕೋಪವು ತೀರುವಂತೆ ಅವರನ್ನು ಬೈದಾಡಿ, ಅವರಿಗೆ ಬುದ್ಧಿ ಕಲಿಸಬೇಕೆಂದು ಸಹ ಒಂದು ದಿನ ತೀರ್ಮಾನಿಸಿದಳು. ಆದರೆ ಹಾಗೆ ಮಾಡುವುದು ತನಗೇ ವಿರೋಧವಾಗುವುದೆಂದು ಅವಳಿಗೆ ಮರುದಿನ ತೋರಿತು. ಆದುದರಿಂದ ನಯದಿಂದ ಒಳ್ಳೆಯ ಮಾತಿನಲ್ಲಿ ತನ್ನ ಬಳಿ ಬರುವಂತೆ ಮಾಡಿ, ಅವರನ್ನು ವಶಪಡಿಸಿಕೊಳ್ಳುವಂತೆ ಒಂದು ಔಷಧವನ್ನು ಸಂಪಾದಿಸಿ ಅದನ್ನು ಹಾಲಿನಲ್ಲಿ ಬೆರೆಸಿ ಅವರಿಗೆ ಕೊಡುವುದೆಂದು ಕೊನೆಯಲ್ಲಿ ತೀರ್ಮಾನಿಸಿಕೊಂಡಳು. ದುಷ್ಟ ಹೆಂಗಸರ ಕೈಯಲ್ಲಿ ಒಂದು ಹರಿತವಾದ ಆಯುಧದಂತಿರುವ ಆ ವಶೀಕರಣದ ಮದ್ದೆಂಬ ವಿಷದ ಔಷಧವನ್ನು—ಇಲ್ಲಿ ಹೇಳಲು ಯೋಗ್ಯವಲ್ಲದ ಅನೇಕ ಪದಾರ್ಥಗಳನ್ನು ಸೇರಿಸಿ—ಮರುದಿನವೇ ಸಿದ್ಧ ಮಾಡಿಕೊಂಡು "ಎಂದು ಬರುವರೊ ಎನ್ನ ಸ್ವಾಮಿ" ಎಂದು ಬಹಳ ಕಾತರತೆಯೊಡನೆ ತನ್ನ ಪತಿಯ ಬರುವಿಕೆಯನ್ನು ಎದುರು ನೋಡುತ್ತಿದ್ದಳು.

## ೧೨. ಔಷಧದ ಮಾಯೆ

ಮದುವೆ ಮುಗಿದ ಕೂಡಲೆ ಶಿಬುಕುಳದಲ್ಲಿರುವ ಎಲ್ಲರೂ ಮೇಳ ತಾಳದೊಡನೆ ಎರಡು ಮೈಲಿ ದೂರ ಹೋಗಿ ಬೀಳ್ಕೊಡಲು, ಬೀಗರು ಮಧುರೆಯನ್ನುದ್ದೇಶಿಸಿ ಹೊರಟರು. ಅವರು ಹೋದ ಮರುದಿನ ರಾತ್ರಿ ಸುಬ್ರಹ್ಮಣ್ಯ ಅಯ್ಯರ್ ತಮ್ಮ ಮಲಗುವ ಕೋಣೆಯಲ್ಲಿ ಮದುವೆಯ ಶ್ರಮವನ್ನು ಕಳೆಯುವಂತೆ ಬಹಳ ಬ್ರಹ್ಮಾನಂದವಾಗಿ ನಿದ್ರಿಸುತ್ತಿದ್ದರು. ಆಗ ಅವರ ಉತ್ತಮ ಪತ್ನಿಯಾದ ಪೊನ್ನಮ್ಮಾಳ್,'ಬೆಟ್ಟದಲ್ಲಿ ಬೆಳೆದರೂ ಒರಳಿನಲ್ಲಿಯೇ ಬಂದು ಮಸಿಯಬೇಕು—ಎಷ್ಟು ದಿನ ಮದುವೆಯನ್ನು ಕೊಂಡಾಡಿದರೂ ಈಗಲಾದರೂ ಮನೆಗೆ ತಾನೇ ಬರಬೇಕು....ನಮ್ಮ ಕೈಯಲ್ಲಿ ಸಿಕ್ಕಿಬಿದ್ದರು. ಇದೇ ಸಮಯ : ಗಾಳಿ ಬಂದಾಗಲೇ ತೂರಿಕೊಳ್ಳಬೇಕು. ಇದು ಬಿಟ್ಟರೆ

ಸಮಯ ಸಿಕ್ಕಲಾರದು. ಆದುದರಿಂದ ಚೆನ್ನಾಗಿ ಅಲಂಕರಿಸಿಕೊಂಡು ಅವರ ಬಳಿ ಹೋಗಿ ತನ್ನ ಸೌಂದರ್ಯದಿಂದಲೂ ಮಾತಿನಿಂದಲೂ ಅವರನ್ನು ಮೋಹಗೊಳಿಸಿ ಮರಳು ಮಾಡಿ ಅವರಿಗೆ ಔಷಧವನ್ನು ಕೊಡಬೇಕೆಂಬ ಉದ್ದೇಶದಿಂದ ಜಾಜ್ವಲ್ಯಮಾನವಾಗಿರುವ ವಜ್ರ, ಪಚ್ಚೆ, ಗೋಮೇಧಕ ಮೊದಲಾದ ನವರತ್ನಗಳುಳ್ಳ ತನ್ನ ಸಮಸ್ತ ಆಭರಣಗಳನ್ನೂ ಧರಿಸಿ, ಸೊಗಸಾದ ಜವ್ವಾರಿ ಬೊಟ್ಟನ್ನಿಟ್ಟು—ಅಲಂಕಾರವಾದ ರೇಷ್ಮೆ ಸೀರೆಯನ್ನುಟ್ಟು, ತಾಂಬೂಲದಿಂದ ಕೆಂಪೇರಿದ ತನ್ನ ಹವಳತುಟಿಗಳಲ್ಲಿ ಮಂದಹಾಸ ಬೀರುತ್ತ, ಕಾಲುಗೆಜ್ಜೆಗಳು ಘಳೀರ್ ಘಳೀರೆಂದು ನಾದ ಮಾಡುತ್ತಿರಲು, ಕಾಲುಂಗುರಗಳು ಹೆಜ್ಜೆ ಹಾಕುತ್ತಿದ್ದ ಹಾಗೆ "ಪರಾಕ್—ಎಚ್ಚರಿಕೆ" ಎಂಬಂತೆ ಧ್ವನಿಸುತ್ತಿರಲು, ಘಮಘಮವೆಂದು ಪರಿಮಳವು ದೂರ ಪಸರಿಸುತ್ತಿರಲು, ಕೈಯಲ್ಲಿ ತಾಂಬೂಲ ತಟ್ಟೆಯನ್ನು ಹಿಡಿದು, ಪುಷ್ಪಲತೆಯಂತೆ ಅಲುಗಾಡುತ್ತ, ಹಂಸಗತಿಯಿಂದ ತನ್ನ ಗಂಡನ ಬಳಿಸಾರಿ ಅವರನ್ನು ಇಂಪಾದ ಮಾತುಗಳಿಂದ ತಟ್ಟಿ ಎಬ್ಬಿಸಿದಳು. ಸಾಮಾನ್ಯವಾಗಿಯೇ ಅವಳ ಸೌಂದರ್ಯಕ್ಕೆ ಬೆರಗಾಗಿದ್ದ ಗಂಡನು ಅವಳನ್ನು ನೋಡುತ್ತಲೇ, ಸುವಾಸನೆಯಿಂದ ಕೂಡಿದ ಚಿನ್ನದ ಪುಷ್ಪದಂತೆ ಶೋಭಿಸುತ್ತಿದ್ದ ಅವಳನ್ನು ಕಂಡು "ನಮ್ಮ ಭಾಗವೇ ಭಾಗ್ಯ" ಎಂದು ಆನಂದಪರವಶನಾದನು.

ಅವರು ಕಣ್ಣು ಬಿಟ್ಟು ಎದ್ದುದನ್ನು ಕಂಡ ಪೊನ್ನಮ್ಮಾಳ್ ಅವರ ಮೇಲೆ ಮೆತ್ತಗೆ ವಾಲುತ್ತ ಮದುವೆಯಾದುದು ಮೊದಲು ಇಂದಿನವರೆಗೂ ಅವರರಿಯದಷ್ಟು ಪ್ರೇಮದೊಂದಿಗೆ ಅವರೊಡನೆ ಪ್ರೇಮಾಲಾಪವನ್ನು ಮಾಡುತ್ತ ಬಹಳ ವಿಲಾಸದಿಂದ ನಡೆದುಕೊಂಡಳು. ಹೀಗೆ ಮಾತನಾಡಿಕೊಂಡಿರುವಾಗ ಇದ್ದಕ್ಕಿದ್ದಂತೆ ನೆನೆದುಕೊಂಡವಳಂತೆ "ಓಹೋ! ಹಾಲನ್ನು ತೆಗೆದುಕೊಂಡು ಬರಲು ಮರೆತುಬಿಟ್ಟೆ." ಎಂದು ಹೇಳಲು ಸುಬ್ರಹ್ಮಣ್ಯ ಅಯ್ಯರ್, "ಇರಲಿ ಹೋಗು. ಇದಕ್ಕಾಗಿ ನೀನು ಮತ್ತೆ ಹೋಗಬೇಡ. ಇಂದು ಒಂದು ದಿನ ಹಾಲು ಇಲ್ಲದಿದ್ದರೆ ಏನಾಯಿತು?" ಎನ್ನಲು ಅದಕ್ಕೆ ಅವಳು "ಛೀ— ಚೆನ್ನಾಗಿದೆ— ಇದೊಂದು ಶ್ರಮವೇ ನನಗೆ ? ಮದುವೆಯಲ್ಲಿ ನಿಮಗೆ ತುಂಬ ಶ್ರಮವಾಯಿತು. ( ಅವರ ಮೈಯನ್ನು ಮುಟ್ಟಿ

ನೋಡುತ್ತ ) ಏತಕ್ಕೋ ಮೈ ಬಿಸಿಯಾಗಿದೆ. ಆಗ ಅಷ್ಟು ಅಲೆದಾಡಿದಿರಲ್ಲಾ—ನಿಮ್ಮ ಮೈ ಗತಿಯೇನು ಎಂದು ನನಗೆ ಇದ್ದ ಚಿಂತೆ ನನಗೇ ಗೊತ್ತು. ಹೀಗೆ ನಿಮಗಾಗಿ ಚಿಂತೆ ಪಟ್ಟುಕೊಂಡು ವೇಳೆವೇಳೆಗೆ ಅನ್ನವಿಲ್ಲದೆ, ನೀರಿಲ್ಲದೆ ರಾತ್ರೀಹಗಲೂ ನಿದ್ದೆ ಇಲ್ಲದೆ ನಾನಿಲ್ಲಿ ಬಿದ್ದಿದ್ದು ಒಂಟಿಯಾಗಿ ತಪಿಸುತ್ತ ಪೇಚಾಡುವುದು; ನೀವಾದರೊ ನನಗೆ ಭೂಲೋಕದಲ್ಲಿಯೇ ಶ್ರೇಷ್ಠವಾದ ಅಣ್ಣನ ಮನೆಯಿದೆಯೆಂದು, ಅಲ್ಲಿಯೇ ಊಟ, ಅಲ್ಲಿಯೇ ನಿದ್ರೆ-ಎಲ್ಲವನ್ನೂ ಮಾಡಿಕೊಂಡು ನಮಗೆ ಸಮಾನರು ನಾವೇ ಎಂದುಕೊಳ್ಳುತ್ತ ಕಾಲಕಳೆಯುವುದು. ಸಾವಿರವಿದ್ದರೂ ನಿಮ್ಮ ದೊಡ್ಡಣ್ಣ—ನಾನೇನೂ ಹೇಳಬಾರದು— ಚಿನ್ನದಂತಹ ಅಣ್ಣ! ಓಡುವವನನ್ನು ಕಂಡರೆ ಅಟ್ಟುವವನಿಗೆ ಹೀಯಾಳಿಕೆ ಎಂಬಂತೆ ಅವರು ಆಯ್ಯರವರು ಕಾಲಮೇಲೆ ಕಾಲುಹಾಕಿಕೊಂಡು, "ಎಲಾ! ಸುಬ್ರಹ್ಮಣ್ಯ! ಇಗೋ ಆ ವೀಳೆದೆಲೆ ತಟ್ಟೆಯನ್ನು ತೆಗೆದುಕೊಂಡು ಬಾ." ಎಂದು ಅಧಿಕಾರ ಮಾಡಿ ದರ್ಪ ನಡೆಸುವುದು, (ಅವರ ಮುಖವನ್ನು ಕೈಯಿಂದ ತಟ್ಟುತ್ತ) ಇದು ಸುಲಭವಾಗಿ ಮೋಸಹೋಗುವುದು. ಪರಿಚಾರಕನಂತೆ ಅಲ್ಲಿಂದಿಲ್ಲಿಗೆ ಓಡಾಡುತ್ತ ಚಾಕರಿ ಮಾಡುವುದು. ಕೂಗಿದರೆ ಕೂಡ ಮೈಮೇಲೆ ಪ್ರಜ್ಞೆ ಇಲ್ಲ. ನಾನೇನು ಮಾಡಬೇಕು. ಅಣ್ಣನಾದರೊ ಶ್ರೀಮಂತ!" ಎಂದು ಹೇಳಿ ಅವರ ಕೈಗಳನ್ನು ಹಿಡಿದುಕೊಂಡು ತನ್ನ ಮುಖವನ್ನು ಅವರ ಮುಖದ ಸಮೀಪಕ್ಕಿಟ್ಟುಕೊಂಡು ಬಹು ನಯವಾದ ನೋಟದಿಂದ, "ಅವರ ಸ್ವತ್ತೆಲ್ಲವನ್ನೂ ನಿಮಗೇ ಕೊಡುತ್ತಾರಂತಲ್ಲಾ! ಅವರ ಮಗಳಿಗೆ ಇಲ್ಲವಂತೆ! ಎಲ್ಲಾ ನಿಮಗೇ ಅಂತೆ!" ಎಂದಳು.

ಆ ರಾಕ್ಷಸಿಯ ಮಾತು ನಮಗೆ ಕರ್ಣಕಠೋರವಾಗಿದ್ದರೂ ಸುಬ್ರಹ್ಮಣ್ಯ ಅಯ್ಯರಿಗೆ ದೇವಗಾನದಂತೆಯೂ, ಅಮೃತಪಾನದಂತೆಯೂ ಇತ್ತು. ಅವಳ ಕಿಚ್ಚಿನ ಧಾರೆ ನಿಂತಕೂಡಲೆ ಅವರು ಬಹಳ ಪ್ರೀತಿಯಿಂದ, "ಹೋಗೆ, ಹುಚ್ಚಿ! ನೀನೇನು ಕಂಡೆ— ನಮ್ಮ ಅಣ್ಣನಿಗೆ ಸಮಾನರು ಈ ಭೂಲೋಕದಲ್ಲಿ ಯಾರಿದ್ದಾರೆ?" ಎನ್ನಲು ಪೊನ್ನಮ್ಮಾಳ್, "ಅಯ್ಯೋ ಪಾಪ! ಹೋಗಲಿ! ಈಗ ಹಾಲನ್ನು ಕುಡಿಯಿರಿ" ಎಂದು ಹೇಳಿ, "ಅಣ್ಣನ ಮೇಲಿನ

ಮೋಹ ಹೀಗೆ ಆಡಿಸುತ್ತದೆ. ಅಬ್ಬಾ! ಇಂದಿಗೇ ಇದೆಲ್ಲ ಸರಿ ಹೋಗು ತ್ತದೆ. ಇನ್ನು ಮುಂದೆ ಹೀಗೆ ಹೇಳುವುದನ್ನು ನೋಡೋಣ" ಎಂದು ತನ್ನೊಳಗೇ ಮಾತಾಡಿಕೊಳ್ಳುತ್ತ, ಔಷಧವನ್ನು ಬೆರೆಸಿ ಸಿದ್ಧವಾಗಿಟ್ಟಿದ್ದ ಹಾಲನ್ನು ತೆಗೆದುಕೊಂಡು ಬಂದು ಕೆಳಗಿಟ್ಟಳು. ಅವರು ಅದರ ಬಣ್ಣ ಬದಲಾಯಿಸಿರುವುದನ್ನು ಕಂಡು ಶಂಕಿಸುವರೆಂದು ಹೆದರಿ ತನ್ನ ಕೈಯಲ್ಲಿಯೇ ಹಿಡಿದುಕೊಂಡು ಎಡಗೈಯಿಂದ ಅವರನ್ನು ತಬ್ಬಿಕೊಂಡು ಎದೆಯಮೇಲೆ ವಾಲಿಕೊಂಡು ತಾನೇ ಅವರಿಗೆ ಆ ಹಾಲನ್ನು ಕುಡಿಸಿದಳು. ಅವರಿಗೆ ಅದರ ವಿಷಯದಲ್ಲಿ ಸಂದೇಹ ಉಂಟಾಗುವುದೆಂದು ಭಯಪಟ್ಟು ಇಷ್ಟು ಸಾಹಸ ವನ್ನು ಮಾಡಲು, ಅದನ್ನು ಅರಿಯದ ಸುಬ್ರಹ್ಮಣ್ಯ ಅಯ್ಯರ್ ಅವಳ ವಿಶೇಷವಾದ ಪ್ರೇಮಕ್ಕೆ ಇದೊಂದು ಸಂಕೇತವೆಂದು ಭಾವಿಸಿ, "ಈ ಲೋಕದಲ್ಲಿ ನನ್ನಂತಹ ಭಾಗ್ಯಶಾಲಿ ಯಾರಿರುವರು ?" ಎಂದು ಹೆಮ್ಮೆ ಗೊಳ್ಳುತ್ತ, ಅವಳ ಸೌಂದರ್ಯದ ಭ್ರಾಂತಿಯಿಂದ ಹಾಲಿನ ರುಚಿಯನ್ನು ಕೂಡ ಗಮನಿಸದೆ ಕುಡಿದುಬಿಟ್ಟರು. ಕುಡಿದ ಸ್ವಲ್ಪ ಹೊತ್ತಿಗೆಲ್ಲ (ಔಷಧ ಪ್ರಮಾಣ ಮೀರಿ ಬೆರೆಸಿದ್ದುದರಿಂದ) "ಹಾಲೇನು! ಹೇಗೆಯೋ ಇದೆ ಯಲ್ಲ" ಎಂದು ಹೇಳುತ್ತ ವಾಂತಿಮಾಡಲು ಆರಂಭಿಸಿದರು. ಪೊನ್ನ-ಮ್ಮಾಳ್ ಬೇಗ ಹೋಗಿ ಪಾತ್ರೆಯನ್ನು ತೊಳೆದಿಟ್ಟು ಅವರ ತಲೆಯನ್ನು ಹಿಡಿದುಕೊಂಡಳು. ಹಾಲನ್ನು ಕುಡಿದ ಬ್ರಾಹ್ಮಣ— ಪಾಪ!— ಎರಡು ಘಳಿಗೆ ವರೆಗೂ ಬಾಯಿ ಮುಚ್ಚದೆ ವಾಂತಿ ಮಾಡಿಕೊಳ್ಳುತ್ತ ಬಹಳ ಕಷ್ಟಪಟ್ಟರು. ವಾಂತಿ ಮಾಡಿದರೂ ಹೆಚ್ಚು ಔಷಧ ಹೊರಕ್ಕೆ ಬರಲಿಲ್ಲ ವೆಂಬುದನ್ನು ಕಂಡು ತೃಪ್ತಿಹೊಂದಿ ಅವರ ಹೆಂಡತಿ, "ಪಿತ್ತ ಹೆಚ್ಚಾ ಗಿದೆ. ಹಾಲುಕೂಡ ಸೇರುವುದಿಲ್ಲ. ಪಿಶಾಚಿ ಅಲೆಯುವಂತೆ ಅಲೆದಾಡಿದರೆ ಪಿತ್ತ ಹೆಚ್ಚಾಗದೆ ಮತ್ತೇನಾದೀತು? ನನಗೆ ಆಗಲೇ ಗೊತ್ತು. ಆ ಹಾಳು ಮದುವೆ ಒಳ್ಳೇ ಬಂತೆ? ಸುಡುಗಾಡು! ಸ್ವಾಮಿ! ಇಷ್ಟುಮಟ್ಟಿಗೆ ಹೋಗ ಬೇಕಲ್ಲಾ. ನಾನೇನು ಮಾಡಲಿ?" ಎಂದು ಹೇಳುತ್ತಲೇ ಅಳುವವಳಂತೆ ನಟಿಸಿದಳು. ಕೆಲವು ಸ್ತ್ರೀಯರಿಗೆ– ಪಟ್ಟಣದಲ್ಲಿ ನಲ್ಲಿಯನ್ನು ತಿರುಗಿಸಿದರೆ ಹೇಗೋ ಹಾಗೆ—. ಕಣ್ಣನ್ನು ಮುಟ್ಟಿದರೆ ಸಾಕು, ನೀರು ಹರಿಯುತ್ತದೆ.

ಾಗೆ ಹಣ ಕೊಡದೆ ಬೇಕಾದಷ್ಟು ಕಣ್ಣೀರನ್ನು ಬರಮಾಡಿಕೊಳ್ಳುವವ
ನ್ನು ಪಡೆದ ಅದೃಷ್ಟಶಾಲಿಗಳ ಪೈಕಿ ಪೊನ್ನಮ್ಮಾಳ್ ವಿಶೇಷ ಅದೃಷ್ಟ
ಡೆದವಳು. ಹೀಗೆ ಅವಳು ಅಳುವುದಕ್ಕೆ ತೊಡಗಿದಕೂಡಲೆ ಸುಬ್ರಹ್ಮಣ್ಯ
ಯ್ಯರ್ ತನ್ನ ಕ್ಲೇಶವನ್ನು ಸಹ ಮರೆತು ಅವಳನ್ನು ಸಮಾಧಾನಗೊಳಿ
ದರು. ಹೀಗೆ ಒಬ್ಬರನ್ನೊಬ್ಬರು ಸಮಾಧಾನ ಪಡಿಸಿಕೊಳ್ಳುತ್ತ ಇಬ್ಬರೂ
ದ್ರಿಸಿದರು. ಆದರೆ ನಿದ್ದೆ ಹೋಗುವುದಕ್ಕೆ ಮೊದಲು ಪಿತ್ತವು ಹೆಚ್ಚಾ
ರುವುದೆಂದೂ, ಆದರಿಂದ ಹಾಲು ಸೇರಲಿಲ್ಲವೆಂದೂ, ಹಾಲು ಸೇರದೆ
ದ್ದುದರಿಂದ ವೈದ್ಯನನ್ನು ಬೆಳಗಾಗುತ್ತಲೆ ಕರೆಯಬೇಕೆಂದೂ ಅವರು
ಶ್ಚಯ ಮಾಡಿದರು. ಕ್ರಮದಿಂದ ಬಳಲಿ ಇಬ್ಬರೂ ಮೈಮರೆತು
ದ್ದೆ ಮಾಡಿದರು.

ಇವರು ನಿದ್ದೆಹೋದ ಎರಡು ಘಳಿಗೆಗಳಲ್ಲಿ ಇದ್ದಕ್ಕಿದ್ದ ಹಾಗೆ,
ರಣಪಾತಕಾ! ರಣಪಾತಕಾ! ಸಾಲಗಾರ ರಣಪಾತಕಾ" ಎಂದು ಒಂದು ಧ್ವನಿ
ೇಳಿ ಬಂತು. ಆಗ ಮುತ್ತುಸ್ವಾಮಿ ಅಯ್ಯರೂ, ಕಮಲಾಂಬಾಳೂ
ವ್ಮು ಮನೆಯ ಮುಹಡಿಯ ಮೇಲೆ ಬಹಳ ಹೊತ್ತು ಅಳಿಯ, ಬೀಗರು,
ದುವೆ ಮೊದಲಾದ ವಿಷಯಗಳನ್ನು ಕುರಿತು ಮಾತನಾಡುತ್ತಲಿದ್ದರು. ಆ
ೀಲೆ ಬ್ರಹ್ಮಾನುಭೂತಿಗಳಾದ ತಾಯುಮಾನ ಸ್ವಾಮಿಗಳವರ ಭಗವತ್
ೃಪೆಯನ್ನು ವರ್ಣಿಸುವ ಪದ್ಯಗಳನ್ನು ಹಾಡಿಕೊಳ್ಳುತ್ತಿದ್ದರು. ಆ ಪದ್ಯ
ಳು ಅವರಿಗೆ ಸ್ವಲ್ಪವೂ ಬೇಸರವನ್ನುಂಟುಮಾಡದ ದಿವ್ಯ ತೇಜೋಮಯಾ
ಂದಭೂತವಾದ ಆನಂದಸಾಗರದಂತಿತ್ತು. ಅವುಗಳನ್ನು ಅವರು ಸತ್ಯ
ಜ್ಞಾನದ ಕಣಜವೆಂತಲೂ, ಮಹದಾನಂದದ ನಿರ್ಮಲವಾದ ಕಾರಂಜಿ
ುಂತಲೂ ವಿಶೇಷವಾದ ಪ್ರಶಂಸೆಯಿಂದ ಕೊಂಡಾಡುವುದು ರೂಢಿ
ಾಗಿತ್ತು. ಅವರು ಸುಖಾನುಭವವನ್ನು ಪಡೆದ ಕಾಲದಲ್ಲಿ, ಅಮೃತಮಯ
ಾದ ಚಂದ್ರಿಕೆಯೊಂದಿಗೆ ಪರವಶ ಮಾಡುವ ಗಾನರಸವು ಸೇರಿದರೆ
ೇಗೊ ಹಾಗೆ, ಮತ್ತು ದುಃಖ ಬಂದ ಕಾಲದಲ್ಲಿ ಉರಿಯುವ ಬೇಸಿಗೆ
ಲ್ಲಿ ತಂಗಾಳಿ ಹೇಗೋ ಹಾಗೆ, ಪ್ರಯೋಜನ ಕಾರಿಯಾದ ಆ ಪದ್ಯಗಳು
ವರಿಬ್ಬರಿಗೆ ಶ್ರೇಷ್ಠ ಜೀವನದ ಇಂಬಾಗಿ ಪರಿಣಮಿಸಿದುವು. ಕ್ಷಣಿಕಾ

ನಂದಕ್ಕೂ ನಿತ್ಯಾನಂದಕ್ಕೂ ಸ್ವಲ್ಪವೇ ಅಂತರವೆಂದು ತೋರುವಂತೆ ಕಮ
ಲಾಂಬಾಳ್ ತಾಯುಮಾನಸ್ವಾಮಿಗಳವರ ಆನಂದಮಯವಾದ ಹಾಡುಗ
ಳನ್ನು ವೀಣೆಗೆ ಹೊಂದಿಸಿ, ವೀಣೆಯ ನಾದವೂ ತನ್ನ ಕಂಠವೂ ಒಂದರೊಂದಿ
ಗೊಂದು ಅನ್ಯೋನ್ಯವಾಗಿ ಲಯಹೊಂದಿ, "ಆದಿ ಅನಾದಿಯಾಗಿ ಎನಗಾ
ನಂದವಾಗಿ, ಅರಿವಾಗಿ ನಿಂತು ಬೆಳಗುವ ಜ್ಯೋತಿ ಮೌನಿಯೋಗಿ ತೋರಿ
ಅವನು ಹೇಳಿದ ಮಾತನ್ನು ಉಸಿರಿದನೆ, ಸಖಿ" ಎಂಬ ಹಾಡನ್ನು ಭಾವ
ಪೂರಿತವಾಗಿ ಬಹು ಸಮವಾಗಿಯೂ, ಇಂಪಾಗಿಯೂ, ಮೃದುಸ್ವರದಿಂದಲೂ
ಹಾಡಲು, ಮುತ್ತುಸ್ವಾಮಿ ಅಯ್ಯರ್ ಕೆಲವು ಸಮಯಗಳಲ್ಲಿ ಜೊತೆ
ಯಲ್ಲಿ ಹಾಡುತ್ತಲೂ, ಇತರ ಸಮಯಗಳಲ್ಲಿ ಕೇಳುತ್ತಲೂ ಇದ್ದರು. ಅಲ್ಲಿ
ಪೊನ್ನಮ್ಮಾಳ್ ತನ್ನ ಗಂಡನಿಗೆ ವಿಷವನ್ನು ಹಾಕುತ್ತಿದ್ದಳು. ಇಲ್ಲಿ ಕಮ
ಲಾಂಬಾಳ್ ಹಾಗೂ ಆಕೆಯ ಪತಿಯೂ, ಆನಂದಮಯವಾದ ಕ್ಷೀರ ಸಮು
ದ್ರದಲ್ಲಿ ಬ್ರಹ್ಮಾನಂದದಿಂದ ಆಡುತ್ತ ಹಾಡುತ್ತ ವಿನೋದವಾಗಿ ಕಾಲವನ್ನು
ಕಳೆಯುತ್ತಿದ್ದಳು.

ಹೀಗಿರುವ ಕಾಲದಲ್ಲಿ ಇದ್ದಕ್ಕಿದ್ದ ಹಾಗೆ ಆ ಕಗ್ಗತ್ತಲೆ ಕವಿದ ಅಂಧ
ಕಾರದಲ್ಲಿ "ರಣಪಾತಕಾ! ರಣಪಾತಕಾ! ಸಾಲಗಾರ! ರಣಪಾತಕಾ!"
ಎಂದು ಮೇಲೆ ಹೇಳಿದಂತೆ ಒಂದು ಗಟ್ಟಿಯಾದ ಕೂಗು ಕೇಳಿದ ಕೂಡಲೆ,
ಇಬ್ಬರೂ ಬೆಚ್ಚಿಬಿದ್ದು ಒಬ್ಬರನ್ನೊಬ್ಬರು ನೋಡಿದರು. ಕಮಲಾಂಬಾಳ್
ನಡುಗಿದಳು. ಮುತ್ತುಸ್ವಾಮಿ ಅಯ್ಯರ್ ಅವಳಿಗೆ ಧೈರ್ಯ ಹೇಳಿ, ಕೇಳ
ಕ್ಕೆಳಿದರು. ಸಮೀಪದಲ್ಲಿರುವ ಒಬ್ಬರ ಮನೆಯಲ್ಲಿ ಹಲವರು ಸೇರಿ ಮಾತಾ
ಡುತ್ತಲೂ, ನಗುತ್ತಲೂ ಇದ್ದ ಶಬ್ದ ಕೇಳಿಸಿತು. ಅದು ಎಮ್ಮೆಯ ಗಂಟ
ಲಿನ ಕುಪ್ಪಾಶಾಸ್ತ್ರಿಗಳ ಮನೆ. ಅವರ ಹೆಂಡತಿ ಬಹಿಷ್ಠೆಯಾಗಿದ್ದುದರಿಂದ
ಕೊಟ್ಟಿಗೆಯಲ್ಲಿ ದನ ಕಟ್ಟೆದ ಸ್ಥಳಕ್ಕೆ ಸಮೀಪದಲ್ಲಿ ಮಲಗಿದ್ದಳು. ಅವಳು
ಸೊಂಟದಲ್ಲಿ ಒಂದು ಕರಿ ಬಟ್ಟೆಯನ್ನು ಕಟ್ಟಿಕೊಂಡಿದ್ದಳು. ಆ
ಮನೆಯಲ್ಲಿ ಒಂದು ನೊಣಾಮರವಿತ್ತು. ಆ ಮರದಲ್ಲಿ ಒಂದು ಪಿಶಾಚಿ
ಇತ್ತೆಂದು ಊರಲ್ಲೆಲ್ಲ ಪ್ರಸಿದ್ಧವಾದ ವಾರ್ತೆ. ಆಕೆ ಆಮರದಡಿಯಲ್ಲಿ ಮಲಗಿ
ಕೊಂಡಿದ್ದಾಗ ಇಬ್ಬರು ಕಳ್ಳರು ದನವನ್ನು ಎತ್ತಿಕೊಂಡು ಹೋಗಲು ಆ

ಮನೆಯ ಗೋಡೆಯನ್ನು ಹತ್ತಿ ಒಳಗೆ ಧುಮ್ಮಿಕ್ಕಿ ದನವನ್ನು ಕದ್ದು ಹೊರಗೆ ಹೋಗುವ ಸಮಯದಲ್ಲಿ ಆ ಹೆಂಗಸು ಎಚ್ಚರ ಗೊಂಡಳು. ತಠಾರನೆ ಎದ್ದು ಎದೆ ಎದೆ ಬಡಿದುಕೊಳ್ಳುತ್ತ 'ರಣಪಾತಕಾ ! ರಣಪಾತಕಾ !' ಎಂದು ಕೂಗಿಕೊಂಡಳು. ಆ ಕಳ್ಳರು ಆ ಕಗ್ಗತ್ತಲೆಯ ರಾತ್ರಿಯಲ್ಲಿ ಅವಳನ್ನೂ ಅವಳ ಕಪ್ಪು ಬಟ್ಟೆಯನ್ನೂ ನೋಡಿ, "ಅಯ್ಯೋ, ನೋಣಾವಮರದ ಪಿಶಾಚಿಯೋ! ಪಿಶಾಚಿಯೋ!" ಎಂದು ಭೀತಿಯಿಂದ ಅರಚಿಕೊಂಡು, ಹಿಡಿದ ದನವನ್ನುಬಿ ಟ್ಟು ಬಿಟ್ಟು, ಕೆಳಗೆ ಧುಮ್ಮಿಕ್ಕಿ, ಬಿದ್ದು ಎದ್ದು, "ಪ್ರಾಣ ಉಳಿದುದು ದೇವರ ದಯೆ" ಎಂದು ಓಡಿಯೇ ಬಿಟ್ಟರು.

ಮುತ್ತುಸ್ವಾಮಿ ಅಯ್ಯರು ಬಂದ ಕೂಡಲೆ, ಕುಪ್ಪುಶಾಸ್ತ್ರಿಗಳು ನಡೆದುದೆಲ್ಲವನ್ನು ಹೇಳಿದರು. ಎಲ್ಲರೂ ನಕ್ಕರು. ಈ ವಿನೋದವನ್ನು-ಕಮಲಾಂಬಾಳಿಗೆ ಹೇಳಬೇಕೆಂದೆಣಿಸಿ ಮುತ್ತುಸ್ವಾಮಿ ಅಯ್ಯರ್ ಮನೆಗೆ ಹಿಂತಿರುಗುತ್ತಿರಲು, ಅವರ ತಮ್ಮ ಸುಬ್ರಹ್ಮಣ್ಯ ಅಯ್ಯರ್ "ಕಳ್ಳ ! ದನ ! ನಗಗಳ ಕಳ್ಳ" ಎಂದು ಕೂಗುತ್ತ ವೇಗವಾಗಿ ಎದುರಿಗೆ ಬಂದರು. ಅವರನ್ನು ನೋಡಿ ನಡೆದ ಸಂಗತಿಯನ್ನು ಕೇಳಲು, ಪೊನ್ನಮ್ಮಾಳ ನಗಗಳೂ, ನಗದಾಗಿ ಐನೂರು ರೂಪಾಯಿ, ಒಂದು ಜೊತೆ ದನ, ಹೊಸದಾಗಿ ಕೊಂಡ ಒಂದು ಜೊತೆ ಎತ್ತುಗಳೂ, ಇವೆಲ್ಲವನ್ನು ಕಳ್ಳರು ತೆಗೆದುಕೊಂಡು ಹೋಗಿ ಬಿಟ್ಟರೆಂದು ಹೇಳಿದರು. ಇದನ್ನು ಹೇಳಿ ಮುಗಿಸುವುದರೊಳಗೆ, "ಬೆಂಕಿ ! ಬೆಂಕಿ !" ಎಂಬ ಒಂದು ಗಟ್ಟಿಯಾದ ಧ್ವನಿ ಎದ್ದಿತು. ಎಲ್ಲರೂ ಬೆಚ್ಚಿಬಿದ್ದು ತಿರುಗಲು, ಸುಬ್ರಹ್ಮಣ್ಯ ಅಯ್ಯರವರ ದೊಡ್ಡ ಹುಲ್ಲಿನ ಬಣಬೆಯೊಂದು ಬೆಂಕಿ ಹೊತ್ತಿ ಉರಿಯುತ್ತಿದ್ದುದನ್ನು ಕಂಡಳು. ಆ ಬಣಬೆ ಸುಮಾರು ನಾಲ್ಕು ಆನೆಯಷ್ಟು ಎತ್ತರವಿತ್ತು. ಬೆಟ್ಟದಂತಹ ಆ ಬಣಬೆಯಲ್ಲಿ ಬೆಂಕಿ ಬಿದ್ದು ಉರಿದುದು ತಿರುವಣ್ಣಾಮಲೆಯ ಕಾರ್ತಿಕ ದೀಪದಂತೆ ಬಹಳ ಹೊತ್ತು ಪ್ರಕಾಶವನ್ನು ಬೀರಿತು. ಕತ್ತಲೆಯ ರಾತ್ರಿಯಲ್ಲಿ ಆ ಬೆಳಕು ಭಯಂಕರವಾಗಿಯೂ ಇತ್ತು. ಆ ಸಮಯಕ್ಕೆ ಒಂದು ದೊಡ್ಡ ಗಾಳಿ ಊರಿನ ಕಡೆ ಬೀಸಲಾರಂಭಿಸಿತು. ಬೆಂಕಿಯ ಕಿಡಿಗಳು, ಆಕಾಶದಲ್ಲಿ ಎಲ್ಲ ಕಡೆ ಸಂಚರಿಸಲಾರಂಭಿಸಿದುವು. ಆ ಊರೆಲ್ಲ ಅಗ್ನಿ ಭಗವಾನನಿಗೆ ಹವಿರ್ಭಾಗವಾಗುವಂತಿತ್ತು.

ಗಾಳಿಯೂ ಬೆಂಕಿಯೂ ಊರನ್ನು ಸೂರೆಗೊಳ್ಳಲು ಸಿದ್ಧವಾಗಿದ್ದುವು. ದೊಡ್ಡ ದೊಡ್ಡ ಉರಿಯುವ ಪಂಜುಗಳು ಗುಂಪುಗುಂಪಾಗಿ ಎಲ್ಲ ಕಡೆಗಳಲ್ಲಿಯೂ ಹಾರುತ್ತ "ಮನೆ ಎಲ್ಲಿ ? ಮನೆ ಎಲ್ಲಿ ?" ಎಂದು ಬಹಳ ಆತುರದಿಂದ ಹುಡುಕುತ್ತ ಕಾಲದೂತರಂತೆ ಹೊರಟು ಉಲ್ಕಾಪಾತಗಳಂತೆ ಬಿದ್ದುವು. ಊರಲ್ಲೆಲ್ಲ, ಗಂಡು ಹೆಣ್ಣು ಬೊಬ್ಬೆ ಹಾಕುತ್ತ ಎದ್ದು ಓಡಾಡಿದರು. ಮುದುಕಿಯರೆಲ್ಲರೂ "ಎಲೆ ! ಪಾಪಿ ! ಹೀಗೆಯೂ ಉಂಟೆ ?" ಎಂದು ಕೆನ್ನೆಯ ಮೇಲೆ ಬೆರಳನ್ನಿಟ್ಟುಕೊಂಡು ಆಶ್ಚರ್ಯವನ್ನು ಸೂಚಿಸಿದರು. ಮುದುಕರು "ಚಂಡಾಳ, ಹೊಲೆಯ ಹುಡುಗರು ! ಊರು ಕೆಟ್ಟುಹೋಯಿತು. ಅನರ್ಥವಾಯಿತು" ಎಂದು ಅಬ್ಬರಿಸಿದರು. ಅರ್ಧ ನಿದ್ರೆಯಲ್ಲಿ ಎಚ್ಚರಗೊಂಡ ಹುಡುಗರು ಏನೂ ತಿಳಿಯದೆ ಭ್ರಮಿಸಿ ನಿಂತರು. ಸ್ತ್ರೀಯರು ಆ ಕಿಡಿಗಳು ಅಲ್ಲಲ್ಲಿ ಹಾರಾಡುವುದನ್ನು ಕಂಡು, ತಾವೂ ಅರಚಿಕೊಳ್ಳುತ್ತ ಚಲ್ಲಾಪಿಲ್ಲಿಯಾಗಿ ಓಡಿದರು. ಗಂಡಸರಲ್ಲಿ ಕೆಲವರು ಸಮೀಪದಲ್ಲಿರುವ ಹುಲ್ಲು ಹೊದಿಸಿದ ಮನೆಗಳಿಗೆ ಅಭಿಷೇಕವನ್ನು ಮಾಡಿದರು. ಕೆಲವರು ಎದುರಿಗೆ ಬರುತ್ತಿದ್ದ ಉರಿಯುವ ಪಂಜುಗಳನ್ನು ಎದುರಿಸಿ ದೊಣ್ಣೆ ಹಿಡಿದು ಯುದ್ಧಮಾಡಿ ಕೊಂದರು. ಕೆಲವರು ಅವಸರ ಅವಸರವಾಗಿ ಹೊರೆಗಳನ್ನು ಕಿತ್ತುತೆಗೆದು ಎಸೆದು ಹರಡಿದರು. ಹೀಗೆ ಊರೆಲ್ಲ ಅಲ್ಲೋಲ ಕಲ್ಲೋಲವಾಗುತ್ತಿರಲು ಒಳ್ಳೆಯ ಸಮಯ, ಗಾಳಿ ಶಾಂತವಾಯಿತು. ಕಿಡಿಗಳ ಹಾರಾಟ ಕಡಮೆ ಆಯಿತು. ಅಗ್ನಿ ಜ್ವಾಲೆ ಇಳಿಯಿತು. ಹುಲ್ಲು ಮೆದೆಯ ಮೇಲ್ಭಾಗ ಕರಗಿ ಹೋದುದರಿಂದ ಕಿಡಿಗಳ ಹಾರಾಟ ನಿಲ್ಲಲು ಮುಖ್ಯ ಕಾರಣವಾಯಿತು.

ಸುಬ್ರಹ್ಮಣ್ಯ ಅಯ್ಯರ್ ತಕ್ಕ ಮಟ್ಟಿಗೆ ಶ್ರೀಮಂತರು. ಆದರೂ ಒಂದು ರಾತ್ರಿಯಲ್ಲಿ ಐದು ಸಾವಿರ ರೂಪಾಯಿ ಇದ್ದಕ್ಕಿದ್ದಂತೆ ಕೈಬಿಟ್ಟು ಹೋದರೆ ಯಾರು ತಾನೆ ದುಃಖ ಪಡಲಾರರು ? ಅವರ ಮನೆಯಲ್ಲಿಯೇ ಕಳ್ಳತನವಾಗಿ, ಅವರ ಹುಲ್ಲು ಮೆದೆಯಲ್ಲಿಯೇ ಬೆಂಕಿ ಬಿದ್ದುದರಿಂದ ಅವರಿಗೆ ವಿರೋಧಿಗಳಾದವರು ಯಾರೋ ಆ ಕೆಲಸವನ್ನು ಮಾಡಿರಬೇಕೆಂದು ಕೆಲವರು ಸಂದೇಹಗೊಂಡರು. ಮತ್ತೆ ಕೆಲವರು, ಕಳ್ಳರು ಕದ್ದ ನಂತರ ಯಾರಾದರೂ ಅಟ್ಟಿಕೊಂಡು ಬರುವರೆಂದೆಣಿಸಿ, ಅದನ್ನು ತಡೆಯಲು ಬೆಂಕಿ ಇಟ್ಟ

ಸುವರೆಂದೂ, ಬೇರೆ ವಿರೋಧಿಗಳು ಯಾರೂ ಇಲ್ಲವೆಂದೂ ಹೇಳಿಕೊಂಡರು. ಕೆಲವರು ಕೂಡಲೇ ಕಳ್ಳರನ್ನು ಹುಡುಕಬೇಕೆಂದು ಹೇಳಿದರು. ಕೆಲವರು ಪೇಯಾಂಡಿ ದೇವನ್ ಎಂಬ ಮುಟ್ಠಾಳನೇ ಈ ಕಾರ್ಯವನ್ನು ಮಾಡಿರಬೇಕು ಎಂದು ಹೇಳಿದರು. ಕೆಲವರು, "ಅವನೂ ಅಷ್ಟು ಧೈರ್ಯ ಮಾಡಲಾರ! ದಕ್ಷಿಣ ದೇಶದ ಕಳ್ಳರೇ ಇರಬೇಕು. ಅವರೇ ಹೀಗೆಲ್ಲ ಮಾಡಿದವರಾಗಿರಬೇಕು. ಇಲ್ಲವಾದರೆ ಕೋಮಲ ನಾಯಕನೂರಿನ ಜಮೀನುದಾರನ ಆಳುಗಳಾಗಿರಬೇಕು" ಎಂದರು. ಹೀಗೆ ಹಲವರು ಹಲವಿಧವಾಗಿ ಮಾತಾಡುತ್ತಿರಲು ಯಾರೋ ಆಳುಗಳು ಓಡಿ ಓಡಿ ಬರುವ ಶಬ್ದ ಕೇಳಿ ಬಂತು. ಕೂಡಲೆ ಎಲ್ಲರೂ ಬೆಚ್ಚಿಬಿದ್ದು ತಿರುಗಿ ನೋಡಲು, ಗುಂಪು ಸೇರಿರುವ ಸ್ಥಳಕ್ಕೆ ಇಬ್ಬರು ಬಹಳ ವೇಗವಾಗಿ ಓಡಿ ಬರುವುದನ್ನು ಕಂಡರು.

## ೧೩. ಕತ್ತಲೆಯ ರಾಜ

ಆ ಮನುಷ್ಯರು ವೇಗ ವೇಗವಾಗಿ ಓಡಿಬಂದುದರಿಂದ ಉಸಿರು ಮೇಲೆ ಕೆಳಗಾಗಿ ಎರಡು ನಿಮಿಷಗಳವರೆಗೆ ಏನೂ ಮಾತಾಡಲಾಗದವರಾದರು. ಅವರು ಬಾಯಿ ತೆಗೆದು ಬಂದ ಕೆಲಸವನ್ನು ಹೇಳುವವರೆಗೂ ಅಲ್ಲಿದ್ದವರ ಜೀವಗಳು ಅವರ ವಶದಲ್ಲಿರಲಿಲ್ಲ. ಕೊನೆಯಲ್ಲಿ, ಸುಬ್ರಹ್ಮಣ್ಯ ಅಯ್ಯರ ಮನೆಯಲ್ಲಿ ಕದ್ದವನು ಪೇಯಾಂಡಿ ದೇವನೇ ಎಂದೂ, ಅವನು ಹೋಗುವ ಹಾದಿಯಲ್ಲಿ ಶಿರುಕುಳಕ್ಕೆ ಆರು ಮೈಲಿಗೆ ಆಚೆ ಇರುವ ಕಲ್ಲಾಪಟ್ಟಿ ಶ್ಯಾನುಭೋಗ ಕುಪ್ಪಾ ಪಿಳ್ಳೆ ಅವರ ದನದ ಗುದುತನ್ನು ಹಿಡಿದು ಆಳುಗಳನ್ನು ಕೂಡಿಸಿಕೊಂಡು ಪೇಯಾಂಡಿ ದೇವನನ್ನು ಅಡ್ಡಗಟ್ಟುತ್ತಿದ್ದಾರೆಂದೂ, ಮುತ್ತುಸ್ವಾಮಿ ಅಯ್ಯರನ್ನು ಪೋಲೀಸಿನವರೊಡನೆ ಕರೆದುಕೊಂಡು ಬರುವಂತೆ ಕುಪ್ಪಾ ಪಿಳ್ಳೆ ಹೇಳಿರುವರೆಂದೂ, ಅನೇಕ ಅಡ್ಡಮಾತುಗಳು, ಪ್ರಶ್ನೆ, ಉತ್ತರ ಆಕ್ಷೇಪಣೆ, ಸಮಾಧಾನ — ಇವುಗಳೆಲ್ಲ ನಡೆದಮೇಲೆ ವ್ಯಕ್ತವಾಯಿತು. ಕೂಡಲೆ, ಕೆಲವರು ಪೇಯಾಂಡಿ ದೇವನೇ--- ನಾನು ಆಗಲೇ ಹೇಳಿದನಲ್ಲಾ!

ಬೇರೆಯಾರು ಇಷ್ಟು ಧೈರ್ಯವಾಗಿ ಕೆಲಸ ಮಾಡುವರು?" ಎಂದರು. ಕೆ
ವರು— "ಭೇಷ್! ಪೇಯಾಂಡಿ ದೇವನ್ ಸಿಕ್ಕಿಬಿದ್ದಿದಾನಪ್ಪಾ!" ಎಂದರು.

ಪೇಯಾಂಡಿ ದೇವನೆಂಬುವನು ಬಹಳ ಪ್ರಸಿದ್ಧನಾದ ಕಳ್ಳ. ಆ ಪ್ರದೇಶ
ಕಳ್ಳರೆಲ್ಲರಿಗೂ ಅವನೇ ಅಧಿಪತಿ. ಅವನು ಕಹಳೆಯನ್ನು ಊದಿದರೆ ಆಯಿತು
ಅರ್ಧ ನಿಮಿಷದಲ್ಲಿ ಸಾವಿರ ಜನರ ಗುಂಪು, ಅವನ ಆಳುಗಳ ಪಡೆ, ಸೇರು
ವುದು. ಅವನು ವಯಸ್ಸಿನಲ್ಲಿ ಚಿಕ್ಕವನು. ಆದರೂ ಅವನ ದೃಢ ಚಿತ್ತವೂ
ಸ್ಥೈರ್ಯವೂ, ವಿಶಾಲ ಬುದ್ಧಿಯೂ, ದೊಡ್ಡ ಗುಣವೂ, ಪರಾಕ್ರಮವೂ
ವಾಕ್ಚಾತುರ್ಯವೂ, ಅವನ ಅಮಿತವಾದ ಚಟುವಟಿಕೆಯೂ, ಉತ್ಸಾಹವೂ
ಗಂಭೀರವಾದ ಆಕೃತಿಯೂ, ಕಾರುಣ್ಯ ತುಂಬಿದ ಅಂತಃಕರಣವೂ, ಅ
ನಿಗಿಂತಲೂ ವಯಸ್ಸಿನಲ್ಲಿ ಎಷ್ಟೋ ದೊಡ್ಡವರಾದ ಕಳ್ಳರನ್ನೂ ಸಹ ಅ
ನಿಗೆ ನಾಯಿಗಳಂತೆ ಗುಲಾಮರನ್ನಾಗಿ ಮಾಡಿದ್ದೇ ಅಲ್ಲದೆ ಅವನ ವಿಷಯ
ದಲ್ಲಿ ಅವರಿಗೆ ಭಯವೂ, ಪ್ರೀತಿಯೂ ಏಕಕಾಲದಲ್ಲಿ ಹುಟ್ಟುವಂತೆ ಮಾ
ದುವು. ಅವರಿಗೆ ಇವನ ಮಾತು ಆಜ್ಞೆ; ಇವನು ಹೇಳಿದುದೇ ವೇದವಾಕ್ಯ

ಪೇಯಾಂಡಿ ದೇವನ ವಿಸ್ತಾರವಾದ ಪಟ್ಟದ ಹೆಸರು— ರಾಜಗಂಭೀ
ವೀರಮಾರ್ತಾಂಡ ಶಂಗಲಿ ವೀರಪ್ಪ ಪೇಯಾಂಡಿ ದೇವರವರು. ಕಪ್ಪಗೆ
ದಪ್ಪವಾಗಿದ್ದ ಅವನ ರೂಪವೂ, ಕಲ್ಲನ್ನು ಕಡೆದು ಮಾಡಿದಂತಿದ್ದ ಚಲ್ಲ
ವನ್ನು ಧರಿಸಿದ್ದ ಅವನ ತೊಡೆಗಳೂ, ಆನೆಯ ಸೊಂಡಿಲಿನಂತೆ ದಪ್ಪವಾ
ಗಿದ್ದ ಅವನ ಕೈಗಳೂ, ಪರ್ವತದಂತೆ ಗಟ್ಟಿಯಾಗಿ ಬೆಳೆದು ವಿಶಾಲವಾದ
ಅವನ ಎದೆಯೂ, ಕುರಿಯ ಕೋಂಬಿನಂತೆ ಸುರುಳಿಕೊಂಡಿದ್ದ ಅವನ ಮೀ
ಗಳೂ, ಧೃಢ ಚಿತ್ತವನ್ನು ಹೊರಸೂಸುವಂತಿತ್ತು. ಒಳಗೆ ಅಡಗಿರುವ
ಅವನ ತುಟಿಗಳೂ, ಅವನ ಚೂಪಾದ ಮೂಗೂ, ಕುಗ್ಗಿದ್ದ ಗಡ್ಡ ಪ್ರದೇ
ಶವೂ, ನೋಡುವವರನ್ನು ಕಲಕಿಸುವ ಗಂಭೀರವಾದ ನೋಟವೂ, "ಇವನೇ
ವೀರಪ್ರತಾಪನು! ಇವನೇ ವೀರಪ್ರತಾಪನು!" ಎಂದು ಎಡೆಬಿಡದೆ ಮೌನ
ವಾಗಿ ಪ್ರಕಟಿಸುವಂತಿತ್ತು. ಅವನ ಹುಬ್ಬುಗಳೆರಡೂ ವೀರಲಕ್ಷ್ಮಿಗಾಗಿ
ಮಾಡಿದ್ದ, ಬಿಲ್ಲಿನಂತೆ ಬಾಗಿದ್ದ ಮಂಟಪ ದ್ವಾರಗಳಿಂತಿದ್ದವು. ಅವನ ಕಣ್ಣು
ಗಳು ಅವನ ಜೊತೆಯಲ್ಲಿದ್ದವರ ಪ್ರಾಣವನ್ನೂ ಬುದ್ಧಿಯನ್ನೂ ಆಕರ್ಷಿಸಿ

ದ್ದುವು. ಆದರೆ ಅವನು ಸಂತೋಷವಾಗಿದ್ದ ಸಮಯದಲ್ಲಿ ಮುಗುಳ್ನಗೆಯಿಂದ ಕೂಡಿದ ಅವನ ತುಟಿಗಳೂ, ಶಾಂತ ಸ್ವರೂಪವನ್ನು ತಾಳಿ ಪ್ರಕಾಶಿಸುವ ಕಣ್ಣುಗಳೂ, ಅವನ ಮುಖಕ್ಕೆ ಒಂದು ಅದ್ಭುತವಾದ ವಶೀಕರಣ ಶಕ್ತಿಯ ನ್ನೊದಗಿಸಿದ್ದುವು. ಅವನು ಸಕ್ರಮವಾಗಿ ಮದುವೆ ಮಾಡಿಕೊಂಡ ಹೆಂಡತಿ ಯರು ಹದಿಮೂರು ಜನ. ಅಕ್ರಮವಾಗಿ ಅನುಭವಿಸಿದ ಸ್ತ್ರೀಯರು ಅನೇಕ. ಎಂಹದ ಮರಿಯಂತಿದ್ದ ಈ ರಾಜಕುಮಾರನ ಹೆಸರನ್ನು ಕೇಳಿದರೆ ಆ ಪ್ರದೇಶದಲ್ಲಿ ಅಳುವ ಮಕ್ಕಳೂ ಬಾಯನ್ನು ಮುಚ್ಚಿಕೊಳ್ಳುವುವು.

ಸುಬ್ರಹ್ಮಣ್ಯ ಅಯ್ಯರ ಮನೆಯಲ್ಲಿ ಅವನು ಕದಿಯಲು ಕಾರಣ-ವೇನೆಂದರೆ, ಕೆಲವು ದಿನಗಳ ಹಿಂದೆ ಶಿರುಕುಳದಲ್ಲಿ ಬಹು ದೊಡ್ಡ ದನಗಳ ಉತ್ಸವ (ಸ್ಪರ್ಧೆ) ಆಯಿತು. ಅದರಲ್ಲಿ ಸುಮಾರು ಒಂದು ಸಾವಿರ ದನ ಗಳಿರಬಹುದು. ಅದರ ಏರ್ಪಾಡೆಲ್ಲ ಸುಬ್ರಹ್ಮಣ್ಯ ಅಯ್ಯರವರದೇ. ವಸ್ತ್ರ ಕೂ, ಕರುಪಣ್ಣ ಸ್ವಾಮಿಯ ಪೂಜೆ ಮೊದಲಾದ ಎಲ್ಲ ವೆಚ್ಚಗಳನ್ನೂ ಅವರೇ ವಹಿಸಿದರು. ಸುಬ್ರಹ್ಮಣ್ಯ ಅಯ್ಯರು ಮನೆಯಲ್ಲಿ ಪೊನ್ನಮ್ಮಾಳನ್ನು ನೋಡಿ ಹೆದರಿಕೊಂಡರೂ, ಹೊರಗೆ ಉತ್ಸಾಹಪ್ರಿಯರು. ಅವರು ಹೊಸದಾಗಿ ನಾಲ್ಕುನೂರು ರೂಪಾಯಿ ಕೊಟ್ಟು ಒಂದು ಜೋಡಿ ರುಮಾಲು ಕಟ್ಟೆ ತ್ತನ್ನು ಕೊಂಡಿದ್ದರು. ಅದುವರೆಗೂ ಆ ಪ್ರದೇಶದಲ್ಲಿ ಪ್ರಸಿದ್ಧವಾಗಿದ್ದುದು ಪಕ್ಕದಲ್ಲಿದ್ದ ಕೋಮಲನಾಯಕನೂರಿನ ಜಮೀನುದಾರರ ಹೋರಿ. ಅದನ್ನೂ ಸುಬ್ರಹ್ಮಣ್ಯ ಅಯ್ಯರವರ ಹೊಸ ಹೋರಿಯನ್ನೂ ಸ್ಪರ್ಧೆಯಲ್ಲಿ ಬಿಟ್ಟು ನೋಡಬೇಕೆಂದು ಆ ಉತ್ಸವ ಅವರಿಂದ ಏರ್ಪಾಡಾಗಿತ್ತು. ಡಂ ಡಂ ಡಂ ಡಂ ಎಂದು ಶಬ್ದಮಾಡುವ ಹೊಲೆಯರ ತಮಟೆಗಳಿಂದಲೂ, 'ಭೂಂ' 'ಭೂಂ' 'ಭೂಂ' ಎಂದು ಮೊಳಗುವ ಕೊಂಬುವಾದ್ಯಗಳೊಡನೆಯೂ ಅರಳಿ ಮರದ ಅಡಿಯಲ್ಲಿದ್ದ ಕರುಪಣ್ಣ ದೇವರ ಗುಡಿಯಲ್ಲಿ ಹಣ್ಣು, ಕಾಯಿ ನೈವೇದ್ಯ ವಾದ ನಂತರ, ಆ ಗುಡಿಯಿಂದ ವಾದ್ಯ ಸಮೇತ ಮುಖ್ಯವಾಗಿ ಮೂವತ್ತು ಹೋರಿಗಳು, ಎರಡು ಪಕ್ಕಗಳಲ್ಲಿಯೂ ಹಗ್ಗಗಳನ್ನು ಕಟ್ಟಿ ಮಾಲೀಕರು ದೂರ ದಿಂದ ಭಯ ಭಕ್ತಿಯೊಡನೆ ಹಿಡಿದು ಸಾಗುತ್ತ, ನಂದಿಬಟ್ಲು ಮುಂತಾದ ಪುಷ್ಪಗಳ ಮಾಲೆಗಳನ್ನು ಕತ್ತಿನ ತುಂಬ ಧರಿಸಿ, ಗೆಜ್ಜೆ ಮುಂತಾದ ಸರ

ಗಳಿಂದ ಅಲಂಕರಿಸಲ್ಪಟ್ಟು 'ಘಳೀರ್' 'ಘಳೀರ್' ಎಂದು ಅರಣ್ಯದೊಳ
ಪ್ರವೇಶ ಮಾಡಿದುವು. ಸ್ವಲ್ಪ ಹೊತ್ತಿಗೆಲ್ಲ ಎತ್ತುಗಳು ತಮ್ಮ ಅಂತಸ್ತಿ
ತಕ್ಕಂತೆ ಸ್ಪರ್ಧೆಗೆ ನಿಲ್ಲಿಸಲ್ಪಟ್ಟುವು. ಕೊನೆಯಲ್ಲಿ "ಬಂತಯ್ಯ, ಜಮೀನ
ದಾರರ ಹೋರಿ ಬಂತಯ್ಯ" ಎಂದು ದೊಡ್ಡ ಕೋಲಾಹಲದೊಡನೆ ಕೊಂಬ
ಕಹಳೆ ಭೇರಿ ನಿನಾದಗಳೊಡನೆ, ಕಿವಿಯಲ್ಲಿ ಓಲೆಯನ್ನೂ, ಕತ್ತಿನಲ್ಲಿ ಒಡ್ಯಾಣ
ವನ್ನೂ ಧರಿಸಿಕೊಂಡು, ಹೂವಮಾಲೆಗಳಿಂದಲೂ ಗೆಜ್ಜೆಯ ಸರಗಳಿಂದಲೂ
ನಿಬಿಡವಾಗಿ ಅಲಂಕೃತವಾಗಿ ಮದದಿಂದ ಓಲಾಡುತ್ತ ಗಂಭೀರವಾದ ಒಂದು
ಋಷಭವು ಹೊರಟಿತು. ಕಣದಿಂದ ಹೊರಟು ಸ್ವಲ್ಪ ದೂರ ಹೊರಡುವುದಕ್ಕೆ
ಮೊದಲೇ ಪ್ರಾಣದ ಮೇಲೆ ಆಸೆಯನ್ನು ತೊರೆದ ಕೆಲವು ರಾಕ್ಷಸ ಹುಡುಗರು
ಸುಬ್ರಹ್ಮಣ್ಯ ಅಯ್ಯರಿಂದ ಮೊದಲೇ ಕೆಣಕಿಸಲ್ಪಟ್ಟವರಾಗಿ ಅದರ ಮೇಲೆ
ಹಾಯ್ದರು. ಹಾಯ್ದಕೂಡಲೆ ಮನುಷ್ಯನ ಸ್ಪರ್ಶವನ್ನು ಕಾಣದ ಆ
ಹೋರಿ ಬಹು ರೋಷದಿಂದ ಗುಭೀರೆಂದು ಎದ್ದು ಫಳಫಳವೆಂದು ಮಿಂಚಿ
ನಂತೆ ಪ್ರಕಾಶಿಸುತ್ತಿದ್ದ ಚೂಪಾದ ಕೊಂಬುಗಳನ್ನು ಎರಡು ಕಡೆಗಳಲ್ಲಿಯೂ
ಬೀಸುತ್ತ ನಾಲ್ಕೈದು ಜನರನ್ನು ತಿವಿದು ಹಾಕಿತು. ಹೀಗೆ ಮಾಡಿದರೂ
ಇತರರು ಅದರ ಹಗ್ಗಗಳನ್ನು ಬಿಡದೆ ಹಿಡಿದುಕೊಂಡು, ಮುಳ್ಳು ಬೇಲಿಗಳ
ಮೇಲೆಯೂ, ಗೋಡೆಗಳ ಮೇಲೆಯೂ ಅಲಕ್ಷ್ಯವಾಗಿ ಹಾಯುತ್ತಿದ್ದ ಆ
ಹೋರಿಯೊಡನೆ ತಾವೂ ಹಾಯ್ದು ಅದರ ಕತ್ತಿಗೆ ಕೈಯನ್ನು ಹಾಕಿದರು.
ಕೂಡಲೇ ದೊಡ್ಡ ಗುಂಪು ಸೇರಿತು. ಹೋರಿ ಕೆಳಗೆ ಬೀಳಿಸಲ್ಪಟ್ಟಿತು. ಜಮೀನು
ದಾರರ ಆಳುಗಳೆಲ್ಲರೂ ಜಗಳವಾಡಿಯೂ ಜಗ್ಗದೆ ಸುಬ್ರಹ್ಮಣ್ಯ ಅಯ್ಯರವರ
ಆಳುಗಳು "ಬಿಡಲಾರೆವು" ಎಂದು ಹೇಳಿ, ಆ ಹೋರಿಯ ಓಲೆ, ಒಡ್ಯಾಣ,
ವಸ್ತ್ರ ಮೊದಲಾದ ಆಭರಣಗಳನ್ನೆಲ್ಲ ಕಸಿದುಕೊಂಡು ಅದನ್ನು ಅಟ್ಟಿಬಿಟ್ಟರು.
ಇದುವರೆಗೂ ಒಂದು ದಿನವಾದರೂ ಸಿಕ್ಕದಿದ್ದ ಆ ಹೋರಿಯನ್ನು
ಸುಬ್ರಹ್ಮಣ್ಯಅಯ್ಯರವರ ಆಳುಗಳು ಹಿಡಿದುದನ್ನುಕಂಡು ಜಮೀನುದಾರರಿಗೆ
ಬಹಳ ಕೋಪ ಬಂತು. ಅವರು ತನ್ನ ಸಮೀಪದಲ್ಲಿ ಒಂದೇ ಚಾಪೆಯ ಮೇಲೆ
ಕುಳಿತಿದ್ದ ಅಯ್ಯರನ್ನು ಬಿರುಗಣ್ಣಿನಿಂದ ನೋಡಲು, ಅವರು, "ಕೋಪಿಸಿ
ಕೊಂಡು ಏನು ಪ್ರಯೋಜನ? ನನ್ನ ಎತ್ತು ಬರಲಿದೆ. ಅದನ್ನು ನಿಮ್ಮ

ಆಳುಗಳು ಹಿಡಿಯಲಿ. ನಿನೋದ ತಾನೇ." ಎಂದು ಹೇಳಿದರು. ಕೂಡಲೆ, ಈವರೆಗೂ ಆದ ಸಂಭ್ರಮಕ್ಕಿಂತಲೂ ಹೆಚ್ಚಾಗಿ ಮೊಳಗುವ ವಾದ್ಯ ಘೋಷ ಸಮೇತ ಸುಬ್ರಹ್ಮಣ್ಯ ಅಯ್ಯರವರ ಎರಡು ಹೋರಿಗಳೂ ಒಂದೇ ಸಮ ಯಕ್ಕೆ ಹೊರಟು ಮುಂದೆ ಬಂದುವು. ಆದರೆ ಅವಕ್ಕೆ ಮನುಷ್ಯರ ಗುಂಪೆಂದರೆ ಲಕ್ಷ್ಯವಿಲ್ಲ. ಜನರು ಗುಂಪಾಗಿ ಸೇರಿದ ಸ್ಥಳದಲ್ಲಿ ಅವು ಅಲಕ್ಷ್ಯ ವಾಗಿ ಬಂದು ನಿಂತವು. ಕೆಲವರು ಹತ್ತಿರ ಹೋಗಲು ಅವರನ್ನು ಗುಬೀ ರೆಂದು ಕೊಂಬಿನಿಂದ ಕೆಡವಿ ಆಕಾಶದಲ್ಲಿ ಬಿಸುಟವು. ಜನರೂ ಆ ಹೋರಿ ಗಳನ್ನು ಹಿಡಿಯಲು ಪ್ರಯತ್ನಿಸಿದರು. ಜಮೀನುದಾರರ ಆಳುಗಳೆಲ್ಲರೂ ಧೈರ್ಯದಿಂದ ಹಿಂದಿನಿಂದ ಆ ಹೋರಿಗಳ ಬಳಿ ಹೋಗುವುದು, ಕೆರಳಿಸು ವುದು- ಮೊದಲಾಗಿ ಎಷ್ಟೋ ವಿಧದಿಂದ ತಲೆ ಕೆಳಗಾಗಿ ನಿಂತು ಸರ್ವ ಪ್ರಯತ್ನಗಳನ್ನೂ ಮಾಡಿದರು. ಕೊನೆಯಲ್ಲಿ ಕಣ್ಣು ಕಳೆದುಕೊಂಡವನು, ಕುಂಟಾದವನು, ಕೈ ಹೋದವನು- ಎಂದು ಹೇಳುವ ರೋದನಗಳೇ ಉಳಿ ದುವು. ಆದಾದ ಮೇಲೆ ಆ ಹೋರಿಗಳ ಬಳಿ ಜನರು ಸುಳಿಯುವುದನ್ನು ಬಿಟ್ಟರು. ಹತ್ತಿರ ಹೋಗಲಿಲ್ಲ. "ಡುರ್ರ್ರಿ" ಎಂದು ಯಾರಾದರೂ ಒಂದು ಸಲ ಕೂಗಿ ಕೆಣಕಿದರಾಯಿತು, ಅವು ತಿರುಗಿ ನೋಡುವುವು. ನೋಡಿದ ಕೂಡಲೆ ಎಲ್ಲರೂ ಚಲ್ಲಾಪಿಲ್ಲಿಯಾಗಿ, ಹುಲಿಯನ್ನು ಕಂಡ ಆಡುಗಳಂತೆ ಒಬ್ಬರ ಮೇಲೆ ಒಬ್ಬರು ಬಿದ್ದು ಓಡುವರು. ಸ್ವಲ್ಪ ಹೊತ್ತಿಗೆಲ್ಲ "ಡುರ್ರ್ರಿ" ಎಂಬ ಶಬ್ದವೂ ಶಾಂತವಾಯಿತು. ಆ ಎರಡು ಹೋರಿಗಳೂ ಗಂಭೀರವಾಗಿ ಎರಡು ಕಡೆಯಲ್ಲಿಯೂ ತಮ್ಮ ಕಣ್ಣುಗಳನ್ನು ಬೀರುತ್ತ ಮೆತ್ತಗೆ ಮನೆಯ ಕಡೆಗೆ ಹೊರಟವು. 'ಜಲ್ಲಿಕಟ್ಟು' (ಎತ್ತುಗಳ ಉತ್ಸವ) ಮುಗಿಯಿತು.

ಸುಬ್ರಹ್ಮಣ್ಯ ಅಯ್ಯರಿಗೆ ಆದ ಸಂತೋಷಕ್ಕೆ ಪಾರವಿರಲಿಲ್ಲ. ಮನೆಗೆ ಹೋದ ಮೇಲೆ ಪೊನ್ನಮ್ಮಾಳೊಡನೆ ತನ್ನ ಹೆಮ್ಮೆಯನ್ನು ಹೇಳಿಕೊಂಡು, ಹತ್ತಿಯ ಬೀಜವನ್ನೂ, ತವುಡನ್ನೂ ತಾವೇ ತೆಗೆದುಕೊಂಡು ಹೋಗಿ ಆ ಎತ್ತುಗಳಿಗೆ ಉಪಚಾರ ಮಾಡಿದರು. ಮನೆಗೆ ಹೋದ ಜಮೀನುದಾರರು ಬಹಳ ಕೋಪಗೊಂಡು ಸೋತುಹೋದ ತನ್ನ ಎತ್ತನ್ನು ಬರಮಾಡಿ

ಕೊಂಡು ಹೊಲೆಯರನ್ನು ಬಿಟ್ಟು ತನ್ನ ಎದುರಿನಲ್ಲಿಯೇ ಪ್ರಾಣ ಸಹಿತ ಚರ್ಮ ಸುಲಿಯುವಂತೆ ಆಜ್ಞೆ ಮಾಡಿ, ಪೇಯಾಂಡಿ ದೇವನನ್ನು ರಹಸ್ಯವಾಗಿ ಕರೆಕಳುಹಿಸಿದನು. ಅವನೊಡನೆ ಮಾತನಾಡುತ್ತ ಹೆಂಡವನ್ನು ಬಿಂದಿಗೆ ಬಿಂದಿಗೆಯಾಗಿ ಕುಡಿಯುವಂತೆ ಮಾಡಿ ಆ ಮತ್ತಿನಲ್ಲಿ ಸುಬ್ರಹ್ಮಣ್ಯ ಅಯ್ಯರ ಮನೆಯಲ್ಲಿ ಕಳ್ಳತನ ಮಾಡುವಂತೆ ಪ್ರಮಾಣ ಮಾಡಿಸಿದನು. ಪೇಯಾಂಡಿ ಮತ್ತು ಇಳಿದಮೇಲೆ ತಾನು ಮಾಡಿದ ಪ್ರಮಾಣವನ್ನು ಕುರಿತು ವಿಷಾದಗೊಂಡನು. ಮುತ್ತುಸ್ವಾಮಿ ಅಯ್ಯರ್ ಒಬ್ಬರ ವಿಷಯದಲ್ಲಿ ಅವನಿಗೆ ನಿಜವಾದ ಭಯವೂ ವಿಶ್ವಾಸವೂ ಇತ್ತು. ಆದರೆ ಪ್ರಮಾಣ ಮಾಡಿ ಬಿಟ್ಟಿರುವುದರಿಂದ ಕಳ್ಳತನ ಮಾಡಲೇಬೇಕಾಯಿತು. ಆದರೆ ಮೋಜು ಕುರ್ಚಿ ತೆಗೆದುಕೊಂಡು ಹಾಕಿ, ಬಹಿರಂಗವಾಗಿ ಕದಿಯುವ ತನ್ನ ವಾಡಿಕೆಗೆ ವಿರೋಧವಾಗಿ — ಮುತ್ತುಸ್ವಾಮಿ ಅಯ್ಯರವರ ಸಲುವಾಗಿ— ಕಳ್ಳತನದಿಂದ ಸಾಧಾರಣ ಕಳ್ಳನಂತೆ ಅಂದು ಕದಿಯಲು ಬಂದನು. ಬಂದ ಸಮಯದಲ್ಲಿ ಸುಬ್ರಹ್ಮಣ್ಯ ಅಯ್ಯರವರೂ, ಅವರ ಹೆಂಡತಿಯೂ ರಾತ್ರಿ ಬಹಳ ಹೊತ್ತು ಎಚ್ಚರವಿದ್ದುದರಿಂದ, ಮೈಮರೆತು ನಿದ್ರಿಸುತ್ತಿದ್ದರು. ಪೊನ್ನಮ್ಮಾಳ್, ಗಂಡನಿಗೆ ಔಷಧವಿಟ್ಟುದರ ಮೊದಲನೆಯ ಪರಿಣಾಮ ಅವಳಿಗೆ ಮೂರು ಸಾವಿರ ರೂಪಾಯಿಯ ಆಭರಣ ನಷ್ಟವಾಯಿತು.

ಕದ್ದುದು ಪೇಯಾಂಡಿ ದೇವನೇ ಎಂದು ಕೇಳಿದ ಮುತ್ತುಸ್ವಾಮಿ ಅಯ್ಯರಿಗೆ ಭಯವೂ ಕೋಪವೂ ಉಂಟಾದುವು. ಅವರು 'ನಮಗಿಂತಲೂ ಕೋಮಲ ನಾಯಕನೂರು ಮನುಷ್ಯ ಅವನಿಗೆ ಹೆಚ್ಚಾಗಿ ಬಿಟ್ಟನೆ! ಇರಲಿ' ಎಂದು ಹೇಳಿ ಸಬ್‌ಮ್ಯಾಜಿಸ್ಟ್ರೇಟ್ ವೈದ್ಯನಾಥ ಅಯ್ಯರವರಿಗೆ ಆಳನ್ನು ಕಳುಹಿಸಿದರು. ಪೇಯಾಂಡಿ ದೇವನನ್ನು ಹಿಡಿಯಲು ಬಹಳ ದಿನಗಳಿಂದ ಪೋಲಿಸಿನವರು ತಲೆ ಕೆಳಗಾಗಿ ಪ್ರಯತ್ನ ಮಾಡಿದರೂ ಫಲಿಸಿರಲಿಲ್ಲ. ವೈದ್ಯನಾಥ ಅಯ್ಯರ್ ದಕ್ಷರೆಂದು ಪ್ರಸಿದ್ಧರು. ಪೇಯಾಂಡಿ ದೇವನನ್ನು ಹಿಡಿದುಕೊಡುವುದಕ್ಕಾಗಿಯೇ ಅವರನ್ನು ಸರಕಾರದವರು ಮುಖ್ಯವಾಗಿ ಆ ಪ್ರದೇಶಕ್ಕೆ ಕಳುಹಿಸಿದ್ದರು. ಅವರು ಬಂದು ಎರಡು ವರ್ಷಗಳಾಗಿದ್ದರೂ ಅವನು ಅವರ ಕೈಗೆ ಸಿಕ್ಕಿರಲಿಲ್ಲ.

"ಜನರು ಪೇಯಾಂಡಿ ದೇವನನ್ನು ಹಿಡಿದು ಬಿಟ್ಟರು" ಎಂದ ಕೂಡಲೆ ಅವರು ಮೂವತ್ತು ಕಾನ್‌ಸ್ಟೇಬಲ್‌ಗಳನ್ನು ಕರೆದುಕೊಂಡು ಕುದುರೆಯ ಮೇಲೆ ಕುಳಿತು ಓಡಿ ಬಂದರು. ಅವರು ಬರುವುದರೊಳಗೆ ಮುತ್ತುಸ್ವಾಮಿ ಅಯ್ಯರ್ ಕೆಲಸಗಾರನಾದ ವೀರನನ್ನು ಕರೆದು ಬಂಡಿಯವನಿಗೆ ಹೇಳಿ ಕಳು ಹಿಸಿ ಬಂಡಿಯನ್ನು ಸಿದ್ಧಮಾಡೆಂದರು. ಬಂಡಿಯವನಾದ ಮುಕ್ಕಣ್ಣ ನಿದ್ದೆ ಮಾಡುತ್ತಿದ್ದ ಸ್ಥಳಕ್ಕೆ ಹೋಗಿ "ಮುಕ್ಕಣ್ಣಾ, ಮುಕ್ಕಣ್ಣಾ" ಎಂದು ಕೂಗಿದ. ಅನಂತರ "ಎಲೆ, ಮುಕ್ಕಾ, ಎಲೆ ಮುಕ್ಕಾ" ಎಂದು ಕರೆದು ನೋಡಿದ. ಯಾವುದಕ್ಕೂ ಉತ್ತರವಿಲ್ಲ. ಅಲ್ಲಾಡಿಸಿ ಎಬ್ಬಿಸಿ ನೋಡಿದ— ಹೊಡೆದು ನೋಡಿದ—ಎಚ್ಚರವಾಗಲಿಲ್ಲ. "ಸತ್ತು ಹೋಗಿರುವನೆಂದಾದರೆ ಉಸಿರು ತಿದಿಯಂತೆ ಆಡುತ್ತಿದೆ—ಗೊರಕೆ ಕಡೆ ಗೋಲಿನಂತೆ ಕಡೆಯು ತ್ತಿದೆ" ಎಂದು ಹೇಳುತ್ತ ಅವನ ಮೇಲೆ ಹತ್ತಿ ತುಳಿದನು. ಇವನಿಗೆ ಕಾಲು ನೋವಾಯಿತೇ ಹೊರತು ಆ ಸ್ಥಳದಲ್ಲಿನ ಯೋಗನಿಷ್ಠೆಗೆ ಯಾವ ಬದಲಾ ವಣೆಯೂ ಆಗಲಿಲ್ಲ. "ಇದೇನಪ್ಪಾ ಕುಂಭಕರ್ಣನಂತಿದ್ದಾನೆ" ಎಂದು ಹೇಳುತ್ತ ಅವನ ಕಿವಿಯ ಹತ್ತಿರ ಹೋಗಿ ಒಂದು ಗಾವುದಕ್ಕೆ ಕೇಳಿಸುವಂತೆ ಅಬ್ಬರಿಸಿ ನೋಡಿದನು. ವೀರನ ಭಗೀರಥ ಪ್ರಯತ್ನಕ್ಕಿಂತಲೂ ಮುಕ್ಕನ ನಿದ್ದೆಯ ವೈರಾಗ್ಯ ಬಲವತ್ತರವಾಗಿತ್ತು. ಕೊನೆಯಲ್ಲಿ ಅವನನ್ನು ಎತ್ತಿ ನಿಲ್ಲಿಸಿ ಗೋಡೆಯ ಮೇಲೆ ನಾಲ್ಕೈದು ಸಲ ಬಲವಾಗಿ ನೂಕಿದನು. ಒಳ್ಳೆಯ ಕಾಲ- ಯಾವ ದೇವರ ಪುಣ್ಯದಿಂದಲೋ ಸ್ವಲ್ಪ ಪ್ರಜ್ಞೆ ಬಂತು. "ಏನಯ್ಯ ದೀರ್ಘ ನಿದ್ದೆಯಲ್ಲಿ?" ಎಂದು ಹೇಳುತ್ತ ತಲೆಯನ್ನು ಕೆರೆದುಕೊಂಡು ಗೋಡೆಯ ಮೇಲೆ ವಾಲುತ್ತಿದ್ದ ಹಾಗೆಯೇ ಮುಕ್ಕ ಮತ್ತೆ ನಿದ್ರಿಸಲಾರಂಭಿಸಿದನು. ಕೂಡಲೆ ವೀರನು ಪಿಶಾಚಿ ಹೊಡೆಯುವಂತೆ ಛಳೀರೆಂದು ಹೊಡೆದು, ಊರೆಲ್ಲಾ ಕೊಳ್ಳೆಯಾಗುತ್ತಿದೆ, ನಿನಗೆ ಇನ್ನೂ ಜಾಗರ ಆಗಲಿಲ್ಲ." ಎಂದು ಹೇಳಿ ಅವನನ್ನು ಹೊರಕ್ಕೆ ಎಳೆತಂದನು. ಇಷ್ಟರಲ್ಲಿ ವೈದ್ಯನಾಥ ಅಯ್ಯರವರು ಬಂದು ಒಂದು ಘಳಿಗೆಯಾಗಿತ್ತು. ಆಮೇಲೆ ಮುಕ್ಕನು ಬಂಡಿಯನ್ನು ಹುಡುಕಿ, ಎತ್ತನ್ನು ಹುಡುಕಿ, ಪ್ರಯಾಣಕ್ಕೆ ಸಿದ್ಧ ಮಾಡಲು ಹದಾರು ಬಂಡಿಗಳೂ, ಐವತ್ತು ಅರವತ್ತು ಜನರೂ, ಪಂಜುಗಳ ಸಹಿತ

ಕಲ್ಲಾಪಟ್ಟಿ ಮಾರ್ಗವಾಗಿ ಹೊರಟರು. ಅಲ್ಲಿಗೆ ಬಂದ ಕೂಡಲೆ ಪೇಯಾಂ
ದೇವನು ಐದಾರು ಜನರನ್ನು ಗಾಯಗೊಳಿಸಿ ಬಹಳ ದೂರ ಹೋಗಿರುವರೆಂದ
ಕೇಳಿ ಎಲ್ಲರೂ ದಿಗ್ಭ್ರಾಂತರಾಗಿ ನಿಂತರು.

ಆಗ ಚೊಕ್ಕನೆಂಬ ಬೇಸಾಯಗಾರ ಅವರ ಬಳಿಗೆ ಬಂದು, "ನೀವ
ಚಿಂತಿಸಬೇಡಿ, ಪೇಯಾಂಡಿಯನ್ನು ನಾನು ಹಿಡಿದುಕೊಡುತ್ತೇನೆ" ಎಂದನು
ಅವನೇ ಜಾತಿಯಲ್ಲಿ ಕಳ್ಳನಾದುದರಿಂದ ಅವರು ಅವನ ವಿಷಯದಲ್ಲಿ ನಂಬಿ
ಯನ್ನಿಟ್ಟು, "ಹಾಗೆ ಮಾಡುವೆಯಾದರೆ ನಿನಗೆ ಒಳ್ಳೆಯ ಬಹುಮಾ
ಕೊಡುತ್ತೇವೆ" ಎಂದರು. ಶಿರುಕುಳದಲ್ಲಿ ಆ ರಾತ್ರಿಯೆಲ್ಲಾ ಯಾರಿಗೂ
ನಿದ್ದೆ ಇಲ್ಲ. ಜನರೆಲ್ಲರೂ ಪಂಜುಕಳ್ಳರ ಮಾತನ್ನೂ ಪೇಯಾಂಡಿ ದೇವನ
ಪ್ರತಾಪಗಳನ್ನೂ ಕುರಿತು ಮಾತನಾಡುತ್ತಿದ್ದರು. ಪಾಪ! ಸುಬ್ರಹ್ಮಣ್ಯ
ಅಯ್ಯರಾದರೊ ಮುತ್ತುಸ್ವಾಮಿ ಅಯ್ಯರ ಮನೆಯಲ್ಲಿಯೇ ಇರಬೆ
ಕೆಂದು ಹೇಳಿದ ಕಾರಣ ಅಲ್ಲಿಯೇ ಇರುತ್ತ ತನಗೆ ಉಂಟಾದ ಕಷ್ಟವನ್ನು
ಕುರಿತು ದುಃಖಿಸುತ್ತಿದ್ದರು. ಅವರಿಗೆ ನಗ, ಹಣ— ಇವು ನಷ್ಟವಾದ
ದಕ್ಕೆ ಅಷ್ಟು ವ್ಯಾಕುಲವಿಲ್ಲ. ಬಹಳ ಪ್ರೀತಿಯಿಂದ ಕೊಂಡ ರುಮಾಲ
ಕಟ್ಟಿದ ಹೋರಿ ಹೋದದ್ದು ಅವರ ಪ್ರಾಣದಲ್ಲಿ ಒಂದು ಭಾಗ ನಷ್ಟ
ವಾದಂತಾಗಿತ್ತು. ಮಹಾ ಮೇರು ಪರ್ವತದಂತಿದ್ದ ಅವರ ಹುಲ್ಲಿನ ಬಣಬೆ
ಅವರು ಕಣ್ಣಿನ ತುಂಬ ನೀರು ಹರಿಯುತ್ತಿದ್ದ ಹಾಗೆಯೇ ಬೂದಿಯಾಗಿತ್ತು.

## ೧೪. ಕಳ್ಳರಲ್ಲಿ ಕುಳ್ಳ

ಎರಡು ತಿಂಗಳಾದ ಮೇಲೆ ಒಂದು ಕಣಿವೆಯ ತಪ್ಪಲಿನಲ್ಲಿದ್ದ ಒಂದು
ದೊಡ್ಡ ಆಲದಮರದ ಅಡಿಯಲ್ಲಿ ಪೇಯಾಂಡಿ ದೇವನು ಹತ್ತು ಜನರ ಮಧ್ಯೆ
ಕುಳಿತಿದ್ದನು. ಹಗಲು ಸುಮಾರು ಹನ್ನೆರಡು ಗಂಟೆ. ಒಬ್ಬ ಮನುಷ್ಯನೂ
ಒಬ್ಬ ಮುದುಕಿಯೂ ಅವರ ಬಳಿ ವೇಗವೇಗವಾಗಿ ಓಡಿ ಬಂದರು. ಆ
ಮುದುಕಿ ಹತ್ತಿಯಂತೆ ಮೆತ್ತಗಾಗಿ ಜೀರ್ಣವಾದ ದೇಹವನ್ನು ಹೊತ್ತು
ಕೊಂಡು ಊಗಲಾಡುತ್ತ ಓಡಿ ಬರುತ್ತಿದ್ದ ವಿನೋದವನ್ನು ನೋಡಿ ನಗು

ತ್ತಿದ್ದ ಪೇಯಾಂಡಿ ದೇವನ ಕಾಲಮೇಲೆ ಅವರು ಬಿದ್ದರು. "ನಮ್ಮಪ್ಪಾ, ಮಹಾರಾಜಾ— ನೀನೇ ಕಾಪಾಡಬೇಕು. ನೀನೇ ಕುಲ ದೈವ" ಎಂದು ಮೊರೆಯಿಟ್ಟರು. ಪೇಯಾಂಡಿ ದೇವನು, "ನೀವು ಯಾರು? ಏನು ಸಮಾಚಾರ" ಎಂದು ಕೇಳಿದನು. ಆ ಮುದುಕಿ, "ಸ್ವಾಮಿ! ನಾನು ಬಡವಳು. ಸಾವಿರಕಾಲ ತಪಸ್ಸು ಮಾಡಿ, ಗುಡಿಗೆ ಹೋಗಿ, ಕೊಳಕ್ಕೆ ಹೋಗಿ, ಮರನನ್ನು ಸುತ್ತಿ, ಹಸುವನ್ನು ಸುತ್ತಿ, ಉಪವಾಸ ಮಾಡಿ, ಮಾಡಲಾಗದ ಪೂಜೆಯನ್ನೆಲ್ಲ ಮಾಡಿ—ಆ ಮೇಲೆ ದ್ರೌಪದೀ ದೇವಿಗೆ ಸಾಂಬ್ರಾಣಿ ದೂಪ ಹಾಕಿ, ಕರುಪ್ಪ ಸ್ವಾಮಿಗೆ ದನ ಕೊಟ್ಟು, ಕುರಿಕೊಟ್ಟು, ಕೋಳಿ ಸಮರ್ಪಿಸಿ, ಆ ಮೇಲೆ ದಾನವನ್ನು ಕೊಟ್ಟು, ಧರ್ಮಮಾಡಿ, ಬ್ರಾಹ್ಮಣರಿಗೆ ಅಕ್ಕಿಕೊಟ್ಟು— ಆಮೇಲೆ ಪಂಚಾಂಗ ದೇವರಿಗೆ ದವಸಕೊಟ್ಟು........" ಹೀಗೆ ಮಾತಿಗೆ ಮಾತನ್ನು ಸೇರಿಸಿ ಎಳೆಯುತ್ತ ಹೇಳುತ್ತಿರಲು, ಪೇಯಾಂಡಿ ದೇವನು "ಹೌದು, ಆಮೇಲೆ ಊಟಮಾಡಿ, ಆಮೇಲೆ ನಿದ್ರಿಸಿ, ಆಮೇಲೆ ಕೈತೊಳೆದು- ಏ-ಏ ಏ" ಎಂದು ಪರಿಹಾಸ್ಯಮಾಡಿ ನಗಲು ಎಲ್ಲರೂ ಫಕಫಕನೆ ನಕ್ಕರು. ಪೇಯಾಂಡಿ ದೇವನು "ಯಾರೆಂದು ಕೇಳಿದುದಕ್ಕೆ—ಇಂಥವರೆಂದು ಹೇಳಲು ಒಂದು ತಿಂಗಳಾಗುವಂತೆ ಕಾಣುತ್ತದೆಯಲ್ಲ" ಎಂದು ಹೇಳಿದನು. ಆ ಮುದುಕಿಯ ಜೊತೆಗೆ ಬಂದ ಮನುಷ್ಯನು: "ಅವಳು ಹಾಗೆಯೇ ಮಾತಾಡುತ್ತ ಹೋಗುವಳು. ಅವಳು ನನ್ನ ತಾಯಿ, ನಾನು ಅವಳ ಮಗಳ— ಅವಳು ನಮ್ಮಪ್ಪನ ಹಿರಿಯ ಹೆಂಡತಿ" ಎಂದು ಹೇಳಲು, ಅವಳು "ಇಲ್ಲ-ಇಲ್ಲ— ಇನ್ನೊಬ್ಬಳು ಇದ್ದಳು— ಅವಳೇ ಹಿರಿಯಳು— ನಾನು ಎರಡನೆಯವಳು. ನನ್ನ ಗಂಡನಿಗೂ ಅವಳಿಗೂ ಸರಿಬೀಳಲಿಲ್ಲ. ಯಾವಾಗಲೂ ಜಗಳ, ಕಲಹ, ಕಿರಿಕಿರಿ ಆಗುತ್ತಿತ್ತು, ಆಮೇಲೆ ಅವರು..." ಎಂದು ಹೇಳುತ್ತಿರಲು, "ನೀನು ಸುಮ್ಮನಿರೆ—" ಎಂದು ಅವಳನ್ನು ಆಚೆಗೆ ತಳ್ಳಿ, ಆ ಮನುಷ್ಯನು "ಇವಳು ಬಂದರೆ ಯಾವಾಗಲೂ ಹೀಗೆಯೇ ಸ್ವಾಮಿ! ಮಹಾರಾಜರೇ! ನನ್ನ ಹೆಸರು ಚೊಕ್ಕ—" ಎನ್ನುವುದರೊಳಗೆ ಅವಳು, "ಒಬ್ಬನೇ ಮಗ-ಹತ್ತು ತಿಂಗಳು ಹೊತ್ತು ಹೆತ್ತೆನು. ಅವನೂ ಸಹ ನನ್ನನ್ನು ತಿವಿದು ತಳ್ಳುತ್ತಿದ್ದಾನೆ." ಎಂದು ಹೇಳಿ "ಕುಯ್ಯೋ! ಮರ್ರೋ" ಎಂದು ಅಳಲಾರಂಭಿಸಿದಳು.

ಪೇಯಾಂಡಿ ದೇವನು ಇವರು ಏನನ್ನೂ ತಿಳಿಯದ ಬಡವರೆಂದು ಭಾವಿಸಿ ಎದ್ದು ಅವರನ್ನು ಸಮಾಧಾನಗೊಳಿಸಿ, ಸಂಗತಿಯನ್ನು ಸಾವಕಾಶವಾಗಿ ವಿಚಾರಿಸಿದ್ದರಲ್ಲಿ ಚೊಕ್ಕನೆಂಬುವನು ತಾನು ಜಾತಿಯಲ್ಲಿ ದಕ್ಷಿಣ ಸೀಮೆಯ ಕಳ್ಳನೆಂದೂ, ಕದ್ದುದಕ್ಕಾಗಿ ಸೆರೆಮನೆಯಲ್ಲಿ ಇಟ್ಟರೆಂದೂ ಅಲ್ಲಿಂದ ತಪ್ಪಿಸಿಕೊಂಡು ಓಡಿ ಬಂದುದಾಗಿಯೂ, ಪೋಲೀಸಿನವರಿಗೆ ಹೆದರಿ ಪೇಯಾಂಡಿ ದೇವನ ಪ್ರತಾಪವನ್ನು ಕೇಳಿ ಅವನ ಬಳಿ ಓಡಿ ಬಂದುದಾಗಿಯೂ ಹೇಳಿ ಅವನ ಕಾಲಿಗೆ ಬಿದ್ದು ಧಾರೆ ದಾರೆಯಾಗಿ ಕಣ್ಣೀರು ಸುರಿಸಿದನು. ಪೇಯಾಂಡಿ ದೇವನು ಅವನನ್ನು ಸಂತೈಸಿ,"ನೀನು ಭಯಪಡಬೇಡ. ನಿನ್ನನ್ನು ಕಾಪಾಡಲು ನಾನಿದ್ದೇನೆ. ನಿನಗಾಗಿ ನಾನು ಪ್ರಾಣವನ್ನು ಬೇಕಾದರೆ ಕೊಡುತ್ತೇನೆ" ಎಂದು ಕೈಮೇಲೆ ಕೈ ಇಟ್ಟು ಪ್ರಮಾಣ ಮಾಡಿದನು. ಅನಂತರ "ನಾನು ಹೋಗುವ ಜಾಗಕ್ಕೆಲ್ಲ ನಿನ್ನನ್ನು ಕರೆದುಕೊಂಡು ಹೋಗುತ್ತೇನೆ. ನಾಳೆ ರಾತ್ರಿ ಮಲ್ಲಾಪುರದಲ್ಲಿ ಕೊಳ್ಳೆಮಾಡಲು ಹೋಗುತ್ತಿದ್ದೇನೆ–ಅದನ್ನು ಕುರಿತೇ ಈಗ ಮಾತಾಡುತ್ತಿದ್ದೆವು. ನಿನ್ನನ್ನೂ ಕರೆದುಕೊಂಡು ಹೋಗುತ್ತೇನೆ. ಭಯಪಡಬೇಡ. ಬೇಕಾದಷ್ಟು ಹಣ ಸಿಗಬಹುದು. ಅಲ್ಲಿ ಕೊಳ್ಳೆ ಮಾಡಿದ ಮೇಲೆ ದೋಣಿಮಲೈ ಗುಹೆಗೆ ಬಂದು ಹೆಂಡಗಿಂಡ ಕುಡಿದು, ಮಜಾ ಮಾಡಿಬಿಡೋಣ, ಬಾ!" ಎಂದು ಹೇಳಿ— "ನಿನ್ನ ಹೆಸರೇನಯ್ಯಾ?" ಎಂದು ಕೇಳಲು, ಅವನು "ಚೊಕ್ಕ" ಎಂದನು.

ಮುತ್ತುಸ್ವಾಮಿ ಅಯ್ಯರ್ ಬಳಿಯಲ್ಲಿಯೂ ವೈದ್ಯನಾಥ ಅಯ್ಯರ್ ಬಳಿಯಲ್ಲಿಯೂ ಪೇಯಾಂಡಿ ದೇವನನ್ನು ಹಿಡಿದು ಕೊಡುವುದಾಗಿ ಹೇಳಿ ಬಂದ ಚೊಕ್ಕನೇ ಇವನು. ಅವನು ದಾರಿಯಲ್ಲಿ ಹೋಗುತ್ತಿದ್ದ ಒಬ್ಬ ಮುದುಕಿಯನ್ನು, ತನ್ನ ತಾಯಿಯೆಂದು ಜೊತೆ ಮಾಡಿಕೊಂಡು ಬಂದು, ಇಲ್ಲದ ವೇಷವನ್ನು ಹಾಕಲು ಅದನ್ನು ಅರಿಯದ ಪೇಯಾಂಡಿ ದೇವನು "ಚೊಕ್ಕಣ್ಣ! ಇಲ್ಲಿ ಬಾ! ಕೂತುಕೊ! ಭಯಪಡಬೇಡ! ಕಳ್ಳಮರಿ ಅಳುತ್ತಿದೆಯೆ! ಕೂತುಕೊ ಅಜ್ಜೀ— ಕೂತುಕೊ! ಪೋಲೀಸ್ ನಾಯಿಗಳು ಬರಲಿ– ಅವರನ್ನು ಕಟ್ಟಿಹಾಕಿ ಹೊಡೆಯುತ್ತೇನೆ" ಎಂದು ಹೇಳಿ ಚೊಕ್ಕನ ಕಣ್ಣೀರನ್ನು ತನ್ನ ಬಟ್ಟೆಯಿಂದ ಒರೆಸಿದನು. ವಂಚಕನಾದ ಚೊಕ್ಕನು ಆ

ಸಂಜೆಯೇ ಆ ಮುದುಕಿಯು ಮುಖಾಂತರ ಮಲ್ಲಾಪುರದಲ್ಲಿ ನಡೆಯಲಿರುವ ದರೋಡೆಯನ್ನೂ, ದೋಣಿಮಲ್ಲೈ ಗುಹೆ ಇರುವ ಸ್ಥಳವನ್ನೂ ಕುರಿತು ಶಿರುಕುಳಕ್ಕೆ ಸಮಾಚಾರವನ್ನು ತಲುಪಿಸಿದನು.

ಮರುದಿನ ಮಲ್ಲಾಪುರದ ದರೋಡೆ ಬಹು ಮುಂಬರದಿಂದ ನಡೆಯಿತು. ರಾತ್ರಿ ಎರಡು ಗಂಟೆಗೆ ಪೇಯಾಂಡಿ ದೇವನೂ ಚೊಕ್ಕನೂ ಮತ್ತು ಐವರೂ ದೋಣಿಮಲ್ಲೈ ಗುಹೆಗೆ ಬಂದು ಸೇರಿದರು. ಆ ಬೆಟ್ಟ ಒಂದು ದಟ್ಟವಾದ ಕಾಡಿನ ಮಧ್ಯೆ ಇತ್ತು. ಅದರ ಸುತ್ತು-ಮುತ್ತಲೂ ಮಾನವ ಸಂಚಾರವೇ ಇಲ್ಲ. ಕೊಲೆಪಾತಕರ ಮನಸ್ಸಿನಂತೆ ಬೆಂಗಾಡಾಗಿತ್ತು. ಅದರಲ್ಲಿ ತಾಯಿ ಯಂತೆ ಮಗನು ಎಂಬಂತೆ, ಪಾಪಾಸ್ ಕಳ್ಳಿಯೂ, ಕಾಡು ಕಳ್ಳಿಯೂ ಹೇರಳವಾಗಿ ಯಾವ ಅಡ್ಡಿ ಆತಂಕವೂ ಇಲ್ಲದೆ ರಾಕ್ಷಸ ರೀತಿಯಲ್ಲಿ ಬೆಳೆ ದಿತ್ತು. ಆ ಪೊದೆಗಳ ರಾಶಿಯಲ್ಲಿ ಸರ ಸರ ಶಬ್ದಮಾಡಿ ಸಂಚರಿಸುತ್ತಿದ್ದ ಸರ್ಪಗಳು ಬಳಸಿಕೊಂಡು ಓಡುತ್ತಿದ್ದುವು. ನರಿಗಳು ಹಾಡುತ್ತಿದ್ದುವು, ಪಿಶಾಚಿ ಗಳು ಆಡುತ್ತಿದ್ದುವು, ಗೂಬೆಗಳು ಮೃದಂಗ ನಾದವನ್ನು ಮಾಡುತ್ತಿದ್ದುವು, ರಣಹದ್ದುಗಳು ಆಶೀರ್ವಚನಗಳನ್ನು ಹೇಳುತ್ತಿದ್ದುವು, ತೋಳಗಳು ಉಪ ದೇಶ ಮಾಡುತ್ತಿದ್ದುವು, ಹುಲಿ ಕರಡಿಗಳು ಡೊಂಬರಾಟ ಆಡುತ್ತಿದ್ದುವು, ಈ ಸಂಭ್ರಮದ ಮಧ್ಯೆ ತಮ್ಮ ಮದುವೆ ಪ್ರಸ್ತಾದಿಗಳನ್ನು ಆ ಜೀವರಾಶಿ ಗಳು ಆಚರಿಸುತ್ತಿದ್ದುವು. ಮುಳ್ಳುಗಳು ಮತ್ತು ಮುಳ್ಳುಗಳಂತೆ ಚುಚ್ಚು ತ್ತಿದ್ದ ಕಲ್ಲುಗಳು ಇವೇ ಆ ಫಲಭರಿತವಾದ ಭೂಮಿಯ ಸಂಪದ್ವಿಶೇಷ. ಪಾಪಾಸು ಕಳ್ಳಿಗಿಡಗಳು, ಈ ಮಸಣದ ಮಧ್ಯೆ ಬೆಳೆಸು ಎಂಬ ಹೆಸರೇ ಇಲ್ಲದೆ ಒಣಗಿ ಮರಿಪಿಶಾಚಿಗಳಂತೆ ನಿಂತ ಸಣ್ಣ ಗಿಡಗಳು, ಸುತ್ತಲೂ ಆವ ರಿಸುತ್ತ, ಉರಿದ ಕಾಷ್ಟಗಳ ಬಣ್ಣದಿಂದ ಕೂಡಿ, ಬಹಳಹೊತ್ತು ಬಿದ್ದಿದ್ದ ಬಿಳುಪಾದ ಹೆಣದಂತೆ ಇದ್ದ ದೊಡ್ಡ ಜಡೆ ಮುನಿಗಳು ಒಂದನ್ನೊಂದು ನೋಡುತ್ತ ನಿಲ್ಲುವಂತೆ ಐದಾರು ಗುಡ್ಡಗಳು ಒಂದರ ಬಳಿ ಒಂದು ನಿಂತಿ ದ್ದುವು. ಆ ಅಂಧಕಾರದಲ್ಲಿ ಎಲ್ಲಕ್ಕೂ ಮಧ್ಯಭಾಗದಲ್ಲಿ ನಿಂತಿದ್ದುದು ದೋಣಿ ಮಲ್ಲೈ. ಅದು ವಂಚಕರ ಮನಸ್ಸಿನಂತೆ ಅನೇಕ ಗುಹೆಗಳಿಂದ ಕೂಡಿದ್ದಗುಡ್ಡ. ಅದರಲ್ಲಿ ಒಂದು ದೊಡ್ಡ ಗುಹೆ ಪೇಯಾಂಡಿ ದೇವನ ರಾತ್ರಿಯ ಮಹಲು.

ಅದು ಅವನ ಕಸಬಿನಂತೆ ಕತ್ತಲೆಯಾಗಿತ್ತು. ಅದರ ಬಾಗಿಲ ಸುತ್ತಲೂ ಗಿಡಗಳನ್ನು ನೆಟ್ಟಿದ್ದರಿಂದ ದೂರಕ್ಕೆ ಆ ಗುಹೆ ಕಾಣಿಸುತ್ತಿರಲಿಲ್ಲ. ಅದರಲ್ಲಿ ಕಲ್ಲುಗಳನ್ನಿಟ್ಟು ಒಲೆಗಳನ್ನು ಕಟ್ಟಿದ್ದರು. ಅಷ್ಟೇ ಅಲ್ಲದೆ ಒಬ್ಬ ಮನುಷ್ಯನ ಉದ್ದಕ್ಕೆ ಸರಿಹೋಗುವಂತೆ ಅನೇಕ ಮಲಗುವ ಸ್ಥಳಗಳನ್ನು ಕೆತ್ತಿದ್ದರು. ಅದರ ಒಂದು ಮೂಲೆಯಲ್ಲಿ ಗಣಪತಿಯ ವಿಗ್ರಹವೂ, ಮತ್ತೊಂದು ಮೂಲೆಯಲ್ಲಿ ಕೈಯಲ್ಲಿ ಕತ್ತಿಯನ್ನು ಹಿಡಿದಿದ್ದ ಕರುಪ್ಪಣ್ಣಸ್ವಾಮಿಯ ವಿಗ್ರಹವೂ ಇದ್ದುವು. ಅವುಗಳ ಮಧ್ಯೆ ಒಂದು ಮಾಡದಲ್ಲಿ ಅನೇಕ ಹೆಂಡದ ಬಿಂದಿಗೆಗಳಿದ್ದುವು. ಪೇಯಾಂಡಿ ದೇವನು ಅಲ್ಲಿಗೆ ಸೇರಿದಾಗ ಚಂದ್ರೋದಯದ ಸಮಯ. ಅವನೂ ಅವನ ಜೊತೆಗಾರರೂ ಬಂದಾಗ ಬಳೆಗಳನ್ನು ಹಾಕಿದ್ದ ದೊಣ್ಣೆಗಳನ್ನು ಹಿಡಿದುಕೊಂಡು ಅವುಗಳಿಂದ ಶಬ್ದಮಾಡುತ್ತ ನರಿಗಳನ್ನೂ ತೋಳಗಳನ್ನೂ ಓಡಿಸುತ್ತ ಹಾವುಗಳನ್ನು ದೊಣ್ಣೆಯಿಂದೆತ್ತಿ ಅಲಕ್ಷ್ಯವಾಗಿ ಬೀಸಿ ಎಸೆಯುತ್ತ ಬಂದರು. ಅವರು ಗುಹೆಯೊಳಗೆ ಬಂದಕೂಡಲೆ ಗೋಡೆಯಲ್ಲಿ ಹಳ್ಳಮಾಡಿ ಎಣ್ಣೆ ಹಾಕಿದ್ದ ದೀಪವನ್ನು ಹತ್ತಿಸಿ ತಾವು ಹೊಡೆದುಕೊಂಡು ಬಂದಿದ್ದ ದರೋಡೆ ದ್ರವ್ಯವನ್ನು ಗಣಪತಿಗೂ, ಕರುಪ್ಪಣ್ಣಸ್ವಾಮಿಗೂ ಸಮರ್ಪಿಸಿ ಆರತಿಯೆತ್ತಿ ನೈವೇದ್ಯ ಮಾಡಿ ಅನಂತರ ಹೆಂಡವನ್ನು ಕುಡಿದು ಹಾಡಲಾರಂಭಿಸಿದರು.

**ಯದುಕುಲ ಕಾಂಬೋದಿ ರಾಗ-ಏಕ ತಾಳ**

ಪೇಯಾಂಡಿದೇವ:- (ಕಾಲಮೇಲೆ ಕಾಲು ಹಾಕಿಕೊಂಡು)
ವೀರ... ಇರುಳ... ಕಾಟ್ಟೇರಿ
ಮೆರಿಯ... ನೊಂಡಿ... ಚಾಮುಂಡಿ
ಬೊಜ್ಜೆ ಗಣಪತಿ ದೊಡ್ಡಣ್ಣ
ತೊಟ್ಟಿಯ ಚಿನ್ನಾ ಪಾವಾಡೆ
ನಮ್ಮ ದೈವ ನಾವಿರಲು
ಉಣ್ಣಲು ಶಂಬಾ ಅನ್ನ ಇರಲು
ಎಲ್ಲರೂ:- ತಿಲ್ಲಾಲೇ... ಲೇಲೋ... ತನ್ನಾನೇ
ಕೈಯಲ್ಲಿ ಕೆನ್ನದ ಕೋಲಿರರು

ಕಾತ್ತುರಾಯನ ನೆರವಿರಲು
ಕುಡಿಯಲು ಕೊಡ ಕೊಡ ಕಳ್ಳಿರಲು,
ಕುಡಿಯಲು ಕೊಡ ಕೊಡ ಕಳ್ಳಿರಲು

ಎಲ್ಲರೂ ತೋಳನ್ನು ತಟ್ಟಿ:-
ನಮಗೂ ಉಂಟೇ ಕೊರತೆ ನಮಗೂ ಉಂಟೇ ಕೊರತೆ
ರಾತ್ರಿಯೇ ನಮಗೆ ಹಗಲು
ನಕ್ಷತ್ರ ನಮಗೆ ಪಂಜು
ಭೂತ ಪಿಶಾಚಿ ಬಾಯ್ಮುಚ್ಚುವವು
ಪೇಯಾಂಡಿ ದೇವನ ಹೆಸರೆತ್ತಲ್



ಮೀಸೆಯನ್ನು ಹುರಿ ಮಾಡುತ್ತ ಎಲ್ಲರೂ:-
ತಿಲ್ಲಾಲೇ ಲೇಲೇಲೋ–ತನ್ನಾನೇ
ಹೆಂಡತಿ ಬಿಟ್ಟು ಮಗುವನು ಬಿಟ್ಟು
ನಾಡು ಬಿಟ್ಟು ಪಾಡು ಬಟ್ಟು
ಕಾಲುವೆ ಅಗೆದು ಎಲ್ಲೆಯನಗೆದು
ಹಲವರಿಂದ ಸೇರಿದ ಸ್ವತ್ತು

ಎಲ್ಲರೂ:- ನಮಗಾಗಿಯೇ ನಮಗಾಗಿಯೇ
ಹೆಂಡತಿ ಮಕ್ಕಳಿಗೆ ಮಾಂಗಲ್ಯ ಭಿಕ್ಷೆ
ನಾವು ಕೊಟ್ಟರೆ ತಾನೇ ಉಂಟು
ಈ ಭೂಮಿಗೆ ನಾವೇ ರಾಜರು
ಕನ್ನದ ಕೋಲೆ ನಮ್ಮಧಿಕಾರ ದಂಡ

ಎಲ್ಲರೂ:- ನಮಗುಂಟೇ ನಮಗುಂಟೇ

—ಹೀಗೆ ಇವರು ಹಾಡಿ “ನಮಗುಂಟೇ ಸಮನಾದವರು” ಎಂದು ೋಳನ್ನು ತಟ್ಟಿಕೊಳ್ಳುತ್ತ ಆಬ್ಬರಿಸುತ್ತಿದ್ದಾಗ, ಇದ್ದಕ್ಕಿದ್ದಂತೆ ಪಿಶಾಚಿಗಳು ಬಂದಂತೆ “ಹೇ” ಎಂದು ಒಟ್ಟಿಗೆ ಕೂಗಿಕೊಳ್ಳುತ್ತ ನೂರು ಜನರು ಕೈಯಲ್ಲಿ ಬಂದೂಕನ್ನು ಹಿಡಿದು ಆಕಾಶದಿಂದ ಧುಮ್ಮಿಕ್ಕಿದ್ದವರಂತೆ ಬಂದಿಳಿದರು.

ಅವರುಗಳನ್ನು ಕಂಡಕೂಡಲೇ ಪೇಯಾಂಡಿದೇವನೂ ಸಹ ನಡ
ಹೋದನು. ಬಂದವರು ಒಂದು ಆಳಿಗೆ ಮೂರು ನಾಲ್ಕು ಜನರಾಗಿ, ಕುಡಿದ
ಮತ್ತರಾಗಿದ್ದ ಪೇಯಾಂಡಿ ದೇವನ ಜೊತೆಗಾರರನ್ನು ಕಟ್ಟಿ ಸಂಕೋಲೆಗಳ
ಬಂಧಿಸಿದರು. ಪೇಯಾಂಡಿ ದೇವನಿಗೆ ಮಾತ್ರ ಕುಡಿತದ ಉಲ್ಲಾಸವಿದ್ದಿತೆ
ಹೊರತು ಪ್ರಜ್ಞೆ ತಪ್ಪಿರಲಿಲ್ಲ. ಮಂದನಾಗಿ ಪ್ರಕಾಶಿಸುತ್ತಿದ್ದ ಬೆಳದಿಂ
ಳನ್ನು ನೋಡಿದನು. ಮುತ್ತುಸ್ವಾಮಿ ಅಯ್ಯರವರ ರೂಪ ಗೊತ್ತಾಯಿತ
ಕೂಡಲೆ ಅವನು ಅವರ ಬಳಿಗೆ ಬಂದು, "ಅಯ್ಯರವರೇ! ಬನ್ನಿ ಹಾಗೆಯೆ
ಸರಕಾರದ ಮನುಷ್ಯರಾಗಿಬಿಟ್ಟಿರುವಂತೆ ಕಾಣುತ್ತಿದೆ." ಎಂದು ಹೇ
ಅವರ ಎದೆಯ ಮೇಲೆ ಒಂದು ಗುದ್ದು ಗುದ್ದಲು ಅವರು ಪಾಪ, ಉರು
ಕೊಂಡು ಕೆಳಗೆ ಬಿದ್ದರು. ಕೂಡಲೇ ಪೇಯಾಂಡಿ ದೇವನು ವೈದ್ಯನಾ
ಅಯ್ಯರವರ ಕುಡುಮಿಯನ್ನು ಒಂದು ಕೈಯಿಂದ ಹಿಡಿದುಕೊಂಡು ಇನ
ಹತ್ತು ಜನರ ತಲೆಕೂದಲನ್ನು ಮತ್ತೊಂದು ಕೈಯಿಂದ ಸೇರಿಸಿ ಹಿಡಿದ
ಕೊಂಡು ತೆಂಗಿನಕಾಯಿಗಳನ್ನು ಡಿಕ್ಕಿ ಹೊಡೆಸುವಂತೆ ಒಬ್ಬರನ್ನೊಬ್ಬರಿ
ಡಿಕ್ಕಿ ಹೊಡೆಸಲು, ವೈದ್ಯನಾಥ ಅಯ್ಯರವರ ಕುಡುಮಿ ಕಿತ್ತು ಹೋ
ಅವನ ಕೈಯಲ್ಲಿ ಸಿಕ್ಕಿಕೊಂಡು ಬಂದಿತು. ಉಳಿದ ಹತ್ತು ಜನರಿಗೆ ಬ
ವಾದ ಗಾಯಃ. ಅಷ್ಟರಲ್ಲಿ ಐವತ್ತು ಅರವತ್ತು ಜನ ಒಟ್ಟಾಗಿ ಅವ
ಮೇಲೆ 'ಹೋ' ಎಂದು ಕೂಗುತ್ತ ಹಾಯಲು, ಅವನೂ ಉಕ್ಕಿ
ಒನಕೆಗಳಂತಿದ್ದ ತನ್ನ ಕೈಗಳನ್ನು ನಾಲ್ಕು ದಿಕ್ಕುಗಳಲ್ಲಿಯೂ ಬೀಸಿ—
'ಹೇ-ಹೋ' ಎಂದು ಘರ್ಜಿಸುತ್ತ, ಕೆಲವರ ಮುಖಗಳನ್ನು ಒಡೆದೂ, ಕೆ
ವರ ಹಲ್ಲನ್ನು ಮುರಿದೂ, ಕೆಲವರ ಕಪೋಲಗಳನ್ನು ಭೇದಿಸಿಯೂ
ತನ್ನಿಂದ ಆದ ಮಟ್ಟಿಗೂ ಬಹಳ ಹೊತ್ತು ಕಠೋರವಾದ ಯುದ್ಧವನ್ನು
ಮಾಡಿದನು. ಆದರೂ ನೂರು ಜನರಿಗೆ ಅವನು ಒಬ್ಬನಾದನು. ಏನ
ಮಾಡಿದರೂ, ಕೊನೆಯಲ್ಲಿ, ಇವರು ಅವನನ್ನು ಕಟ್ಟಿ ಹಿಡಿದು ಕೈ ಕಾಲ
ಗಳ ಮೇಲೆ ಬಲವಾದ ಕಬ್ಬಿಣದ ಸಂಕೋಲೆಗಳನ್ನು ಹಾಕಿ ಬಿಗಿಸಿದರು.

ಕೂಡಲೆ ಅವನು "ನನ್ನ ಕೈಯಲ್ಲಿಯೂ ಬಳೆಗಳೇ?" ಎಂದು ಆಕ್ರೊ
ಶದೊಡನೆ ಹಲ್ಲುಗಳನ್ನು ಕಟಕಟನೆ ಕಡಿಯುತ್ತ ಕಣ್ಣುಗಳಲ್ಲಿ ಬೆಂಕಿಯ

ಡಿಗಳು ಹಾರಲು, ಕೈಗಳನ್ನು ಬಲವಾಗಿ ತಿರುಗಿಸಿದನು. ತಿರುಗಿಸುತ್ತಲೇ ಕಬ್ಬಿಣದ ಬಳೆಗಳು ಚೂರು ಚೂರಾದುವು. ಕೂಡಲೆ ಅವನು ಕೈಗಳನ್ನು ೀಸುತ್ತ, ತೋಳುಗಳನ್ನು ತಟ್ಟಿ, ಅಟ್ಟಹಾಸ ಮಾಡುತ್ತ "ಬನ್ನಿರೋ-ಹುಡುಗರಾ ಹತ್ತು, ಇಪ್ಪತ್ತು ಜನ ಕೂಡಿ ಬನ್ನಿರೋ, ಒಂದು ಕೈ ನೋಡೋಣ" ಎಂದು ಅಬ್ಬರಿಸಿದನು. ಆ ಪೋಲೀಸಿನವರಿಗೆ ಹತ್ತು ಇಪ್ಪತ್ತು ಜನ ಒಟ್ಟುಸೇರಿ ಅವನ ಹತ್ತಿರ ಹೋಗಲು. ಹುಚ್ಚೇನು? ೀಟಿ ನಾಯಿಗಳು ಹುಲಿಯ ಮೇಲೆ ಹಾಯುವಂತೆ ಮತ್ತೆ ಎಲ್ಲರೂ ಒಂದೇ ಗುಂಪಾಗಿ ಅವನ ಮೇಲೆ ಹಾಯಲು, ಅವನು "ಹೋಗಿರೋ- ಬರಿ ಮುಟ್ಠಾ ಳರೇ! ಇಷ್ಟು ಜನರೆಲ್ಲ ಸೇರಿ ಒಬ್ಬನನ್ನು ಹಿಡಿಯಲು ಬಂದುಬಿಟ್ಟಿರಲ್ಲ!- ನಾಚಿಕೆ ಇಲ್ಲದ ಮುಂಡೆಗಳೆ! ಈಗ ಏನು ಮಾಡಬೇಕೆನ್ನುತ್ತೀರೋ ಮುಂಡೆಗಳೇ ?" ಎಂದು ಕೇಳಿದನು, ಅವರು "ಕಚೇರಿಗೆ ಬಾ" ಎಂದರು. ಅವನು "ನನಗೆ ಕಾಲಿನಲ್ಲಿ ಸಂಕೋಲೆ ಹಾಕಿದೆ. ನನ್ನಿಂದ ನಡೆಯಲು ಸಾಧ್ಯವಿಲ್ಲ. ಬೇಕಾದರೆ ನನ್ನನ್ನು ಎತ್ತಿಕೊಂಡು ಹೋಗಿರೊ—ಹುಡುಗರಿರಾ " ಎಂದು ಕೆಳಗೆ ಕುಳಿತುಬಿಟ್ಟನು. ಮೂವತ್ತು ನಲವತ್ತು ಜನರು ಸೇರಿ ಅವನನ್ನು ಎತ್ತಿ ನೋಡಿದರು. ಸಾಧ್ಯವಾಗಲಿಲ್ಲ. ಅನಂತರ ಐವತ್ತು ಅರವತ್ತು ಜನರು ಸೇರಿ ಶ್ರಮಪಟ್ಟು ಅವನನ್ನು ಎತ್ತಲು ಅವನು, "ಏನೊ ಹುಡುಗರಿರಾ, ನಾನೇನು ಸತ್ತಹೆಣವೆ - ಮಲಗಿದ್ದ ಹಾಗೆಯೇ ಎತ್ತುತ್ತೀರಲ್ಲಾ?" ಎಂದು ತನ್ನನ್ನು ಎತ್ತಿದವರನ್ನು ಕಣ್ಣುಗಳ ಮೇಲೆಯೂ ತಲೆಯ ಮೇಲೆಯೂ ಹೊಡೆದು ಓಡಿಸಿದನು. ಆಮೇಲೆ ವೈದ್ಯನಾಥ ಅಯ್ಯರ್ ತಾವು ತೆಗೆದುಕೊಂಡು ಬಂದಿದ್ದ ಬಂಡಿಗಳಲ್ಲಿ ಒಂದು ಬಂಡಿಯ ಚಕ್ರವನ್ನು ಕಳಚುವಂತೆ ಮಾಡಿಸಿ ಆ ಬಂಡಿಯಲ್ಲಿ ಬರುವಂತೆ ಹೇಳಿ, ಅದರಲ್ಲಿ ಪೇಯಾಂಡಿ ಸೇವನನ್ನು, 'ಎದ್ದು ದಯಮಾಡಿಸಬೇಕೆ'ಂದು ಹೇಳಿ ಅದನ್ನು ಹೊತ್ತು ಕೊಂಡು ಹೋಗುವಂತೆ ಸುತ್ತುವರಿದಿದ್ದವರಿಗೆ ಅಜ್ಞೆಮಾಡಿದರು. ಪೇಯಾಂಡಿ ಸೇವನೂ " ಇವರ ಸರಕಾರವನ್ನೂ ನೋಡೋಣ " ಎಂದು, ಆ ಚಕ್ರದ ಗೂಡಿನಲ್ಲಿ ಕಾಲ ಮೇಲೆ ಕಾಲು ಹಾಕಿಕೊಂಡು ಕುಳಿತು, ಎಲೆ ಅಡಕೆಯನ್ನು ಬಾಯಲ್ಲಿ ಹಾಕಿಕೊಂಡು ಅಗಿಯುತ್ತ, ಬಿಚ್ಚು ಕತ್ತಿಯ ಸಮೇತ ಬಂದ

ಪೋಲೀಸಿನವರ ಮೇಲೆ ದಾರಿಯುದ್ದಕ್ಕೂ ಉಗಿಯುತ್ತ ತಾಳವನ್ನು ಹಾಕುತ್ತ ಹಾಡಿಕೊಂಡು, "ಎತ್ತಿರೊ! ಹುಡುಗರಿರಾ - ಎತ್ತಿರಿ" ಎಂದು ಹೇಳುತ್ತ ಪಲ್ಲಕ್ಕಿ ಸವಾರಿ ಮಾಡುವವನಂತೆ ಮಾಡುತ್ತ ಹೊರಟನು.

## ೧೫. ಪೇಯಾಂಡಿ ದೇವರ ಮೆರವಣಿಗೆ

ಈ ವಿಧವಾದ ಕೋಲಾಹಲದೊಡನೆ ಪೇಯಾಂಡಿ ದೇವನನ್ನು ಹಿಡಿದು ತರುತ್ತಿದ್ದಾಗ ಯಾವ ಊರಿನ ಸೆರೆಮನೆಯಲ್ಲಿ ಅವನನ್ನು ಭದ್ರಪಡಿಸು ವುದೆಂಬುದನ್ನು ಕುರಿತು ಒಂದು ಪರ್ಯಾಲೋಚನೆ ನಡೆಯಿತು. ಸಬ್ ಮ್ಯಾಜಿ ಸ್ಟ್ರೇಟ್ ವೈದ್ಯನಾಥ ಅಯ್ಯರವರು ಶಿರುಕುಳದಲ್ಲಿಯೇ ಅವನನ್ನು ಬಂಧಿಸಿಡ ಬಹುದೆಂಬ ತಮ್ಮ ಅಭಿಪ್ರಾಯವನ್ನು ತಿಳಿಸಿದರು. ಮುತ್ತುಸ್ವಾಮಿ ಅಯ್ಯರ್ ಅದು ಅಪಾಯಕರವಾಗಬಹುದು, ಅವನನ್ನು ಸೇರಿದವರೆಲ್ಲರೂ ರಾಕ್ಷಸರು, ಅವರು ಅಷ್ಟು ಸಮೀಪದಲ್ಲಿರುವಾಗ ಪೇಯಾಂಡಿಯನ್ನು ನಿರ್ಬಂಧಿಸಿ ಕಾಪಾಡುವುದು ಅಸಾಧ್ಯವೆಂದು ವಿಶದಪಡಿಸಿದಮೇಲೆ ಮಧುರೆಗೇ ಅವ ನನ್ನು ಕಳುಹಿಸಬೇಕೆಂದು ತೀರ್ಮಾನವಾಯಿತು.

ಆದರೆ ಅವರು ಶಿರುಕುಳದ ಮಾರ್ಗವಾಗಿಯೇ ಹೋಗಬೇಕಾಗಿತ್ತು. ಆ ಊರಿಗೆ ಒಂದು ಮೈಲಿಗೆ ಆಚೆ ಪೇಯಾಂಡಿ ದೇವನು ಬರುತ್ತಾನೆಂಬ ಸುದ್ದಿ ಹರಡಿದ ಕೂಡಲೆ ಗಂಡು, ಹೆಣ್ಣು, ಆದಿಯಾಗಿ ಅವನನ್ನು ಎದುರು ಗೊಳ್ಳಲು ಹೊರಟುಬಿಟ್ಟರು. ಸುಬ್ಬು, ಯಾವಾಗಲು ಬಹು ಸ್ಫುಟವಾಗಿ ಮಾತಾಡುವವಳು! ಈಗ ಈ ಗಡಿಬಿಡಿಯಲ್ಲಿ ಕೇಳಬೇಕು !! "ವೇಂಬೂ, ಪೇಯಾಂಡಿ ದೇವನನ್ನು ಹಿಡಿದುಕೊಂಡು ಬಯುತ್ತಾಯೆ-ಬಾ,ಬಾ,ಬಾ,-" (ಬರುತ್ತಾರೆ- ಎಂದು ಅರ್ಥ), ಸ್ತ್ರೀಯರಿಗೆ ಅಳಿಯನೂ, ಅಜ್ಜನಿಗೆ ಹೆಣ್ಣು ಮಗಳ ಮಗನೂ, ಮಗಳೂ ಎಷ್ಟು ಪ್ರಿಯವೊ ಅಷ್ಟ ಇವಳಿಗೆ 'ಯ' ಕಾರ 'ರ' ಕಾರಕ್ಕೆ ಬದಲಾಗಿ ಪ್ರಿಯ. ಅಕ್ಷರ ಮಾಲೆಯಲ್ಲಿ ಬೇರೆ ಯಾವ ಅಕ್ಷರವೂ ಅವಳಿಗೆ ಲಕ್ಷ್ಯವಿಲ್ಲ. ಸುಬ್ಬು ಹೀಗೆ ಪ್ರಸಂಗ ಮಾಡು ತ್ತಿದ್ದಾಗ ವೇಂಬು ಸೀರೆಯನ್ನು ಉಡುತ್ತಿದ್ದಳು. ಕೂಡಲೆ "ನಿಜವಾ

ಿಯೆ? ಪೇಯಾಂಡಿ ದೇವನನ್ನೇ? ಹಿಡಿದುಬಿಟ್ಟರೆ? ಇಗೋ ನಾನೂ ಬಂದೆ ವಮ್ಮಾ" ಎನ್ನಲು "ನೀನು ಬಾ, ನಾನು ಹೊಯಡುತ್ತೇನೆ" ಎಂದು ಓಡ ಾರಂಭಿಸಿದಳು. ಅಷ್ಟರಲ್ಲಿ ವೇಂಬು, "ಎಲೆ ಹಾಳೆ! ನಾನು ಬರುತ್ತಿದ್ದೇ ಿಯೇ. ಸಿದ್ಧವಾಗಿದ್ದೇನಲ್ಲಮ್ಮ" ಎಂದೂ "ಒಂದು ಸುತ್ತು ಸುತ್ತಿಕೊಳ್ಳಲು ಷ್ಟು ಹೊತ್ತಾದೀತು?" ಎಂದು ಹೇಳಿ, ಅವಸರದಲ್ಲಿ ಕುಪ್ಪಸವನ್ನು ರಿಸಲು ಆಗದೆ, ಸೆರಗು ಇರಬೇಕಾದ ಕಡೆ ಸೀರೆಯ ಮಡಿಕೆಯನ್ನೂ, ುಡಿಕೆಯು ಇರಬೇಕಾದ ಕಡೆ ಸೆರಗನ್ನೂ ತಿರುಗು ಮುರುಗಾಗಿ ಸುತ್ತಿ ೊಂಡು, ಸೀರೆಯನ್ನು ಉಟ್ಟೂ ಉಡದೆ, ಈ ಬಗೆಯ ಅಲಂಕಾರ ೊಡನೆ ಹೊರಬಂದಳು. ಪಕ್ಕದ ಮನೆಯ ನಾಗು, ತನ್ನ ಗಂಡನಿಗೆ ಂಗಳು ಅನ್ನವನ್ನು ಬಡಿಸುತ್ತಿದ್ದಳು. ಸುಬ್ಬೂ ಮತ್ತು ವೇಂಬೂ ಹೋಗಿ ವಳನ್ನು ಒಂದು ಕೂಗು ಹಾಕಿ ಕರೆದರು. ಕೂಗುವುದೇ ತಡ, ನಾಗು ನ್ನ ಗಂಡನನ್ನು ನೋಡಿ, "ಮಜ್ಜಿಗೆ ಕಲ್ಲುಮರಿಗೆಯಲ್ಲಿದೆ. ಹುಳಿ ಆ ಾತ್ರೆಯಲ್ಲಿದೆ. ತೆಗೆದು ಹಾಕಿಕೊಳ್ಳಬಹುದು. ನಾನು ಹೋಗುತ್ತೇನೆ" ಂದು ಹೇಳಿ ಪಾತ್ರೆಗಳನ್ನು ಮುಚ್ಚಿಡದೆ ಇದ್ದುದನ್ನು ಇದ್ದಂತೆಯೇ ಿಟ್ಟು, ಮುಸುರೆಯ ಕೈಯನ್ನೂ ತೊಳೆದುಕೊಳ್ಳದೆ ಹಾಗೆಯೇ ೊರಟುಬಿಟ್ಟಳು. ಅವಳ ಗಂಡನು "ಎಲೇ! ಬಡಿಸಿಬಿಟ್ಟು ಹೋಗೇ— ಮೇಲೆ ನೋಡುವೆಯಂತೆ" ಎಂದು ಗದರಿಸಲು, ಅವಳು "ಇದಕ್ಕೇ ಬರುವುದು ಕೋಪ, ನೋಡಿ— ಚೆನ್ನಾಗಿದೆ" ಎಂದು ಮರ್ಯಾದೆಯಿಂದ ಹೇಳಿ ಗಂಡನಿಗೆ ಹೆದರಲು ಅದು ಸಮಯವೆ?) ಒಂದೇ ಓಟದಿಂದ ಓಡಿಹೋದಳು. ವಳ ಗಂಡನಿಗೆ ಬಂದ ಕೋಪಕ್ಕೆ ಮಿತಿ, ಮೇರೆ ಇರಲಿಲ್ಲ. "ಸಡೆ ಕತ್ತೆ! ರಲಿ, ಮಾಡುತ್ತೇನೆ— ಕಾಲನ್ನು ಮುರಿದು ಹಾಕುತ್ತೇನೆ - ಅನ್ನವನ್ನು ಿಸುಟು ಹೋಗುತ್ತೇನೆ - ನೋಡು" ಎಂದು ಕೋಪಿಸಿಕೊಂಡನು. ಅನ್ನ ನ್ನು ಬಿಸುಟರೆ ಯಾರಿಗೆ ನಷ್ಟವೆಂದು ಅವನಿಗೆ ಹೊಳೆಯಲಿಲ್ಲ. ಹಾಗೆ ಿಸುಡಲೂ ಮನಸ್ಸು ಬರಲಿಲ್ಲ. "ಬರಲಿ, ಮಾಡುತ್ತೇನೆ" ಎಂದುಕೊಳ್ಳುತ್ತ ದೈವವೇ" ಎಂದು ಒಂದು ಸಲ ಬೈಯುವುದು– ಮತ್ತು ಊಟ ಮಾಡು ುದು - ಹೀಗೆ ಊಟವನ್ನು ಮುಗಿಸಿದನು. ಈ ರೀತಿಯಲ್ಲಿ ಒಂದೊಂದು

ಮನೆಯಲ್ಲಿಯೂ ಹಾಕಿದುದು ಹಾಕಿದಂತೆ- ಸುಬ್ಬು, ಶೇಷಿ, ವೇಂಬು, ನಾಗ
ಅಮ್ಮಾಪೊಣ್ಣು, ಅಲಮೇಲು, ನಾಣಿ, ಸಾತಿ, ಕಿಟ್ಟಮ್ಮ, ಎಚ್ಚಿ, ಪಾಪ
(ನಮ್ಮ ಹೆಣ್ಣುಮಕ್ಕಳ ಹೆಸರು ಏನು ಸೊಗಸೊ!) ಮೊದಲಾದ ಎಲ್ಲಾ
ಹೆಂಗಸರೂ, ಪಡೆಯ ಮೇಲೆ ಪಡೆಯಾಗಿ ಹೊರಟುಬಿಟ್ಟರು. "ಪಾಪಾ
ಪಟ್ಟಿಯ ಮಚ್ಚುಕತ್ತಿ" ಎಂಬ ಬಿರುದನ್ನು ಪಡೆದಿದ್ದ ಕುಪ್ಪಿ ಅಜ್ಜಿ
ಯಾದರೊ—ಎಲ್ಲರಿಗೂ ಮುಂಚೆ ಮೊದಲಿನ ಸೇತುವೆಗೇ ಹೋಗಿ ಕಾದು
ಕೊಂಡಿದ್ದಳು.

ಪೇಯಾಂಡಿ ದೇವನೂ ಬಂದು ಸೇರಿದನು. ಅವನ ಬರುವಿಕೆಯಾದರೂ
ಎಂತಹದು? ಕಳ್ಳನನ್ನು ಕಚೇರಿಗೆ ಹಿಡಿದುಕೊಂಡು ಹೋಗುವಂತಿತ್ತೆ
ಅದು! ಅಂಗಿ-ರುಮಾಲುಗಳನ್ನು ಧರಿಸಿದ ಪೋಲೀಸ್ ಉದ್ಯೋಗಸ್ಥರು
ಪಲ್ಲಕ್ಕಿಯನ್ನು ಹೊರಲು ಬಿಚ್ಚುಕತ್ತಿಯೊಡನೆ ಸಿಪಾಯಿಗಳು ಮುಂದೆ
ಹೋಗಲು, ಮುತ್ತುಸ್ವಾಮಿ ಅಯ್ಯರ್ ಮೊದಲಾದ ಮಹಾಜನಗಳು
ಹಿಂದೆ ಬರುತ್ತಿರಲು, ಸ್ತ್ರೀಯರು "ಬೆಂಕಿ ಹಾಕೆ! ಇವನ ಮುಖವನ್ನು
ನೋಡೇ - ಬೂದಿಯಾಗಿ ಹೋಗುವನು! ಇವನ ಮೀಸೆಯೋ, ಇವನೋ..."
ಎಂದು ದಾರಿಯುದ್ದಕ್ಕೂ ಆಶೀರ್ವಾದ ಘೋಷ ಮಾಡುತ್ತಿರಲು ಇಷ್ಟು
ಕೋಲಾಹಲ ಸಮೇತ ರಾಜಗಂಭೀರ ವೀರ ಮಾರ್ತಾಂಡ ಸಂಕೋಲೆ ವೀರಪ್ಪ
ಪೇಯಾಂಡಿ ದೇವರವರು ಬಂಡಿಯ ಗೂಡೆಂಬ ಪಲ್ಲಕ್ಕಿಯ ಮೇಲೆ ಗಂಭೀರ
ವಾಗಿ ಕುಳಿತು ಗಾಂಜಾ, ಹೊಗೆಸೊಪ್ಪು ಮೊದಲಾದ ವಾಸನೆ ದ್ರವ್ಯಸಹಿತ
ತಾಂಬೂಲ ಚರ್ವಣವನ್ನು ಮಾಡುತ್ತ ಹವಳ ವರ್ಣದಿಂದ ಕೂಡಿದ ತನ್ನ
ದಿವ್ಯ ಮಂಗಳಕರವಾದ ಎಂಜಲನ್ನು ಕತ್ತಿಯನ್ನು ಹಿಡಿದಿದ್ದ ಯುದ್ಧ
ವೀರರ ಮೇಲೆ ಧಾರಾಳವಾಗಿ ಸಮರ್ಪಿಸುತ್ತಿದ್ದನು. ಅಡಿ, ಹಾಡಿ, ತಾಳ
ಹಾಕುತ್ತ ಅಟ್ಟಹಾಸ ಮಾಡಿಕೊಂಡು ಈ ಮೆರವಣಿಗೆ ಸಾಗುತ್ತಿತ್ತು. ಈ
ಮಹಾಪುರುಷನ ದಿವ್ಯದರ್ಶನವನ್ನು ಪಡೆಯಲು ಸಾವಿರಗಟ್ಟಲೆ ಜನರು
ಮಧುರೆಯಲ್ಲಿ ಮೀನಾಕ್ಷಿ ಅಮ್ಮನ ವಿಶೇಷ ಉತ್ಸವದಲ್ಲಿ, ಅಮ್ಮನವರ
ಚಿನ್ನದ ಮಂಟಪದಲ್ಲಿ ಬಿಜಯ ಗೈಯುತ್ತಿದ್ದಾಗ ಆ ದರ್ಶನವನ್ನು

ಪಡೆಯಲು ಒಬ್ಬರ ಮೇಲೊಬ್ಬರು ಬೀಳುವಂತೆ ಬಿದ್ದು ದರ್ಶನ ಮಾಡಿ ಕೃತಾರ್ಥರಾದರು.

ಇವರೆಲ್ಲರಲ್ಲಿಯೂ ವಿಶೇಷ ಭಾಗ್ಯವನ್ನು ಪಡೆದವಳು ಕುಪ್ಪಿ ಅಜ್ಜಿ. ಅವಳು ಪೇಯಾಂಡಿ ದೇವನನ್ನು ನೋಡಬೇಕೆಂಬ ಆವೇಶದಲ್ಲಿ, ತಲೆಮೇಲಿನ ಸೆರಗು ಹಿಂದಕ್ಕೆ ಬೀಳಲು, ಬದಿಯ ಸೆರಗು ಮುಂದೆ ಜಾರಲು, ಸ್ತ್ರೀ-ಪುರುಷರೆಂಬ ಭೇದವನ್ನು ಮರೆತು ಗುಂಪಿನ ಮಧ್ಯದಲ್ಲಿ ನುಗ್ಗಿ ಪೇಯಾಂಡಿ ದೇವನ ಸಮೀಪಕ್ಕೆ ಹೋದಾಗ ಅವಳ ಅದ್ಭುತ ಭಕ್ತಿಯನ್ನು ಕಂಡು ಆಶ್ಚರ್ಯಗೊಂಡ ಆ ದೇವನು ಶೇಖರಿಸಿಟ್ಟಿದ್ದ ತನ್ನ ಪವಿತ್ರಬಾಯಿಯ ಅಮೃತವನ್ನು ಅವಳ ಮೇಲೆ ಪ್ರೀತಿಯಿಂದ ಪ್ರೋಷಣೆ ಮಾಡಲು, ರಜತಮಯವಾದ ಅವಳ ಶಿರೋರೋಮಗಳೆಲ್ಲವೂ ರಕ್ತಮಯವಾಗಿ ಪ್ರಕಾಶಿಸಿದ ಅದ್ಭುತ ದೃಶ್ಯವನ್ನು ಕಂಡ ಅಲ್ಲಿದ್ದವರೆಲ್ಲರೂ ತಡೆಯಲಾರದೆ ಅಬ್ಬರಿಸಿ ನಗಲಾರಂಭಿಸಿದರು. (ಅಂದರೆ ಸಾಧಾರಣ ಭಾಷೆಯಲ್ಲಿ ಅನುವಾದ ಮಾಡುವುದಾದರೆ, ಪೇಯಾಂಡಿ ಕಳ್ಳನು ಕುಪ್ಪಿ ಅಜ್ಜಿಯ ಬೋಳುತಲೆಯ ಮೇಲೆ ಕೆಂಪಾದ ತನ್ನ ಎಂಜಲನ್ನು ಉಗಿದಾಗ, ಆ ನರೆತ ಕೂದಲೆಲ್ಲ ಕೆಂಪಾದುವು. ಈ ವಿನೋದವನ್ನು ಕಂಡು ಎಲ್ಲರೂ ಬಿದ್ದು ಬಿದ್ದು ನಕ್ಕರು.) ಕೂಡಲೆ ಕುಪ್ಪಿ ಅಜ್ಜಿ ತನ್ನ ಅದೃಷ್ಟವನ್ನು ಕಂಡು ಸಂತೋಷಿಸುವುದನ್ನು ಬಿಟ್ಟು "ಬೆಂಕಿಹಾಕ! ನಾಶವಾಗಿ ಹೋಗ! ಬೂದಿಯಾಗ!" ಎಂದು ಗರ್ಜಿಸ ತೊಡಗಿದಳು. ಈ ರೀತಿ ವಿನೋದ ಸಂಭ್ರಮಗಳೊಡನೆ ಪೇಯಾಂಡಿಯನ್ನು ಮಧುರೆಗೆ ಕರೆದೊಯ್ದು ತ್ರಿಪುರದಂತಿದ್ದ ಕಲ್ಲಿನ ಕೋಟೆಯೊಂದರಲ್ಲಿ ಕಾಡಿನಲ್ಲಿ ತಿರುಗುವ ಸಿಂಹವನ್ನು ಗೂಡಿನಲ್ಲಿ ನಿರ್ಬಂಧಿಸಿಡುವಂತೆ ಬಂಧಿಸಿ, ಹಗಲೂ ರಾತ್ರಿಯೂ ಎಡೆಬಿಡದೆ ಬಹಳ ಜಾಗರೂಕತೆಯಿಂದ ಕಾವಲಿರುವಂತೆ ಯೋಗ್ಯರಾದ ಕಾವಲುಗಾರರನ್ನು ಏರ್ಪಾಡು ಮಾಡಿದರು.

ಮುತ್ತುಸ್ವಾಮಿ ಅಯ್ಯರ್ ತಾವು ಬೇರೆ ತಮ್ಮ ತಮ್ಮ ಬೇರೆ ಎಂದು ಭೇದವನ್ನೆಣಿಸದೆ ತಮ್ಮ ಕೈಯಿಂದಲೇ ವೆಚ್ಚ ಮಾಡಿ ತಮ್ಮ ಹೆಸರಿನಲ್ಲಿಯೇ ಫಿರ್ಯಾದು ಕೊಟ್ಟು ಬೇಕಾದ ಏರ್ಪಾಡುಗಳನ್ನು ಮಾಡಿ ಊರಿಗೆ ಹಿಂತಿರುಗಿದರು. ಒಳ್ಳೆಯ ಕಾರ್ಯವೊಂದನ್ನು ಮುಗಿಸಿದುದರಲ್ಲಿ ಅವರಿಗೆ ಉತ್ಸಾಹ

ಸ್ವಲ್ಪ ಹೆಚ್ಚಾಯಿತು. ಮನೆಯ ಬಾಗಿಲಿಗೆ ಬಂದ ಕೂಡಲೆ ಘಳೀರ
ಘಳೀರೆಂದು ಶಬ್ದ ಮಾಡುವ ಗೆಜ್ಜೆಗಳಿಂದಲಂಕೃತವಾದ ಎತ್ತುಗಳನ
ಕಟ್ಟಿದ್ದ ತನ್ನ ಪೆಟ್ಟಿಗೆ ಬಂಡಿಯಿಂದ ಕೆಳಗೆ ಇಳಿದರು. ತಲೆಯಮೇಲೆ ಬಟ
ಸೊಗಸಾದ ಸರಿಗೆಯ ಅಂಗವಸ್ತ್ರವನ್ನು ಕುಚ್ಚು ಬಟ್ಟೆ ರುಮಾಲನ್ನು ಕಟ
ಕೊಂಡು, ಕೈಯಲ್ಲಿ ಬೆಳ್ಳಿಕಟ್ಟನ್ನು ಹಾಕಿದ್ದ ಬೆತ್ತವನ್ನು ಹಿಡಿದಿದ್ದರ
ಕಾಲಿನಲ್ಲಿ ಚಪ್ಪಲಿ ಹಾಕಿಕೊಂಡು, ಸೊಂಟದಲ್ಲಿ ಚಿನ್ನದ ಉಡುದಾರ
ಬೆಳ್ಳಿಯ ಗೆಜ್ಜೆಗಳು ಶಬ್ದ ಮಾಡುತ್ತಿರಲು, ವಜ್ರದ ಓಲೆಗಳೂ ಮರಕ
ವಿರುವ ಉಂಗುರಗಳೂ ಥಳ ಥಳವೆಂದು ಹೊಳಪನ್ನು ಬೀರುತ್ತಿದ್ದುವ
ತನ್ನ ಮನೆಯಲ್ಲಿ ಪ್ರವೇಶಿಸಿದಾಗ ಜಗುಲಿಯ ಮೇಲೆ ಕುಳಿತಿದ್ದ ಕೆಲವರ
ಫಕ್ಕನೆ ಎದ್ದು ಅವರನ್ನು ಬಹಳ ನಮ್ರತೆಯಿಂದ ನಮಸ್ಕರಿಸಿದರು. ಹೀ
ಅವರು ಬರುವಾಗ ಪೊನ್ನಮ್ಮಾಳ್ ತನ್ನ ಮನೆಯ ಬಾಗಿಲಿನಲ್ಲಿ ನಿಂತಿದ್ದಳು
ಅವರ ಬರುವಿಕೆಯ ಠೀವಿಯನ್ನೂ, ಅವರಿಗೆ ನಡೆದ ಮರ್ಯಾದೆಯನ್ನೂ
ನೋಡಿ ಅವಳಿಗುಂಟಾದ ಮತ್ಸರಕ್ಕೆ ಪಾರವಿರಲಿಲ್ಲ. ಸಿಂಡರಿಸಿಕೊಂಡು
"ಇಷ್ಟು ಬೇಕಾಗಿದೆಯೆ ? ಅದು ಎಷ್ಟು ದಿನದ ಬಾಳೊ— ಹೋ ಹೊ
ಎಂದಿದ್ದವರೆಲ್ಲ ಏನೇನೋ ಆಗಿ ಹೋದರಂತೆ!" ಎಂದು ಗೊಣಗುತ್ತ
ಸಹಿಸಲಾರದೆ ಒಳಕ್ಕೆ ಹೋದಳು. ಆಗ ಸುಬ್ರಹ್ಮಣ್ಯ ಅಯ್ಯರ್ ಪ
ಸಾಲೆಯಲ್ಲಿ ಕುಳಿತಿದ್ದರು. ಇವಳು ಗೊಣಗುವುದನ್ನು ನೋಡಿ, "ಏನೇ
ಲೇ ನನಗೆ ಹೇಳಬಾರದೆ" ಎಂದು ಅವಳನ್ನು ಸಲಿಗೆಯಿಂದ ಕೇಳಲ
ಅವಳು, "ಏನೋ ಹೇಳುತ್ತಾರಲ್ಲ, ಸೋರೇಕಾಯಿಗೆ ಉಪ್ಪಿಲ್ಲಾಂತ! ಅವರ
ಬಂದಿದ್ದಾರೆ — ಅಯ್ಯರು ನಿಮ್ಮ ಅಣ್ಣಂದಿರು, ದೊಡ್ಡ ಅಣ್ಣಂದಿರು
ಚಿನ್ನದ ಅಣ್ಣಂದಿರು.... ಆನೆ ಕುದುರೆಗಳ ಸಮೇತ... ಏನೋ ಅಲ್ಪಗಳು
ತಲೆ ಕೆಳಗೆ ಬೀಳುತ್ತವೆ ಚಪ್ಪಲಿಯೇನು, ಛತ್ರಿ ಏನು, ದೊಣ್ಣೆ ಏನು, ಯಾವ
ದನ್ನೂ ನೋಡಲಾಗೋದಿಲ್ಲ— ನಡೆಯಲಿ— ದೊಡ್ಡ ಕಳ್ಳನನ್ನು ಹಿಡಿದು
ಬಿಟ್ಟರೊ ಇಲ್ಲವೊ—" ಅವಳಿಗುಂಟಾದ ಮತ್ಸರದ ಮುಂಬರದಲ್ಲಿ ಆಭರಣ
ಕಳೆದು ಹೋದ ದುಃಖವೂ ಮಾಯವಾಯಿತು.

ಅಲ್ಲದೆ, ಅಂದು ನದಿಯ ದಡದಲ್ಲಿ ಸೇರಿದ್ದ ಹರಟೆಮಲ್ಲಿಗಳ ಮಹಾ ಸಭೆಯಲ್ಲಿ ಪೊನ್ನಮ್ಮಾಳ ಮತ್ಸರವನ್ನು ಹೆಚ್ಚು ಮಾಡಲು ಕೆಲವು ತೀರ್ಮಾನ ಗಳು ಮಾಡಲಾಗಿದ್ದುವು. ನದಿಯ ದಡದಲ್ಲಿಯೂ ಸಹ ಆ ಸಭೆ ಸೇರುವುದೇ ಎಂದು ಕೆಲವರಿಗೆ ಸಂದೇಹ ತೋರಬಹುದು. ಬೆಂಕಿಯೂ, ಹುಲ್ಲೂ ಕೂಡಿ ದರೆ ಬೆಂಕಿ ಆಗುವುದಕ್ಕೆ ಯಾರನ್ನು ಕೇಳಬೇಕು? ಆ ಬೆಂಕಿ, ಸಂದರ್ಭ ವನ್ನೂ, ಮುಹೂರ್ತವನ್ನೂ ನೋಡಿ ಉರಿಯುತ್ತದೆಯೆ? (ಇವಕ್ಕೆಲ್ಲ 'ತದೇವಲಗ್ನ' ವೇ ನಿಯಮ) ಅದರಂತೆ ಸುಬ್ಬು ಸ್ನೇಹಿತರಿಬ್ಬರು ಎಲ್ಲಿ ಸೇರಿ ದರೂ ಸರಿಯೆ– ಯಾವಾಗ ಸೇರಿದರೂ ಸರಿಯೆ—ಅದು ಹರಟೆಮಲ್ಲಿಗಳ ಸಭೆ ಯಾಗಿ ಪರಿಣಮಿಸುವುದು. ಅಲ್ಲದೆ ಆ ಸಭೆಯ ಅಧಿವೇಶನಕ್ಕೆ ನದಿಯ ದಡದಂತೆ ಪ್ರಶಸ್ತವಾದ ಸ್ಥಳ ಬೇರೊಂದಿಲ್ಲ. (ಅದಕ್ಕೆ ಅಲ್ಲವೇ ಈ ಕಾಲ ದಲ್ಲಿಯೂ ಕೂಡ ಹೆಣ್ಣುಮಕ್ಕಳು ನದಿಯ ದಡಕ್ಕೆ ಹೋದರೆ ಅಷ್ಟು ಬೇಗನೆ ಬಂದು ಬಿಡುವರು!)

ನದಿಯ ದಡದಲ್ಲಿ ಸೀರೆಯನ್ನು ಒಗೆಯುತ್ತ ಸುಬ್ಬಮ್ಮಾಳ್ ಮುತ್ತು ಸ್ವಾಮಿ ಅಯ್ಯರ್ ಪೇಯಾಂಡಿ ದೇವನನ್ನು ಹಿಡಿದ ವೃತ್ತಾಂತವನ್ನು ಸವಿ ಸ್ತಾರವಾಗಿ ಒಕ್ಕಣಿಸಿದ ಮೇಲೆ, "ನೀನು ಸಾವಿಯ(ರ) ಮಾತು ಬೇಕಾ ದಯೆ(ರೆ) ಹೇಳಮ್ಮಾ ಏನಾದಯೂ(ರೂ) ನಮ್ಮ ಮುತ್ತುಸ್ವಾಮಿ ಸಮಾನ ಬಯ(ರ)ಲಾಯ(ರ)ದು. ಎಲ್ಲಿ ಬೇಕಾದಯೆ(ರೆ) ಹೋಗಲಿ– ಎಲಾ! ಢಿಲ್ಲಿಗೆ ಬೇಕಾದಯೆ(ರೆ) ಹೋಗಲಿ– ಗೆದ್ದು ಬಯು(ರು)ವನು. ಹೋದ ಕೆಲಸ ಇಲ್ಲಾಂತ ಬಯು(ರು)ವ ವಾಡಿಕೆ ಇಲ್ಲ. ಸುಬ್ರಹ್ಮಣ್ಯನೂ ಗಟ್ಟಿಗನೆ! ಏನಾದಯೂ(ರೂ) ಅವನಿಗೆ ಸಾಮರ್ಥ್ಯ ಅಷ್ಟು ಬಯ(ರ)ಲಾಯ(ರ)ದು." ಎಂದು ತನ್ನ ಅಭಿಪ್ರಾಯವನ್ನು ಬಹು ನಿಧಾನವಾಗಿ ವ್ಯಕ್ತ ಮಾಡಿದಳು. ವೇಂಬು– "ಸುಬ್ರಹ್ಮಣ್ಯನು ಯಾರ ಮಾತಿಗೆ ಹೋಗುತ್ತಾನೆ ಪಾಪ. ಅವ ನುಂಟು, ಪೊನ್ನಮ್ಮಾಳ್ ಉಂಟು— ದೇವರೇ ಅಂತ ಇದ್ದಾನೆ" ಎಂದು ದೀರ್ಘ ಧ್ವನಿಯಲ್ಲಿ ಹೇಳಿದಳು. ಪೊನ್ನಮ್ಮಾಳ್ ಈ ಎಲ್ಲ ಮಾತಿಗೂ ಅಲ್ಲಿಯೇ ಇದ್ದಳು. ಅವಳ ಮತ್ಸರವನ್ನು ಕೆರಳಿಸಬೇಕೆಂದೇ ಈ ಸಂಭಾಷಣೆ ಅಧ್ಯಕ್ಷಿಣಿಯರವರಿಂದಲೇ ಆರಂಭಿಸಲ್ಪಟ್ಟಿತ್ತು. ವೇಂಬು ಮಾತು

ಮುಗಿಸಿದ ಕೂಡಲೆ ಪೊನ್ನಮ್ಮಾಳ್ ಗಂಭೀರವಾಗಿ ಕಣ್ಣುಬಿಟ್ ನೋಡುತ್ತ, "ತಲೆ ಇರಬೇಕಾದರೆ ಬಾಲ ಆಡಬೇಕೇ, ಒಂದು ಊರಿ ಇಬ್ಬರು ಹುಚ್ಚರಿರಬೇಕೇ ಎಂದು ಸುಮ್ಮನಿದ್ದರೆ– 'ಸುಬ್ರಹ್ಮಣ್ಯನಿಗೆ ಏನ ತಿಳಿಯದು ನಿಷ್ಕಪಟಿ– ಎಲ್ಲಾ ಅವರ ಅಣ್ಣನವರೇ ಸಾಧಿಸ್ತಾರೆ' ಎಂ ಹೀಗೆಲ್ಲಾ ಹೇಳೂಂತ ಹೇಳಿದೆಯೇನು? ಹಾಗೆಯೇ ಇರಬಾರದೇಕೆ? ಇದ ಲ್ಲೇನು ಹೀಯಾಳಿಕೆ? ಏನೇ ಇದ್ದರೂ ಅವರು ಗಂಡಸು ಹೆಂಗಸು ಗಟ್ಟಿಗ ನಾವು ಗಂಡಹೆಂಡರು ಹುಚ್ಚರೇನಮ್ಮಾ! ಗಟ್ಟಿಗರಾಗಿಲ್ಲದಿದ್ದರೆ ಐವತ್ ಸಾವಿರದ ಜೊತೆಗೆ ಲಕ್ಷ ಸೇರುವುದೆ?" ಎಂದು ಬಹಳ ತಾತ್ಸಾರದಿಂದ ಹೇ ಮನೆಗೆ ಹೋಗಲು ಹೊತ್ತಾದುದರಿಂದ, ಗಂಟು ತೆಗೆದುಕೊಂಡು ಕಾಲ ನಿಮಿಷ ಕೂಡ ತಡಮಾಡದೆ ಹೊರಟುಬಿಟ್ಟಳು. ಊರಿನವರು ಮುತ್ತ ಸ್ವಾಮಿ ಅಯ್ಯರನ್ನು ಹೊಗಳುತ್ತ ಹೋದಹಾಗೆಲ್ಲ ಅವಳ ಮತ್ಸ ಉಕ್ಕಿ ಬರುತ್ತಿತ್ತು.

ಮೇಲೆ ಹೇಳಿದಂತೆ ಅವಳು ಸುಬ್ರಹ್ಮಣ್ಯ ಅಯ್ಯರಿಗೆ ಉತ್ತರ ಹೇಳ ಅವರು, "ಬಂದು ಬಿಟ್ಟನೆ? ಇಲ್ಲಿಯೇ ಇರು. ನಾನು ಹೋಗಿ ಸಮಾಚಾ ವೇನೆಂದು ಕೇಳಿಕೊಂಡು ಬರುತ್ತೇನೆ." ಎಂದು ಹೇಳಿ ಹೊರಟರು. ಅವಳ "ಎಲ್ಲಾ ಹೋಗಿ ಬಂದಾಯಿತು. ಬರಲಿಲ್ಲವೆಂದು ತುಂಬ ಪೇಚಾಡಿಕೊಂಡರ ಎದ್ದು ಬಿದ್ದು ಈಗಲೆ ಓಡಬೇಡಿ. ಸಂಜೆ ಬೇಕಾದರೆ ಹೋಗಬಹುದು. ಎಂದು ಹೇಳಿ ಅವರ ಬಳಿಯಲ್ಲಿದ್ದು ಸರಸ ಸಲ್ಲಾಪ ಮಾಡಿ ಅವರು ಹೋ ದಂತೆ ತಡೆಗಟ್ಟಿದಳು.

ಇಷ್ಟರಲ್ಲಿ ಮುತ್ತುಸ್ವಾಮಿ ಅಯ್ಯರ ಬಳಿ ಊರಿನವರನೇಕರು ಹೋ ಪೇಯಾಂಡಿ ದೇವನ ವರ್ತನೆ, ಅವನನ್ನು ಸೆರೆ ಹಿಡಿದುದು ಮೊದಲಾ ವಿಷಯಗಳನ್ನು ಕುರಿತು ವಿಚಾರಿಸಲು ಅವರೂ ಸವಿಸ್ತಾರವಾಗಿ ವಿಷಯಗಳನ್ನು ವಿವರಿಸಿ ಹೇಳಿದರು. ಸಂಜೆ ಪೊನ್ನಮ್ಮಾಳ ಅನುಮತಿಯ ಮೇರೆಗೆ ಸುಬ್ರಹ್ಮಣ್ಯ ಅಯ್ಯರ್ ಸಾವಕಾಶವಾಗಿ ಬಂದರು. ಮುತ್ತು ಸ್ವಾಮಿ ಅಯ್ಯರ್ ಸ್ವಭಾವತಃ ಪ್ರತಿಷ್ಠಾಪ್ರಿಯರು. ಊರಿನವರು ಬಂದ ವಿಚಾರಿಸಿದಾಗ ತಮ್ಮ ತಮ್ಮ ತಮ್ಮನ್ನು ಮೊದಲೇ ಬಂದು ಕಾಣಲಿಲ್ಲವೆಂದ

ಅವರಿಗೆ ಅಂತರಂಗದಲ್ಲಿ ಕೋಪವಿತ್ತು. ಆದುದರಿಂದ ಸುಬ್ರಹ್ಮಣ್ಯ ಅಯ್ಯರ್ ಅಲ್ಲಿಗೆ ಹೋದಾಗ ಅವರು ಗಮನಿಸದೆ ಇದ್ದರು. ಮುಖಕೊಟ್ಟು ಮಾತಾಡ ಲಿಲ್ಲ. ಇವರಾದರೂ ಸ್ವಲ್ಪ ಸಗ್ಗಿದರೇ? ಅವರಿಗೆ ಇವರು ತಮ್ಮನಲ್ಲವೆ? ಸ್ವಲ್ಪ ಹೊತ್ತು ಇದ್ದು, ಏನನ್ನೂ ಹೇಳದೆ ತಟಕ್ಕನೆ ಅವರು ಹೊರಕ್ಕೆ ಹೋದರು. ಅದನ್ನು ಗಮನಿಸಿದ ಮುತ್ತುಸ್ವಾಮಿ ಅಯ್ಯರಿಗೆ "ಇವನಿಗಾಗಿ ನಾವು ಇಷ್ಟು ಪಾಡು ಪಡುವುದು. ನಮ್ಮನ್ನು ಇವನು ಇಷ್ಟು ಅಲಕ್ಷ್ಯ ಮಾಡುವುದೆ? ಈವರೆಗೆ ಹೀಗೆ ಇರಲಿಲ್ಲವಲ್ಲಾ, ಸರಿಯೆ! ಇದೂ ವಿಶೇಷವೆ!" ಎಂದು ಮನಸ್ಸಿನಲ್ಲಿ ಕೋಪ ಉಂಟಾಯಿತು. ಸುಬ್ರಹ್ಮಣ್ಯ ಅಯ್ಯರ್ ಮನೆಗೆ ಬಂದು, ಪೊನ್ನಮ್ಮಾಳೊಡನೆ ನಡೆದ ಸಂಗತಿಯನ್ನು ಹೇಳಿದ ಕೂಡಲೆ, "ನಿಮಗಾಗಬೇಕು! ಚೆನ್ನಾಗಿ ಆಗಬೇಕು" ಎಂದು ಹೇಳಿ ಮುಖದಲ್ಲಿ ತಿವಿದಳು. ಸಹೋದರರಲ್ಲಿ ಪರಸ್ಪರ ಮನಸ್ತಾಪಕ್ಕೆ ಈ ಅಲ್ಪ ವಿಷಯ ಕಾರಣವಾಯಿತು.

ಕೆಲವು ದಿನಗಳಾದ ಮೇಲೆ ಸುಬ್ರಹ್ಮಣ್ಯ ಅಯ್ಯರ್ ಮನೆಗೆ ಒಬ್ಬ ಹುಡುಗ ಬಂದನು. ಅವನ ಕುಡಿ ಮೀಸೆಯೂ, ಕುಡುಮಿಯೂ, ಸಾದಿನ ಕೋಟೂ, ಕಿರ್ರೆಂದು ಶಬ್ದ ಮಾಡುವ ಚಡಾವೂ, ಅವನ ಪೋಕಿಯ ನಡಿಗೆಯೂ ಅವನು ಪೋಕರಿಯೆಂದು ಸಿದ್ಧಮಾಡಿದುವು. ಅವನ ಗುಣ, ಅವನ ನಡೆ, ಉಡುಗೆ, ಭಾವನೆ ಇವುಗಳಲ್ಲಿ ಎದ್ದು ಕಾಣುತ್ತಿತ್ತು. ಇದರ ಮೇಲೆ ಏನಾದರೂ ಶಂಕೆ ಇದ್ದರೆ ಐದು ನಿಮಿಷ ಅವನೊಂದಿಗೆ ಮಾತ ನಾಡಿದರೆ ಎಲ್ಲ ಸಂಶಯವೂ ದೂರವಾಗುವುದು. ತುರುಕ ಭಾಷೆಯೇ ಅವನ ಬಾಯಿಯಲ್ಲಿ ಹೆಚ್ಚು ರೂಢಿಯಾಗಿತ್ತು. ಇವನಿಗೇ ಲಕ್ಷ್ಮಿಯನ್ನು ಕೊಡಬೇಕೆಂದು ಪೊನ್ನಮ್ಮಾಳಿಗೆ ಬಹಳ ಇಷ್ಟವಾಗಿತ್ತು. ಅವನು ಅವಳಿಗೆ ಸ್ವಂತ ಅಣ್ಣನ (ಪೊನ್ನಣ್ಣನ) ಮಗ. ಅವನಿಗೆ ಹತ್ತೊಂಬತ್ತು ಅಥವಾ ಇಪ್ಪತ್ತು ವರ್ಷಗಳಾಗಿರಬಹುದು. ನಾಲ್ಕೈದು ವರ್ಷಗಳಿಂದ ತಪ್ಪದೆ ಮ್ಯಾಟ್ರಿಕ್ಯುಲೇಷನ್ ಪರೀಕ್ಷೆಗೆ ಕೂಡುತ್ತಿದ್ದ. ಇನ್ನು ಹತ್ತು ಹದಿನೈದು ವರ್ಷಗಳಲ್ಲಿ ಆ ಪರೀಕ್ಷೆಯಲ್ಲಿ ಉತ್ತೀರ್ಣನಾಗುವ ಭಯ ಹೆಚ್ಚಾ ಗಿರಲಿಲ್ಲ. ಹಣವನ್ನು ಮಾತ್ರ ಯಾರಾದರೂ ಆಲಸ್ಯವಿಲ್ಲದೆ ಕೊಡುತ್ತಿರ

ಬೇಕು. ಮಹಾರಾಜರಾದ ಸುಬ್ರಹ್ಮಣ್ಯ ಅಯ್ಯರೇ ಈಗ ಸದ್ಯಕ
ಈ ಧರ್ಮವನ್ನು ನಡೆಸಿಕೊಂಡು ಬರುತ್ತಿದ್ದರು. "ನಮ್ಮ 'ವೈದಿ' ತುಂ
ಚೆಲುವಾದ ಹುಡುಗ. ಅವನೊಡನೆ ಒಬ್ಬರೂ ಮಾತಾಡಲಾಗದು– ತುರು
ಭಾಷೆ ಕೂಡ ಅವನಿಗೆ ಗೊತ್ತಿದೆ" ಎಂದು ಪೊನ್ನಮ್ಮಾಳ್ ಹಲವು ಬಾ
ಅವನ ಪ್ರಶಂಸೆಯನ್ನು ಕಾಡು ಹರಟೆಮಲ್ಲಿಯರ ಮಹಾಸಭೆಯಲ್ಲಿ ಹ
ಸಿದ್ದಳು. ಹಣಕ್ಕಾಗಲಿ, ಚೆಲುವಿಗಾಗಲಿ ಯಾರನ್ನಾದರೂ ವರ್ಣಿಸಬೇಕ
ಗಿದ್ದರೆ ಅವಳು ತನ್ನ ತೌರು ಮನೆಯನ್ನೂ ವೈದ್ಯನಾಥನನ್ನೂ ಕುರಿತ
ಪ್ರಸ್ತಾಪ ಮಾಡದೆ ಇರಲಾರಳು. ಇದು ಅವಳ ಪದ್ಧತಿ. ಅವನ ಹೆಸರ
ವೈದ್ಯನಾಥ.

ಅವನು ಬಂದ ಆ ಮಧ್ಯಾಹ್ನ ಲಕ್ಷ್ಮಿ ಚಿಕ್ಕಮ್ಮನ ಮನೆಗೆ ಏನೋ
ಕೆಲಸಕ್ಕಾಗಿ ಹೋದಳು. ಅವಳನ್ನು ಕಂಡಕೂಡಲೆ, ಪೊನ್ನಮ್ಮಾಳ
ವೈದ್ಯನಾಥನನ್ನು ನೋಡಿ, "ಇವಳೇನಪ್ಪಾ ನಿನ್ನ ಹೆಂಡತಿ. ಮಧುರೆಯವನ
ಹೊಡೆದುಕೊಂಡು ಹೋದ" ಎಂದಳು. ಅದಕ್ಕೆ ಅವನು, "ಅವಳು ಈಗಲ
ನನ್ನ ಹೆಂಡತಿಯೇ. ಮಧುರೆಯ ಹುಡುಗ ಬಿದ್ದಿರಲಿ," ಎಂದು ಹೇಳಿದನ
ಲಕ್ಷ್ಮಿಗೆ ಏನೂ ತೋರದೆ ಹೋಯಿತು. ಹೋದ ಕೆಲಸವನ್ನು ನೋ
ಕೊಂಡು ಹಿಂತಿರುಗಲು ಯತ್ನಿಸಿದಳು. ಪೊನ್ನಮ್ಮಾಳ್, "ಏನೇ ಅವನ
ಎಷ್ಟು ಪ್ರೀತಿಯಿಂದ ನಿನ್ನನ್ನು ವಿಚಾರಿಸುತ್ತಾನೆ. ನೀನು ಅವನನ್ನ
'ಯಾವಾಗ ಬಂದೆ' ಎಂದು ಕೂಡ ಕೇಳಬಾರದೆ? ಸುಮ್ಮನೆ ಕೇಳು. ಬಾಯ
ಲ್ಲಿರುವ ಮುತ್ತು ಉದುರಿ ಏನೂ ಹೋಗುವುದಿಲ್ಲ. ಹೋದರೆ ನಾನಿದ್ದೇನ
ಆರಿಸಿ ಕೊಡುವುದಕ್ಕೆ" ಎನ್ನಲು ಅವಳು ಏನನ್ನೂ ಹೇಳದೆ ತಲೆಯನ್ನ
ಬಗ್ಗಿಸಿಕೊಂಡು ನಾಚಿಕೆಯಿಂದ ನಿಂತಳು. ಕೂಡಲೆ ಪೊನ್ನಮ್ಮಾಳ
"ಎಲೆ, ಆತಿಶಯವೆ! ಸೀಮೆಯ ಸರಕೆ! ಏನು ಬಿಂಕ ಮಾಡುತ್ತಾಳೆಯೆ
ಈ ಹುಡುಗಿ! ನಮ್ಮನ್ನೆಲ್ಲ ಅಲಕ್ಷ್ಯಮಾಡಿ ಮಾತಾಡುವೆಯಾ?" ಎಂದ
ಹೇಳಲು ಪೋಕರಿ ವೈದ್ಯನಾಥನು, "ಹೆಂಡತಿಯಲ್ಲವೆ? ನೀನಿರಬೇಕಾದ
ಮಾತನಾಡುವಳೆ? ನೀನು ಅತ್ತಕಡೆ ಹೋಗು, ಮಾತಾಡುವಳು" ಎಂದ
ಕಲ್ಯಾಣಿಯನ್ನು ನೋಡಿ, "ಏನೆ? ಹಾಗೇ ತಾನೇ. ನನ್ನ ಚಿನ್ನ! ಲೇಡಿ

ಯಂಗ್ ಲೇಡಿ!! ಮೈ ಡಿಯರ್! ಮೈ ಡಿಯರ್!!" ಎಂದು ಹೇಳುತ್ತ ಅವಳನ್ನು ನೋಡಿ ಕಾಮಾವೇಶದೊಡನೆ ಎದ್ದು ಹಿಂಬಾಲಿಸಿದನು. ಲಕ್ಷ್ಮಿ ಯಾದರೋ ಭಯಗೊಂಡು ತನ್ನ ಮನೆಗೆ ಅರಚಿಕೊಂಡು ಓಡಿಬಂದಳು. ಆಗ ತಾನೆ ಅವರ ತಂದೆ ನಿದ್ದೆಯಿಂದ ಎದ್ದಿದ್ದರು. ಓಡಿ ಬರುವುದನ್ನು ಕಂಡು ಅವರು, "ಏನೇ ಅದು?" ಎಂದು ಕೇಳಲು ಅವಳು, "ಏನಿಲ್ಲವಪ್ಪ" ಎಂದು ಹೇಳಿದಳು. ಮತ್ತೆ ಅವರು "ಬಿಕ್ಕಿ ಬಿಕ್ಕಿ ಅಳುತ್ತಿರುವೆಯಲ್ಲ. ಸಮಾಚಾರವೇನೆ?" ಎಂದು ಒತ್ತಾಯಮಾಡಿ ಕೇಳಲು ಅವಳು ನಡೆದು ದೆಲ್ಲವನ್ನು ಹೇಳಿದಳು. ಅಷ್ಟರಲ್ಲಿ ಕಮಲಾಂಬಾಳ್ ಕೂಡ ಅಲ್ಲಿಗೆ ಬಂದಳು. ಕೂಡಲೆ ಅವಳನ್ನು ನೋಡಿ, ಮುತ್ತುಸ್ವಾಮಿ ಅಯ್ಯರ್, "ನಿನಗೇನಾದರೂ ಬುದ್ಧಿ ಇದೆಯೇ? ಅವಳನ್ನು ನೀನೇತಕ್ಕೆ ಅವರ ಮನೆಗೆ ಹೋಗೆಂದು ಹೇಳಿದೆ?" ಎಂದರು. ಅದಕ್ಕೆ ಕಮಲಾಂಬಾಳ್, "ಸಣ್ಣ ಕೆಲಸವೇ ಅಲ್ಲವೆ? ಇದಕ್ಕಾಗಿ ನಾನು ಹೋಗಬೇಕೆ? ಹೋಗಿ ಒಂದು ಕ್ಷಣದಲ್ಲಿ ಬಂದುಬಿಡುವಳೆಂದು ಅವಳನ್ನು ಕಳುಹಿಸಿದೆ. ನನ್ನದೇಕೊ ತಪ್ಪಾಯಿತು. ನಾನು ಹೇಳಬಾರದಾಗಿತ್ತು" ಎಂದು ಹೇಳಿದಳು. ಮುತ್ತುಸ್ವಾಮಿ ಅಯ್ಯರ್ ಮಗಳನ್ನು ನೋಡಿ,"ಅವಳ ಮನೆಗೆ ಹೋದಾಗ ನನ್ನನ್ನು ಕೇಳಿ ಹೋದೆಯಾ? ಹೋಗು ಅತ್ತ ಕಡೆ...ನನ್ನ ಮುಂದೆ ಅಳಬೇಡ... ಹೋಗು" ಎಂದು ಗದರಿಸಿ ಹೇಳಿದರು. ಲಕ್ಷ್ಮಿ ಪಾಪ, ಅಳುತ್ತ ಒಳಕ್ಕೆ ಹೊರಟುಬಿಟ್ಟಳು. ಆಗ ಎರಡನೆಯ (ವಠಾರದಲ್ಲಿ) ಪೊನ್ನು- ಒಬ್ಬ ಬಾಲವಿಧವೆ ದೋಸೆ ಹಿಟ್ಟನ್ನು ಅರೆಯುತ್ತಿದ್ದಳು. ಅವಳು ಈ ಸಂಗತಿ ಎಲ್ಲವನ್ನು ಪೊನ್ನ ಮ್ಮಾಳ್ ಬಳಿ ಹೋಗಿ ಒಂದಕ್ಕೆ ಹತ್ತಾಗಿ ಚಾಡಿಹೇಳಿದಳು.

ಅದೇ ಸಂಜೆ ಸುಬ್ರಹ್ಮಣ್ಯ ಅಯ್ಯರೂ, ವೈದ್ಯನಾಥನೂ, ನದಿಯ ದಡದ ಕಡೆ ಹೋಗುತ್ತಿದ್ದರು. ಆಗ ಮುತ್ತುಸ್ವಾಮಿ ಅಯ್ಯರ್ ಎದುರಿ ನಲ್ಲಿ ಬಂದರು. ಬಂದವರು ವೈದ್ಯನಾಥನನ್ನು ಯಾವಾಗ ಬಂದೆ ಎಂದು ಕೇಳಲಿಲ್ಲ. ಅವನನ್ನು ಕಂಡಕೂಡಲೆ ಅವನು ಅಯೋಗ್ಯನೆಂದು ಅವರಿಗೆ ತೋರಿದುದು ಮಾತ್ರವಲ್ಲದೆ ಮಧ್ಯಾಹ್ನ ನಡೆದ ಸಂಗತಿಯೂ ನೆನಪಿಗೆ ಬಂದಿತು. ಇವರೊಡನೆ ಏನು ಮಾತೆಂದು ಅವರು ಹೊರಟು ಬಿಟ್ಟರು.

ಕೂಡಲೆ ವೈದ್ಯನಾಥನು, "ಏನು ಬಹಳ ಅಸಡ್ಡೆಯಿಂದ ಹೋಗುತ್ತಿ ರಲ್ಲಾ?" ಎಂದು ಕೇಳಲು ಸುಬ್ರಹ್ಮಣ್ಯ ಅಯ್ಯರ್, "ಅವರೆಲ್ಲ ದೊ ವರು. ನಮ್ಮನ್ನೆಲ್ಲ ಲಕ್ಷ್ಯಮಾಡುವರೆ?" ಎಂದು ಹೇಳಿದನು. ವೈದ್ಯನಾಥನ "ಅಷ್ಟು ದೊಡ್ಡವರೆ? ನಾವೂ ಒಂದು ಕೈ ನೋಡೋಣವೆ? ನೋ ತ್ತೀರಾ? ಎಲಾ ನಿನ್ನ......" ಎಂದು ಮೀಸೆಯನ್ನು ತಿರುವುತ್ತ ಶೌ ದಿಂದ ಮಾತಾಡಿದನು. ಊರಿಗೆ ಹೋಗುವುದರೊಳಗೆ ಏನಾದರೂ ಒಂ ನಾಟಕವನ್ನು ಹೂಡಿಯೇ ಹೋಗಬೇಕೆಂದು ತನ್ನೊಳಗೇ ತೀರ್ಮಾನಿ ಕೊಂಡನು.

## ೧೬. "ಕಬಡ್ಡಿ! ಕಬಡ್ಡಿ!!"

ಕೆಲವು ದಿನಗಳಾದ ಮೇಲೆ ಕಮಲಾಂಬಾಳಿಗೆ ಒಂದು ಗಂಡುಮ ಹುಟ್ಟಿತು. ಬಹಳ ದಿನಗಳಿಂದ ಪುತ್ರಭಾಗ್ಯವಿಲ್ಲದ ಮುತ್ತುಸ್ವಾ ಅಯ್ಯರಿಗೆ ಪುತ್ರ ಜನನದಿಂದ ಆದ ಸಂತೋಷಕ್ಕೆ ಮಿತಿ ಇರಲಿ ಹುಟ್ಟು ಕುರುಡನಿಗೆ ತಟಾರನೆ ಕಣ್ಣು ಬಂದರೂ ಅಷ್ಟು ಸಂತೋ ವಿರಲಾರದು. ಮದುವೆಯ ಸಂದರ್ಭದಲ್ಲಿಯೇ ಅವಳು ಗರ್ಭವತಿಯಾಗಿದ್ದಳ ಆದರೆ ಅವಳಿಗೆ ಹೆಣ್ಣುಮಕ್ಕಳು ಹುಟ್ಟುವುದೂ ಸಾಯುವುದೂ ಸಹ ವಾಗಿತ್ತೇ ಹೊರತು ಈವರೆಗೂ ಒಂದು ಗಂಡುಮಗುವಾದರೂ ಹುಟ್ಟಿ ಲಿಲ್ಲ. ಕನ್ಯಾದಾನದ ಫಲ ಕೈಮೇಲೆ ಸಿದ್ಧಿಸಿತೆಂದು ಮುತ್ತುಸ್ವಾಮಿ ಅಯ್ಯರ ಆನಂದಿಸಿ ಮಗು ಹುಟ್ಟಿದ ಮರುದಿನವೆ ಬೀಗರಾದ ರಾಮಶಾಸ್ತ್ರಿಗಳವರಿ ಇಷ್ಟಮಿತ್ರ ಪರಿವಾರ ಸಮೇತ ಬಂಧುಜನಗಳೊಡನೆ ಬಂದು ಪುತ್ರೋ ತ್ಸವನ್ನು ನಡೆಯಿಸಿಕೊಡಬೇಕೆಂದು ಪತ್ರ ಬರೆದರು. ಆ ಪತ್ರವನ್ನು ಕಂ ಕೂಡಲೆ ಅಳಿಯ ಶ್ರೀನಿವಾಸನೂ, ರಾಮಸ್ವಾಮಿ ಶಾಸ್ತ್ರಿಗಳೂ, ಕೃಷ್ಣ ಅಯ್ಯರ್ ಮೊದಲಾದವರೆಲ್ಲರೂ ಶಿರುಕುಳಕ್ಕೆ ಬಂದು ಸೇರಿದರು. ಪುಣ್ಯಾ ವಾಚನವಾದಮೇಲೆ ಶ್ರೀನಿವಾಸನನ್ನು ಕೆಲವು ದಿನಗಳು ಇದ್ದು ಬರುವಂ ಹೇಳಿ, ಉಳಿದವರು ಮಧುರೆಗೆ ಹೊರಟುಬಿಟ್ಟರು.

ಶ್ರೀನಿವಾಸನು ಬರುತ್ತಾನೆಂಬ ಸುದ್ದಿಯನ್ನು ಕೇಳಿದ ಮೊದಲು ನ್ನಮ್ಮಾಳ್ ಸೋದರಳಿಯನಾದ ವೈದ್ಯನಾಥನು ಹೊಟ್ಟೆಕಿಚ್ಚು ಪಡುತ್ತಿ ನು. "ಆ ಹುಡುಗ ಬರಲಿ, ಇದ್ದೂ ಇಲ್ಲದಂತೆ ಮಾಡಿಬಿಡುತ್ತೇನೆ." ಂದು ತನ್ನೊಳಗೇ ಹಲವುಬಾರಿ ಪ್ರತಿಜ್ಞೆ ಮಾಡಿಕೊಂಡನು. ತನಗಿದ್ದ ್ವೇಷವನ್ನು ತೀರಿಸಿಕೊಳ್ಳಲು ಶೀಘ್ರದಲ್ಲಿಯೇ ಅವನಿಗೊಂದು ಅವಕಾಶ ೊರೆಯಿತು. ಒಂದು ದಿನ ಸಂಜೆ ಕುಂಕುಮ ನದಿ ಎಂದೂ ಸ್ವರ್ಣ ಾರಣಿ ಎಂದೂ ಪ್ರಸಿದ್ಧವಾದ ಆ ಊರ ನದಿಯ ದಡದಲ್ಲಿ ವಿಸ್ತಾರವಾಗಿ ರಡಿದ್ದ ಬಿಳಿಯ ಮರಳಿನ ರಾಶಿಯಲ್ಲಿ ನಲವತ್ತು ಐವತ್ತು ಹುಡುಗರು ಬಡ್ಡಿ ಆಟವನ್ನು ಆಡುತ್ತಿದ್ದರು. ಇಂಗ್ಲೀಷು ವಿದ್ಯಾಭ್ಯಾಸ ಹೆಚ್ಚು ದಂತೆ ನಮ್ಮ ದೇಶೀಯ ಆಟಪಾಟಗಳ ಪದ್ಧತಿಗಳನ್ನು ನಾವು ಮರೆತೆವು. ೂರ್ಯನ ಮೃದುವಾದ ಕಿರಣಗಳ ಪ್ರಕಾಶವು ಕುಗ್ಗುತ್ತಿರಲು,ಯುವರಾಜನಂತೆ ಾರಿ ಕಾಯುತ್ತಿದ್ದ ಚಂದ್ರನು ತನ್ನ ರಾಜ್ಯಭಾರವನ್ನು ಆರಂಭ ಮಾಡಿ, ್ರೇಮಮಯವಾಗಿ ಲೋಕವನ್ನು ಆನಂದದಲ್ಲಿ ಮುಳುಗಿಸಲು, ನಕ್ಷತ್ರಗಳು ಡಿದು ಆಕಾಶದಲ್ಲಿ ರಂಭೆ ಊರ್ವಶಿಯರಂತೆ ಸಂತೋಷವಾಗಿ ನಾಟ್ಯವಾಡಲು, ೇಸಗೆ ಶಮನಗೊಂಡು, ಆಕಾಶ ತಂಪುಗೊಂಡು ಶೀತಲವಾಗಿ ತೆಂಗಾಳಿ ೀಸಲು, ಭಗವದ್ಭಕ್ತಿಯಿಂದ ತುಂಬಿದ ಯೋಗಿಗಳ ಮನಸ್ಸಿನಂತೆ ಶಾಂತ ್ವರೂಪದಿಂದ ರಾರಾಜಿಸುವ ಆ ಸಂಧಿಕಾಲದಲ್ಲಿ ಬೀಸುವ ತಂಗಾಳಿ ುಂತೆಯೂ, ಹಾಡುವ ಪಕ್ಷಿಗಳಂತೆಯೂ, ತಮ್ಮ ಚಿಂತೆಗಳನ್ನೂ ಮರೆತು ರಳಿಯ ಸುಪ್ಪತ್ತಿಗೆಗಳಂತಿದ್ದ ಮರಳಿನ ಹಾಸಿಗೆಯ ಮೇಲೆ ಉಲ್ಲಾಸ ಾಗಿ ಓಡಿ ಆಡುವುದನ್ನು ಬಿಟ್ಟು ಈ ಕಾಲದ ಹುಡುಗರು ಹಲವರು ಹಾವಿನ ಾಯಿಯಲ್ಲಿ ಸಿಕ್ಕಿ ಬಿದ್ದ ಕಪ್ಪೆಗಳಂತೆ ಪುಸ್ತಕಗಳನ್ನು ಕಟ್ಟಿಕೊಂಡು ಅಳುತ್ತ ಾಲವನ್ನು ಕಳೆಯುತ್ತಾರೆ.

ಈ ಮಾತಿರಲಿ, ಶಿರುಕುಳದ ನದಿಯ ದಡದಲ್ಲಿ ಅಂದು ಅನೇಕ ಹುಡು ರು ಸೇರಿ ಕಬಡ್ಡಿ ಆಟವನ್ನು ಆಡುತ್ತಿದ್ದರು. ವೈದ್ಯನಾಥನು ತನ್ನ ೂರ್ಖತನದಿಂದ ಅವರಿಗೆ ನಾಯಕನಾದನು. ಅವನು ಸೇರಿದ ಆಟದಲ್ಲಿ ್ರೀನಿವಾಸನಿಗೆ ಸೇರಲು ಸ್ವಲ್ಪವೂ ಮನಸ್ಸಿರಲಿಲ್ಲ. ಆದರೂ ಅವನ ಒಳ್ಳೆಯ

ಸ್ನೇಹಿತರಲ್ಲಿ ಕೆಲವರು ಅದರಲ್ಲಿ ಸೇರಿ ಅವನನ್ನೂ ಸೇರುವಂತೆ ಒತ್ತಾಂ
ಮಾಡಿದುದರಿಂದ ಅವನು ಅದರಲ್ಲಿ ಸೇರಿದನು. ಅಷ್ಟೆ ಅಲ್ಲದೆ ಆ ಸಂ
ಆಟದಲ್ಲಿ ವಿಶೇಷ ತೃಪ್ತಿ ಇದ್ದಿತು. ಹಗಲೆಲ್ಲ ಅವನು ಚೆನ್ನಾಗಿ ಓದಿದ್ದನ
ಓದನ್ನು ಬಿಟ್ಟು ಹೊರಕ್ಕೆ ಬಂದ ಅವನಿಗೆ ಮದವೇರಿ ತಿರುಗಾಡು
ಜಿಂಕೆಯ ಮರಿಯಂತೆ ಅತ್ತಲೂ ಇತ್ತಲೂ ಉಲ್ಲಾಸದಿಂದ ಆಟವಾಡು
ಆಸೆಯಾಗಿತ್ತು.

ಅಂದು ಸೂರ್ಯಾಸ್ತಮಾನ ಬಹಳ ಸೊಗಸಾಗಿತ್ತು. ಗುಂಪು ಗುಂಪಾ
ಗಂಟೆಗಳನ್ನು ಶಬ್ದ ಮಾಡಿಕೊಂಡು ದನಗಳು ಬೆಟ್ಟದಿಂದ ಇಳಿಯುವುದೂ
ಕಾಗೆಗಳು 'ಕಾ ಕಾ' ಎಂದು ಆನಂದದಿಂದ ಅಬ್ಬರಿಸುತ್ತ ಸಾಲಾಗಿ ಆಕಾ
ಮಾರ್ಗದಲ್ಲಿ ಮೆರವಣಿಗೆಯಂತೆ ಹೋಗುವುದೂ, 'ಚೀಂಯ್' ಎಂದು ಝೇಂ
ರಿಸುತ್ತ ದುಂಬಿಗಳು ಶ್ರುತಿ ಮಾಡುತ್ತಿರಲು, ಗಿಳಿಗಳು ನದಿಯ ದಡದಲ್ಲಿ
ಅರಳಿಮರಗಳಲ್ಲಿ ಪ್ರೇಮಸಲ್ಲಾಪವನ್ನು ಮಾಡುವುದೂ, ನದಿಯಲ್ಲಿ ನೀರು ಕ
ಡುವವರು ಯಾರೂ ಇಲ್ಲದೆ ಅದು ಮೃದುವಾಗಿ ವೀಣಾರವವನ್ನು ಮಾಡುತ್ತ
ಹರಿಯುವುದೂ, ಅಸ್ತಮಾನವಾದ ಮೇಲೆ ಬೀಸುವ ಗಾಳಿಯಲ್ಲಿ ಬೊಂಬಿ
ಮರಗಳು ನವಿಲುಗಳಂತೆ ನೃತ್ಯ ಮಾಡುವುದೂ- ಇವೆಲ್ಲವನ್ನೂ ಕಂ
ಶ್ರೀನಿವಾಸನಿಗೆ ತನಗೇ ತಿಳಿಯದೆ ಆನಂದ ಉಕ್ಕಿ ಬಂತು. ಅವನು ತಲ
ಯನ್ನೆತ್ತಿ ನೋಡಿದನು. ಆಗ ಆಕಾಶದಲ್ಲಿ ಒಂದು ಸೊಗಸಾದ ಗುಲಾಬಿ
ಬಣ್ಣ ಬದಲಾಯಿಸಿ, ಮೃದುವಾದ ನೀಲವರ್ಣ ಹರಡಿ ಮಧ್ಯೆ ಕೆಲವ
ದ್ವೀಪಗಳಂತೆ ಮೇಘಗಳು ನಿಂತಿದ್ದುವು. ಒಂದೇ ಒಂದು ನಕ್ಷತ್ರ ಉದಯ
ವಾಗಿತ್ತು. ಅದು ಸ್ವಲ್ಪ ಹೊತ್ತು ಸಂಚರಿಸಿದ ಮೇಲೆ ಮರೆಯಾಗಿ ಮತ್ತೆ
ಕಾಣಿಸಿಕೊಂಡು, ಕಾಡಿನಲ್ಲಿ ನಡೆಯುತ್ತಿದ್ದ ಅರ್ಜುನನನ್ನು ಹುಡುಕುತ್ತ
ಅಲೆದಾಡಿದ ಊರ್ವಶಿಯಂತೆ ಕಂಡಿತು. ಈ ವಿಧವಾದ ಇಂದ್ರಜಾಲವಿಲಾಸ
ಗಳಿಂದ ಕೂಡಿದ ಅಸ್ತಮಾನ ಮಹೋತ್ಸವವು ಬಹು ಮನೋಹರವಾಗಿರು
ತ್ತಿರಲು ಅದನ್ನು ನೋಡಿದ ಶ್ರೀನಿವಾಸನಿಗೆ ನದಿಯಂತೆ ಹರಿಯ
ಬೇಕೆಂದೂ, ಎಲೆಗಳಂತೆ ಆಡಬೇಕೆಂದೂ, ಹಕ್ಕಿಗಳಂತೆ ಹಾರಬೇಕೆಂದೂ
ನಕ್ಷತ್ರಗಳಂತೆ ತೂಗಬೇಕೆಂದೂ ಆಸೆಯಾಗಿತ್ತು. ಮರಳಿನಲ್ಲಿ ಆಟವಾಡ

ದ್ದ ಹುಡುಗರೂ ಆನಂದನರ್ತನವನ್ನು ಮಾಡುವ, ಸಂಧ್ಯಾದೇವಿಯ
ೋಹಜಾಲದಲ್ಲಿ ಸಿಕ್ಕಿಬಿದ್ದು ಸಂಗೀತದಿಂದ ಮೋಹಗೊಂಡು ಆ ಹೆಡೆ
ನ್ನು ಬಿಚ್ಚಿ ಆಡುವ ಹಾವುಗಳಂತೆ ಆಡುತ್ತಿದ್ದ ಹಾಗೆ ಅವನಿಗೆ ಕಂಡರು!
ಡೆಯೆತ್ತಿದರೂ, ಹಾವು ಹಾವೇ ಎಂಬುದನ್ನು ಮರೆತು, ಇಲ್ಲಿ ಸೇರಿದ್ದ
ುಡುಗರು ಮಾನವ ಕ್ರೋಧಗಳನ್ನು ತೊರೆದು, ಮೇಲೆ ಹಾರುವ ವಿದ್ಯಾ
ರ ಗಣವೆಂದು ಭಾವಿಸಿ ಅವರೊಡನೆ ತಾನೂ ಆಟವಾಡಲು ಬಯಸಿದನು.

ಆಟವು ಸಾಗುತ್ತಿತ್ತು. ಪ್ರತಿಯೊಬ್ಬರೂ "ಕಬಡ್ಡಿ" ಎನ್ನುವ ಬೀಜಾ
ರವನ್ನು ಜಪಿಸುತ್ತ ಎದುರಾಳಿಗಳ ಮೇಲೆ ದಾಳಿಮಾಡಿ ನಿಯಮದಂತೆ
ೂರಟರು. ಶ್ರೀನಿವಾಸನ ಸರದಿಯೂ ಬಂತು. ಅವನೂ "ಕಬಡ್ಡಿ"
ಕಬಡ್ಡಿ" ಎಂದು ಹೇಳುತ್ತ ಹೋದಾಗ ಉಸಿರು ಬಿಟ್ಟನೆಂದು ಸುಳ್ಳು
ೂ ಹೇಳಿ ಅವನ ಮೇಲೆ ಕೊಕ್ಕರೆಯಂತೆ ಕಣ್ಣಿಟ್ಟಿದ್ದ ವೈದ್ಯನಾಥನು
ವನನ್ನು ಹಿಡಿದು ಬಗ್ಗಿಸಿ, ಕೆಳಗೆ ಕೆಡವಿ, ಮರಳಿನಲ್ಲಿ ಉಜ್ಜಿ, ಹೊಡೆದು
ವುಟೆ ಗಾಯಗೊಳಿಸಿದನು. ಯಾರು ಬಂದು ಬಿಡಿಸಿದರೂ ಆ ಮರಟು
ುಡುಗನನ್ನು ತಡೆಯಲು ಆಗಲಿಲ್ಲ. ಶ್ರೀನಿವಾಸನು, ಪಾಪ! ಅರಚಿಕೊಳ್ಳು
ದ್ದಾನೆ. ಅವನನ್ನು ಆ ಮೂರ್ಖನ ಹಿಡಿತದಿಂದ ತಪ್ಪಿಸಿ ಮನೆಗೆ ಮುಟ್ಟಿಸು
ದು ಬಹು ಕಷ್ಟವಾಯಿತು. ಅವನ ಶರೀರ ಬಹಳ ಕೋಮಲವಾದುದರಿಂದ
ಲ್ಲೆಲ್ಲಿಯೂ ಗೀರುಗಳೂ ಗಾಯಗಳೂ ಇದ್ದುವು. ನಡೆದ ಸಂಗತಿಯನ್ನು
ವನು ಮನೆಯಲ್ಲಿ ಯಾರ ಬಳಿಯೂ ಹೇಳಲಿಲ್ಲ. ಆದರೆ ಮುತ್ತುಸ್ವಾಮಿ
ಯ್ಯರ್ ಇದೆಲ್ಲ ನಡೆಯುತ್ತಿದ್ದಾಗ ನದಿಯ ದಡದಲ್ಲಿ ಸಂಧ್ಯಾವಂದನೆ
ಾಡುತ್ತಿದ್ದರು. ಅಲ್ಲಿದ್ದ ಹುಡುಗರು ಅವರ ಬಳಿಗೆ ಹೋಗಿ ಎಲ್ಲ ಸಮಾ
ಾರವನ್ನು ವಿಸ್ತಾರವಾಗಿ ಹೇಳಿಬಿಟ್ಟರು. ಅಷ್ಟರಲ್ಲಿ ತನ್ನ ವಿರೋಧಿ
ನ್ನು ಭಂಗಪಡಿಸಿದ ಗರ್ವದ ಮದದಿಂದ ವೈದ್ಯನಾಥನು ಮನೆಗೆ ಹಿಂತಿ
ಗಿದನು. ಆಗ ಲಕ್ಷ್ಮಿ ಗುಡಿಗೆ ಹೋಗಿ, ಅಲ್ಲಿ ತುಪ್ಪದ ದೀಪವನ್ನಿಟ್ಟು
ಂತಿರುಗುತ್ತಿದ್ದಳು. ಅದನ್ನು ನೋಡಿ ಆ ಒರಟನು ಅವಳ ಮೇಲೆ
ದ್ದು ಮುಂದೆ ಸಾಗಿದನು. ಅವಳು ಕೂಡಲೆ ಅಳುತ್ತ ಮನೆಗೆ
ಂದು ತಾಯಿಯೊಡನೆ ನಡೆದ ಸಂಗತಿಯನ್ನು ಹೇಳಿದಳು. ಹೇಳುತ್ತಿರು

ವಾಗಲೆ ಮುತ್ತುಸ್ವಾಮಿ ಅಯ್ಯರ್ ಮನೆಗೆ ಹಿಂತಿರುಗಿದ್ದರು. ಬಂ
ಕೂಡಲೆ ಶ್ರೀನಿವಾಸನನ್ನು ದೀಪದ ಬೆಳಕಿಗೆ ಕರೆದು ಅವನ ಮೈಯನ್ನ
ಪರೀಕ್ಷಿಸಲು, ಎಲ್ಲಿ ನೋಡಿದರೂ ಗಾಯಗಳೂ, ಗೀರುಗಳೂ ತುಂಬಿದ್ದುದ
ಅವರಿಗೆ ತಡೆಯಲಾಗಲಿಲ್ಲ. ಲಕ್ಷ್ಮಿಯ ವಿಷಯದಲ್ಲಿ ಆ ವೈದ್ಯನಾಥ
ನಡೆಸಿದ ಅತ್ಯಾಚಾರವೂ ಅವರ ಕಿವಿಗೆ ಬಿತ್ತು. ಕೂಡಲೆ ಕೋಪಾವೇ
ದಿಂದ ತಮ್ಮನನ್ನು ಕರೆದುಕೊಂಡು ಬರುವಂತೆ ಆಳನ್ನು ಕಳುಹಿಸಿ ಹೊರಕ
ಬಂದರು. ಆಗ ಸುಬ್ರಹ್ಮಣ್ಯ ಅಯ್ಯರೂ, ವೈದ್ಯನಾಥನೂ ಪಡಸಾ
ಯಲ್ಲಿ ಕುಳಿತು ಮಾತನಾಡುತ್ತಿದ್ದರು. ಕರೆ ಬಂದ ಕೂಡಲೆ ಸುಬ್ರಹ್ಮಣ
ಅಯ್ಯರ್ ಮುತ್ತುಸ್ವಾಮಿಯ ಮನೆಗೆ ಬಂದರು.

ಮುತ್ತುಸ್ವಾಮಿ ಅಯ್ಯರ್:- (ಅವರನ್ನು ನೋಡಿ) "ಏನಯ್ಯಾ
ಶುದ್ಧ ದುಷ್ಟರನ್ನು ಮನೆಯಲ್ಲಿ ಸೇರಿಸಿಕೊಂಡು... ಇದು ನಿನಗೆ ಚೆನ್ನಾ
ದೆಯೇ?" ಎಂದರು. ಅವರ ಹಿಂದೆಯೇ ಬಂದ ವೈದ್ಯನಾಥನು ಗುಹೆಯಿಂ
ಹಾಯುವ ಸಿಂಹದಂತೆ ಹಾಯುತ್ತ ಎದುರಿಗೆ ಬಂದು, "ಏನು ದುಷ್ಟತನ
ಕಂಡಿರಿ ? ನಿಮ್ಮ ಮನೆಗೆ ಬಂದು ಯಾರ್‍ರೀ ಮಾಡಿದ್ದು... ದುಷ್ಟರಂತೆ
ಮಾತಾಡುವ ರೀತಿಯಲ್ಲಿ ಮಾತನಾಡಿ ! ಇಲ್ಲವಾದರೆ ಹಲ್ಲು ಉದುರಿಸಬೇಕ
ದೀತು—ರಾಮೇಶ್ವರಕ್ಕೆ ಹೋಗಬೇಕಾದೀತು—ಹುಷಾರ್!!" ಎಂದ ಕೂಡ
ಮುತ್ತುಸ್ವಾಮಿ ಅಯ್ಯರ್ "ಏನೋ ಅದು! ಏನು ಹೇಳಿದೆ ?" ಎಂದರು
ವೈದ್ಯನಾಥನು, "ಹೆಚ್ಚಾಗಿ ಮಾತನಾಡಿದರೆ ಹಲ್ಲು ಮುರಿದು ಹೋದೀತು
ಆಸಾಮಿ ಯಾವ ಊರಿನವನೆಂದು ತಿಳಿದುಕೊಂಡಿದ್ದೀರಿ?" ಎಂದು ಹೇಳಲ
ಮುತ್ತುಸ್ವಾಮಿ ಅಯ್ಯರಿಗೆ ಕೋಪವು ಗಾಳಿ ಬೀಸಿದ ಬೆಂಕಿಯಂತೆ ಉಜ್ವಲ
ವಾಯಿತು. ಅವರು ತಮ್ಮನನ್ನು ನೋಡಿ "ನಿನಗೆ ಇದು ಚೆನ್ನಾಗಿದೆಯೆ ?"
ಎಂದು ಕೇಳಿದರು. ಸುಬ್ರಹ್ಮಣ್ಯ ಅಯ್ಯರ್ ವೈದ್ಯನಾಥನ ಪರ ವಹಿಸಿ
ಕೊಂಡು "ಅವನ ಮೇಲೆ ದೋಷವೇನೂ ಇಲ್ಲದಿದ್ದಾಗ ಕೋಪಿಸಿಕೊಂಡರ
ಯಾರು ತಾನೆ ಸಹಿಸುವರು ?" ಎಂದರು. ಮುತ್ತುಸ್ವಾಮಿ ಅಯ್ಯರ್
"ಯಾವ ದೋಷವೂ ಇಲ್ಲವೆ ? ಒಳ್ಳೆಯದು. ನೀನೇನು ಮಾಡೀಯೆ. ನನ್ನ
ಬುದ್ಧಿಯನ್ನು ಚಪ್ಪಲಿಯಿಂದ ಹೊಡೆಯಬೇಕು" ಎಂದು ಹಿಮ್ಮೆಟ್ಟಿದರು.

ಅವರು ತಗ್ಗಿದುದನ್ನು ಕಂಡು ವೈದ್ಯನಾಥನು ಸಂದೇಹಕ್ಕಾಗಿ ಇಟ್ಟಿದ್ದ ಸ್ವಲ್ಪ ಮರ್ಯಾದೆಯನ್ನೂ ಬಿಟ್ಟುಕೊಟ್ಟು, ಏಕವಚನ ಪ್ರಯೋಗವನ್ನಾರಂಭಿಸಿ, ಒಂದೇ ಸಮನೆ ಹಿಂದುಸ್ತಾನಿ-ತುರುಕ ಮಾತುಗಳನ್ನು ಸೇರಿಸಿ, ಇಲ್ಲಿ ಹೇಳಲು ತಕ್ಕುದಲ್ಲದ ಬೈಗಳನ್ನೂ ಮಾತುಗಳನ್ನೂ ಎರಚಲು, ಅವನ ಕೂಗನ್ನು ಕೇಳಿ ಜನಗಳ ಗುಂಪು ಬಂದು ಸೇರಿಬಿಟ್ಟಿತು. ಸೇರಿದ ಜನರು ತಾವು ದೈವವೆಂದು ಭಾವಿಸುತ್ತಿದ್ದ ಮುತ್ತುಸ್ವಾಮಿ ಅಯ್ಯರವರನ್ನು ನೋಡಿ ಇಷ್ಟು ಅಕ್ರಮ ರೀತಿಯಲ್ಲಿ ಮಾತಾಡಿದ ವೈದ್ಯನಾಥನ ಕಾಲನ್ನೂ ಕೈಯ್ಯನ್ನೂ ಕಟ್ಟಿ ತುಳಿಯಲಾರಂಭಿಸಿದರು. ಉದಾರಭಾವನೆಯೇ ತನ್ನ ಲಕ್ಷಣವಾಗಿ ಉಳ್ಳ ಮುತ್ತುಸ್ವಾಮಿ ಅಯ್ಯರ್ "ಅವನದೇನು ಅಪರಾಧ? ಪಾಪ! ನನ್ನ ಕಾಲ ಕೆಟ್ಟದ್ದು! ಅವನನ್ನು ಹೊಡೆಯಬೇಡಿ—ಬಿಟ್ಟುಬಿಡಿ" ಎಂದು ಬೇಡಿಕೊಂಡು ಅವನನ್ನು ಬಿಡಿಸಿದರು.

ಇಷ್ಟಾದ ಮೇಲಾದರೂ ವೈದ್ಯನಾಥನೆಂಬ ದುಷ್ಟನಿಗೆ ವಿವೇಕ ಬಂದಿತೆ? ಇಲ್ಲ. ಅವನು ಮೊದಲಿಗಿಂತಲೂ ಹತ್ತರಷ್ಟು ಬೊಗಳುತ್ತಿದ್ದನು. ಪೊನ್ನಮ್ಮಾಳ್ ಕಲಹ ನಡೆದ ಸ್ಥಳಕ್ಕೆ ಸಮೀಪದಲ್ಲಿ ನಿಂತುಕೊಂಡು ವಿನೋದವನ್ನು ನೋಡಲು ಬಂದ ಹೆಂಗಸರ ಗುಂಪಿನಲ್ಲಿ ಮುತ್ತುಸ್ವಾಮಿ ಅಯ್ಯರನ್ನು ಕುರಿತು ಅಲಕ್ಷ್ಯವಾಗಿ ದೂರಿದಳು. ಅವಳು ಆ ಸ್ಥಳದಲ್ಲಿ ಹಾಜರಾಗಿದ್ದುದನ್ನು ಅರಿತ ಸುಬ್ರಹ್ಮಣ್ಯ ಅಯ್ಯರ್, ಅಷ್ಟು ಕಲಹಕ್ಕೂ ವೈದ್ಯನಾಥನ ಪಕ್ಷವನ್ನೇ ಹಿಡಿದು ಮಾತನಾಡಿದರು. ಮುತ್ತುಸ್ವಾಮಿ ಅಯ್ಯರಿಗಾದರೊ ತನ್ನ ಆಯುಷ್ಯದಲ್ಲಿ ಆದುವರೆಗೂ ಎಂದಿಗೂ ನಡೆಯದಂತೆ ಅಂದು ನಡೆದುದರ ವಿಷಯದಲ್ಲಿಯೂ, ಯಾರೂ ತನ್ನ ಬಳಿ ಮಾತನಾಡಲು ಸಾಹಸಗೊಳ್ಳದಿದ್ದ ಮಾತನ್ನು ಆ ವೈದ್ಯನಾಥನು ಮಾತನಾಡಿದ ವಿಷಯದಲ್ಲಿಯೂ, ತನ್ನ ತಮ್ಮನೂ ಸಹೋದರವಿಶ್ವಾಸವನ್ನು ಮರೆತು ಆ ದುಷ್ಟ ಹುಡುಗನ ಪಕ್ಷವನ್ನು ವಹಿಸಿದುದರ ವಿಷಯದಲ್ಲಿಯೂ ನೆನೆದಷ್ಟು ದುಃಖವೂ ಕೋಪವೂ ಕ್ಲೇಶವೂ ಉಂಟಾದುವು. ಹೀಗಿದ್ದರೂ ಅದನ್ನು ಅಡಗಿಸಿಕೊಂಡು "ನಾಯಿ ವೇಷವನ್ನು ಹಾಕಿದರೆ ಬೊಗಳಬೇಕು. ಈ ಲೋಕದಲ್ಲಿ ಬಾಳಲು ವರವನ್ನು ಪಡೆದು ಬಂದಮೇಲೆ—ಸಾಧ್ಯವಿಲ್ಲ

ವೆಂದರೆ ಬಿಡುವವರಾರು? ಆ ಪ್ರಜ್ಞೆ ಮೊದಲೇ ಇರಬೇಕಾಗಿತ್ತು" ಎಂದ ತನ್ನನ್ನೇ ನಿಂದಿಸಿಕೊಂಡು ಅಷ್ಟು ಅತ್ಯಾಚಾರಕ್ಕೂ ಅವಕಾಶವನ ಕೊಟ್ಟು ವರ್ತಿಸಿದ ತನ್ನ ತಮ್ಮನೊಡನೆ ಅಂದಿನಿಂದ ಅವರು ವ್ಯವಹರಿಸ ವುದನ್ನು ನಿಲ್ಲಿಸಿದರು.

## ೧೭. ನಟರಾಜ ಕಾಣದಾದ!

ಮರುದಿನ ಬೆಳಗಿನಲ್ಲಿ ಪೇಯಾಂಡಿ ದೇವನ ವಿಚಾರಣೆಗಾಗಿ ಮುತ್ತು ಸ್ವಾಮಿ ಅಯ್ಯರಿಗೂ, ಸುಬ್ರಹ್ಮಣ್ಯ ಅಯ್ಯರಿಗೂ 'ಸಮನ್ಸ್' ಬಂದಿತು ಅಂದು ರಾತ್ರಿ, ಅಸ್ತಮಿಸಿ ಒಂದು ಜಾಮವಾದ ಮೇಲೆ, ಸುಬ್ರಹ್ಮಣ ಅಯ್ಯರೂ, ವೈದ್ಯನಾಥನೂ ಮಲಗುವುದಕ್ಕೆ ಹೋಗುವ ಸಮಯದಲ್ಲಿ ಅವರ ಮನೆಯೊಳಗೆ ಕಪ್ಪನೆ ದಪ್ಪನೆ ಇದ್ದ ಆಕೃತಿಯೊಂದು ಕಾಣಿಸಿ ಕೊಂಡಿತು. ಕಪ್ಪಗೆ ಬೆಳೆದು ಹರಡಿದ್ದ ಮೀಸೆ, ಕರುಪ್ಪಸ್ವಾಮಿ ದೇವತೆಯಂತ ಭಯಂಕರವಾದ ದೊಡ್ಡ ಕಣ್ಣುಗಳು, ಕೈಯಲ್ಲಿ ಕಬ್ಬಿಣದ ಒನಕ ಯಂತಿದ್ದ ಬಳೆಗಳನ್ನು ಹಾಕಿದ್ದ ದೊಣ್ಣೆ, ಹೀಗೆ ಆ ಆಕೃತಿ ಇದ್ದಕ್ಕಿದ್ದಂತ ಒಳಗೆ ಬಂತು. ಅವರು "ನಾರಾಯಣಾ" ಎಂದು ತನ್ನ ಹೆಂಡತಿಯ ಕಿವಿಯಲ್ಲಿ ಬೀಳುವಂತೆ ಆಕಳಿಸುತ್ತ ಬಾಯನ್ನು ಮುಚ್ಚುತ್ತಿರುವ ಸಮ ಯದಲ್ಲಿ ಮೇಲೆ ಹೇಳಿದ ಆಕೃತಿ ಅವರ ಕಣ್ಣಿಗೆ ಕಂಡಿತು. ಅವರು ಬೆಚ್ಚಿ ಬಿದ್ದು, "ಅಯ್ಯಯ್ಯೋ! ಪೇಯಾಂಡಿ" ಎಂದು ಒದರಿಕೊಳ್ಳುತ್ತ ಏಳಲು ಅಲ್ಲಿ ಬಂದ ಮನುಷ್ಯನು ಅವರ ಭಯವನ್ನು ಕಂಡು ನಕ್ಕು, "ಸ್ವಾಮಿ ಸುಮ್ಮನಿರಿ. ನಾನೇ ಸೇವಕ ಸುಬ್ಬಾದೇವ" ಎಂದನು. ಸುಬ್ಬಾದೇವ ಪೇಯಾಂಡಿ ದೇವನ ಚಿಕ್ಕಪ್ಪ. ಶೂರದೇವನ ಮಗ. ಅವನು ರೂಪ ದಲ್ಲಿಯೂ ಬಣ್ಣದಲ್ಲಿಯೂ ಪೇಯಾಂಡಿ ದೇವನನ್ನು ಬಹಳ ಮಟ್ಟಿಗೆ ಹೋಲುವನು. ಸುಬ್ರಹ್ಮಣ್ಯ ಅಯ್ಯರ್ ನಿದ್ದೆಯ ಮುಸುಕಿನಲ್ಲಿ ಅವನು ಪೇಯಾಂಡಿ ದೇವನೆಂದು ಭಾವಿಸಿ ಅರಚಿಕೊಂಡಿದ್ದರು. ಸ್ವಲ್ಪ ಎಚ್ಚರಗೊಂಡು ಅವನು ಸುಬ್ಬಾದೇವನೆಂದು ತಿಳಿದಮೇಲೆ, "ಸುಬ್ಬಾದೇವಾ! ಬಾ, ಬಾ

ಂದು ಉಪಚರಿಸಿದರು. ಆ ತರುಣದಲ್ಲಿ ಅವನು ದೊಣ್ಣೆಯನ್ನು ಹಿಡಿದು ಳಗೆ ಬಂದುದನ್ನು ನೋಡಿ ಆ ಬ್ರಾಹ್ಮಣ ನಡುಗಿಬಿಟ್ಟರು! ಅವರನ್ನು ಯಗೊಳಿಸಬೇಕೆಂದೇ ಅವನೂ ಹಾಗೆ ಬಂದನು.

ಬಂದ ಕೂಡಲೆ ಅವರು ಹೇಳದಿದ್ದರೂ ಅವರ ಪಕ್ಕದಲ್ಲಿ ಕುಳಿತು ೂಂಡು ಮೀಸೆಯನ್ನು ಎರಡು ಕೈಗಳಿಂದಲೂ ಹುರಿ ಮಾಡುತ್ತ, ಬಳಿ ುನ್ನು ಹಾಕಿದ್ದ ದೊಣ್ಣೆಯನ್ನು ಶಬ್ದ ಮಾಡುವಂತೆ ಕೆಳಗೆ ಹಾಕಿ, "ಸ್ವಾಮಿ, ಲ್ಲಾ ಈಗ ಸರಕಾರದ ಸ್ವಾಮಿಯಾಗಿ ಬಿಟ್ಟಿರಿ. ಇನ್ನು ಮುಂದೆ ಈ ಳ್ಳ ಜನರಿಗೂ ನಮಗೂ ಸಂಬಂಧ ತೀರಿತು — ಎಂದಲ್ಲವೆ ಸ್ವಾಮಿ, ೀಗೆಲ್ಲ ಮಾಡಿಕೊಂಡು ತಿರುಗುತ್ತೀರಾ? ಮಾಡುವುದೆಲ್ಲ ಮಾಡಿ ಸ್ವಾಮಿ. ಮಗಾಯಿತು, ನಿಮಗಾಯಿತು—ಒಂದು ಕೈನೋಡಿ ಬಿಡೋಣ" ಎಂದು ೀಳಲು ಸುಬ್ರಹ್ಮಣ್ಯ ಅಯ್ಯರ್ ಬಹಳವಾಗಿ ನಡುಗುತ್ತ, "ಏನು ಸುಬ್ಬಾಬ ೀವ! ಹೇಗೋ ಆರಂಭವಾಗಿ ಹೇಗೋ ಮುಗಿಯಿತು. ನಿಜವಾಗಿ ಹೇಳು ೀನೆ ಕೇಳು, ಸುಬ್ಬಾದೇವ, ನಿನ್ನ ಬಳಿ ಹೇಳುವುದಕ್ಕೇನು? ನಿಮ್ಮಪ್ಪನೂ ಮ್ಮ ಯಜಮಾನರೂ ಇದ್ದ ಸ್ನೇಹಕ್ಕೆ ಏನೋ ಅಪ್ಪಾ, ನಾವು ನಮ್ಮ ಲೆಮಾರಿನಲ್ಲಿಯಾದರೂ ಅದನ್ನು ಮುಂದುವರಿಸಿದೆವಾದರೆ ಇನ್ನು ುಂದೆ ಬರುವವರು ಏನಾದರೂ ಮಾಡಿಕೊಳ್ಳಲಿ ನಾನು ಏನೇನೋ ೋಚಿಸುತ್ತಿದ್ದೆ. ನಮ್ಮ ಎಣಿಕೆಯಂತೆ ಯಾವುದು ತಾನೆ ನಡೆಯುತ್ತದೆ?" ಂದು ಹೇಳಲು ಸುಬ್ಬಾದೇವನು, "ಏತಕ್ಕೆ? ನೀವು ಎಣಿಸಿದುದಕ್ಕೆ ಗಲಾದರೂ ಏನು ಅಡ್ಡಬಂತು? ಎಲ್ಲವೂ ನೀವೇ ಮಾಡಿಕೊಂಡ ಲಸವೇ ಅಲ್ಲವೆ? ಏನೋ ಸ್ವಾಮಿ, ನಿಮ್ಮ ಸರಕಾರದ ಅಧಿಕಾರ ಲ್ಲಿ ಪೇಯಾಂಡಿ ದೇವನನ್ನು ಬೇಕಾದರೆ ಹಿಡಿದು ಇಟ್ಟುಬಿಟ್ಟಿರಿ. ಮ್ಮ ಕುಲದ ಗುಂಪೆಲ್ಲವನ್ನೂ ಹಿಡಿದುಬಿಡಲು ಸಾಧ್ಯವೆ? ಇಲ್ಲ. ಆ ಂಹದ ಮರಿಯಾದರೂ ನಿಮ್ಮ ಕೈಯಲ್ಲಿ ಯಾವಾಗಲೂ ಇರುವನೆಂದು ೀವು ಕನಸಿನಲ್ಲಿಯಾದರೂ ಭಾವಿಸುತ್ತೀರೇನು? ಇಂದು ಅವನನ್ನು ಬಂಧಿ ದರೆ, ನಾಳೆ ಅವನು ತಪ್ಪಿಸಿಕೊಂಡು ಓಡಿ ಬರುವನು. ಪೇಯಾಂಡಿ ನನ್ನು ನಿಮ್ಮ ಮನೆಯ ದಂಟಿನ ಸೊಪ್ಪೆಂದು ನೆನೆಯುತ್ತೀರೇನು? ಇಂದ್ರ

ಚಂದ್ರ, ಕುಬೇರರೆಲ್ಲ ಅವನ ಎದುರಿನಲ್ಲಿ ನಡುಗಬೇಕು. ಕಣ್ಣಿನಲ್ಲಿ ಬೊಟ್ಟನ್ನಿಟ್ಟು ಆಡಿಸಿಬಿಡಲಾರನೆ? ಇರಲಿ, ನಾಳೆಯೇ ಬರುತ್ತಾನೆ. ಬಂದಮೇಲೆ ಸುಬ್ರಹ್ಮಣ್ಯ ಅಯ್ಯರ್ ಎಲ್ಲಿ, ಮುತ್ತುಸ್ವಾಮಿ ಅಯ್ಯರ್ ಎಲ್ಲಿ ಇರುವರೊ ನೋಡೋಣ. ನೀವೂ ಇರಬೇಕು, ನಾನೂ ಇರಬೇಕು—ಅಷ್ಟೇ ಆ ಕರ ಪ್ಪಣ್ಣಸ್ವಾಮಿಯನ್ನು ಬೇಡಿಕೊಳ್ಳೋದು!"

ಸುಬ್ರಹ್ಮಣ್ಯ ಅಯ್ಯರ್:- "ಸುಬ್ಬಾ ದೇವಾ! ಸುಬ್ಬಾ ದೇವಾ ಕೋಪಿಸಿಕೊಂಡು ಮಾತಾಡಬೇಡ. ಸಾಧಾರಣವಾಗಿ ಸಹಜ ರೀತಿಯಲ್ಲಿ ನಾವು ಮಾತಾಡಿಕೊಳ್ಳುವುದಕ್ಕೆಲ್ಲ ಕೋಪ ಮಾಡಲಾದೀತೆ? ನಾವಾಗಿ ಮೊದಲು ಈ ವ್ಯವಹಾರಕ್ಕೆ ಮೊದಲು ಮಾಡಿದೆವೇ? ನೀನೇ ಹೇಳು. ಇದ್ದಕ್ಕೆ ಇದ್ದಹಾಗೆ ನಾನಾಗಿ ಜಗಳಕ್ಕೆ ಕರೆದಿದ್ದರೆ—ನೀನು ಹೇಳುವುದೆಲ್ಲ ಸರಿ."

ಸುಬ್ಬಾ: "ಹೌದು ಸ್ವಾಮಿ! ನಾನು ಒಪ್ಪಿಕೊಂಡೆ. ಕದಿಯುವುದು ನಮ್ಮ ಜಾತಿಯ ಕಸಬೇ ಅಲ್ಲವೆ? ನಿಮ್ಮ ಜಾತಿಯವರಿಗೆ ವೇದವನ್ನು ಓದುವುದು ಹೇಗೊ ಹಾಗೆ ನಮಗೆ ಕದಿಯುವುದೇ ಜಾತಿಯ ಕಸಬು. ಅದಕ್ಕಾಗಿ ನಮ್ಮನ್ನು ಸರಕಾರಕ್ಕೆ ತೋರಿಸಿಕೊಡುವುದೆ?"

ಸುಬ್ರಹ್ಮಣ್ಯ ಅಯ್ಯರ್:- "ಇಲ್ಲಪ್ಪ! ಇದಕ್ಕೆ ಹಿಂದೆ ಏನಾದರೂ ವಿರೋಧವಿತ್ತೇ? ತಟಕ್ಕನೆ ಆ ಕೋಮಲ ನಾಯಕನ ಊರಿನವನು ಹೇಳಿದನೆಂದು ಲೂಟಿ ಮಾಡಬಹುದೆ? ನೀನೇ ಹೇಳು! ನಾವು ಹೆಚ್ಚೋ, ಅವನು ಹೆಚ್ಚೊ? ಇಷ್ಟು ಯೋಚನೆಕೂಡ ಇಲ್ಲದೆ......"

ಸುಬ್ಬಾ:- "ಹೌದು, ಸ್ವಾಮಿ! ಎತ್ತು ಹೋಗಿ ಬಿಟ್ಟರೆ ಏನು? ಆಭರಣ ಹೋಗಿಬಿಟ್ಟರೆ ಏನು? ಪೇಯಾಂಡಿಗೆ ತೊಗೊಂಡು ಬಾರೊ ಎಂದರೆ ತೊಗೊಂಡು ಬರುತ್ತಾನೆ. ಕುಡಿದು ಪ್ರಜ್ಞೆ ಇಲ್ಲದೆ ಆ ಜಮೀನುದಾರನಿಗೆ ಪ್ರಮಾಣ ಮಾಡಿಕೊಟ್ಟ. ಆ ಕೆಟ್ಟ ಮನುಷ್ಯ ಹೆಂಡಕೊಟ್ಟು ಪ್ರಮಾಣ ಮಾಡಿಸಿಬಿಟ್ಟ. ಹಾಗೆ ಮಾಡಬೇಕಲ್ಲ. ಆ ಕಲ್ಲಾಪಟ್ಟೆ ಶ್ಯಾನು ಭೋಗ ಕತ್ತೆ ಆ ರಾತ್ರಿ ಕಂಡುಕೊಳ್ಳದೆ ಇದ್ದರೆ ಪೇಯಾಂಡಿ ಬಂದನೆಂದು

ಯಾರಿಗೆ ಗೊತ್ತಾಗುತ್ತಿತ್ತು ? ತಿಳಿದರೆ ತಾನೆ ಏನು? ಎಲ್ಲಾ ವಿನೋದ ತಾನೆ? ವಿಚಾರ ಮಾಡದೆ ಸರಕಾರಕ್ಕೆ ತೋರಿಸಿಕೊಟ್ಟುಬಿಡೋದೆ?"

ಸುಬ್ರಹ್ಮಣ್ಯ ಅಯ್ಯರ್: "ಹಾಗಲ್ಲವಪ್ಪ! ಪೇಯಾಂಡಿ ದೇವನನ್ನು ಹಿಡಿದು ಕೊಡುವುದರಲ್ಲಿ ನಮಗೇನಾದರೂ ಲಾಭವಿದೆಯೆ ? ಎಲ್ಲಾ ಆ ಸಬ್ ಮ್ಯಾಜಿಸ್ಟ್ರೇಟ್ ವೈದ್ಯನಾಥಯ್ಯರ ಏರ್ಪಾಡು."

ಹೀಗೆ ನಡೆದ ಸಂಭಾಷಣೆಯನ್ನು ಗಮನಿಸಿ ಕೇಳುತ್ತಿದ್ದ ವೈದ್ಯನಾಥನು, "ನಮ್ಮ ಅಯ್ಯರ್ ಇದಕ್ಕೆಲ್ಲಾ ಹೋಗಲಿಲ್ಲ. ಅವರ ಅಣ್ಣನೇ ಇದರಲ್ಲೆಲ್ಲಾ ಮುಷ್ಕರ ಹಿಡಿದುದು. ಅವರೇ — ಸೆರೆಮನೆಗೆ ಕಳಿಸಿದವರೂ ಅವರೇ. ವಕೀಲ್ ವ್ಯವಹಾರಕ್ಕಾಗಿ ಹಣ ಕೊಟ್ಟವರೂ ಅವರೇ. ಇವರನ್ನು ಒಂದು ಮಾತೂ ಮರ್ಯಾದೆಗಾಗಿ ಸಹ ಕೇಳಲಿಲ್ಲ" ಎಂದನು.

ಸುಬ್ಬಾದೇವನು: "ಸರಿ! ಆ ಅಯ್ಯರಿಗೆ ಏನೋ ಹಿಡಿದಿದೆ ಅದು ಅವರನ್ನು ಆಡಿಸುತ್ತಿದೆ. ನೋಡೋಣ,ಅವರಿಗೆ ಮುಂದೆ ಇದೆ.ಅವರು ಏನೋ ಪೇಯಾಂಡಿ ಸುಬ್ಬಾದೇವ ಅಂದರೆ ಕೈಲಾಗದ ಹುಚ್ಚುಮುಂಡೆಗಳೆಂದು ಎಣಿಸಿಕೊಂಡಿದ್ದಾರೆ. ನಮ್ಮಪ್ಪ ಕರುಪ್ಪಣ್ಣ ದೇವರ ಆಣೆ—ತೊಲಗಿಸಿಬಿಡ್ತೇವೆ ಅವರನ್ನ. ಇಂದಿನಿಂದ ದೊಡ್ಡ ಅಯ್ಯರೆಂದು ಇಟ್ಟಿದ್ದ ಮರ್ಯಾದೆ ಎಲ್ಲಾ ಹಾರಿ ಹೋಯಿತು. ಅವರು ಹೋಗಲಿ...ಈಗ ಒಂದು ಮಾತು ಹೇಳ್ತೀನೆ ಕೇಳಿದರೆ ನಿಮಗೂ ಕ್ಷೇಮ, ನಮಗೂ ಕ್ಷೇಮ. ಇಲ್ಲವಾದರೆ ನಮಗಾಯ್ತು ನಿಮಗಾಯ್ತು- ನೋಡಿಕೊಳ್ತೇವೆ." ಎನ್ನಲು ಸುಬ್ರಹ್ಮಣ್ಯ ಅಯ್ಯರ್ ನಡುಗುತ್ತ, "ಸುಬ್ಬಾದೇವ! ಏನು ನಾನಿಷ್ಟು ಮಾತು ಹೇಳಿಯೂ ನಿನಗೆ ನನ್ನ ಮೇಲೆ ನಂಬಿಕೆ ಉಂಟಾಗಲಿಲ್ಲವೇ? ಏನಪ್ಪಾ, ನಮ್ಮ ದೊಡ್ಡವರು ಎಂತಹ ಸ್ನೇಹದಿಂದಿದ್ದರು! ನಾವು ಇಟ್ಟಿರುವ ಸ್ನೇಹವೆಲ್ಲಿ? ಹೇಳುವುದನ್ನು ಹೇಳಬಾರದೆ? ನಿನ್ನ ಮಾತನ್ನು ನಾನು ಎತ್ತಿ ಹಾಕ್ತೇನೆಯೇ! ಸುಮ್ಮನೆ ಹೇಳಪ್ಪಾ!"

ಸುಬ್ಬಾ:- "ಹೇಳ್ತೇನೆ ಕೇಳಿ ಸ್ವಾಮಿ, ವಿಚಾರಣೆ ನಾಳೆ ಭಾನುವಾರಕ್ಕೆ ಎಂಟನೇ ದಿನ ಸೋಮವಾರಕ್ಕಿದೆಯಂತೆ. ವಕೀಲ್ ಅಯ್ಯರು ಹೇಳ್ತಾರೆ. ನಿಮ್ಮ ಸಾಕ್ಷ್ಯವೇ ಅದರಲ್ಲಿ ಮುಖ್ಯವಂತೆ. ನೀವು ಸಾಕ್ಷಿ

ಕೊಡದಿದ್ದರೆ ಕೇಸಿನಲ್ಲಿ ಏನೂ ಇಲ್ಲವಂತೆ. ನೀವು ಯಾವುದೂ ಕಳವಾಗಿ ವೆಂದು ಹೇಳಿ ಬಿಡ್ರಿ ನಿಮ್ಮ ನಗ ಎತ್ತುಗಿತ್ತು ಎಲ್ಲವನ್ನೂ ಹಾಗೆಯೆ ಕೊಟ್ಟು ಬಿಡ್ತೇವೆ."

ಸುಬ್ರಹ್ಮಣ್ಯ:-"ಅದಕ್ಕೇನು? ಹಾಗೆಯೇ ಮಾಡ್ತೇನೆ. ನೀನು ಹೇಳಿದ ನಾನು ಕೇಳದೇ ಇರೋದೆ? ಸುಬ್ಬಾದೇವಾ! ಏನೂ ಯೋಚಿಸ್ಬೇಡ ಹೋಗು ಹಾಗೆಯೇ ಮಾಡಿಬಿಡೋಣ ಹೋಗು."

ಯಥಾರ್ಥದಲ್ಲಿ ಹಾಗೆ ಮಾಡಬೇಕೆಂದು ಅವರಿಗೆ ಆ ಸಮಯದಲ್ಲಿ ಯೋಚನೆ ಇರಲಿಲ್ಲ. ಹೇಗಾದರೂ ರಾತ್ರಿ ವೇಳೆಯಲ್ಲಿ ಅವನೊಡನೆ ಜಗ ವಾಡದೆ ತಪ್ಪಿಸಿಕೊಂಡರೆ ಕ್ಷೇಮವೆಂದು ಅವರು ಎಣಿಸಿ ಹಾಗೆ ಹೇಳಿದ್ದರು ಕೂಡಲೆ ಸುಬ್ಬಾದೇವನು, "ಸ್ವಾಮಿ! ಹಾಗೆ ಮಾಡಿದರೂ ನಾನು ನಿಮ್ಮ ಗುಲಾಮ. ಕಳ್ಳ ಜಾತಿಯವ ಸುಳ್ಳು ಹೇಳಲಾರ. ನಿಮ್ಮ ಸಾಮಾನೆಲ್ಲವ ಒಂದು ಚೂರೂ ಬಿಡದೆ ನಿಮ್ಮಲ್ಲಿಗೆ ಸೇರಿಸುವುದು ನನ್ನ ಕೆಲಸ.

ಸುಬ್ರಹ್ಮಣ್ಯ: "ಸುಬ್ಬಾದೇವಾ! ಅದು ಸರಿ! ಆದರೆ ಎತ್ತು ತಕ್ಕೊಂಡು ಹೋದ್ದನ್ನು ಕಲ್ಲಾಪಟ್ಟಿ ಕುಪ್ಪಾಪಿಳ್ಳೆ ಅವರೆಲ್ಲ ಗಮನಿಸಿ ದ್ದಾರಲ್ಲ. ಅವರು ಸಾಕ್ಷಿ ಹೇಳಿದಾಗ ಏನು ಮಾಡೋದು?"

ಸುಬ್ಬಾ:- "ಅದಕ್ಕೆ ಯೋಚನೆ ಮಾಡಬೇಡಿ, ಸ್ವಾಮಿ! ಯಾವುದೊ ಎರಡು ಎತ್ತು ಕಳವಾಯಿತೆಂದು ಬೇಕಾದರೆ ಹೇಳಿಬಿಡಿ. ನಗ ಹೋದದ್ದು ಯಾರು ಕಂಡಿದ್ದರು? ಹಾಗೆಯೇ ವಕೀಲ್ ಅಯ್ಯರೂ ಹೇಳಿದರು."

ಸುಬ್ರಹ್ಮಣ್ಯ: "ಅದಿರಲಿ ಅಷ್ಟು ದೊಡ್ಡ ಹುಲ್ಲು ಮೆದೆಯನ್ನು ಹಾಗೆ ಸುಟ್ಟು ಬಿಡೋದೆ?"

ಸುಬ್ಬಾ:- "ಏನು ಸಾಮಿ- ಅದನ್ನು ಸುಟ್ಟದ್ದು ಪೇಯಾಂಡಿದೇವನೇ ಆ ಜಮೀನುದಾರ್ರ ಆಳುಗಳೆ? ಪೇಯಾಂಡಿ ದೇವ ಬೆಂಕಿ ಹಚ್ಚುತ್ತಾನೆ ಎಂತ ಎಣಿಸ್ತೀರಾ?"

ಸುಬ್ರಹ್ಮಣ್ಯ: "ಹೌದಪ್ಪಾ! ನೀನು ಹೇಳೋದೂ ಒಳ್ಳೇ ಯೋಚನೆ! ಹಾಗೆಯೇ ಮಾಡಿಬಿಡೋಣ. ಹೋಗು—ನೀನು ಯಾವುದಕ್ಕೂ ಯೋಚಿಸ

ಬೇಡ. ದೇವರೊಬ್ಬನಿದ್ದಾನೆ—ಏನಪ್ಪಾ! ನೀನು ಊಟಮಾಡಿದೆಯಾ—? ಸ್ವಲ್ಪ ನಮ್ಮ ಮನೇಲಿ ಊಟಮಾಡೇಳು—ಎಲೇ! ಯಾರೇ ಅಲ್ಲಿ?"

ಸುಬ್ಬಾ: "ಇಲ್ಲ ಸ್ವಾಮಿ ನಾನು ಊಟ ಮಾಡಿ ಆಯಿತು—ಮಾಡಿ ಕೊಂಡೇ ಬಂದುದು. ಇಲ್ದಿ ಹೋದರೆ ಇಷ್ಟು ಹೊತ್ತು ಏಕೆ...?"

ಸುಬ್ರಹ್ಮಣ್ಯ:-"ಇಲ್ಲಪ್ಪಾ ಒಂದು ತುತ್ತು ಊಟ ಮಾಡು. ಹುಳಿ ಗಿಳಿ ಇದೆ- ಸ್ವಲ್ಪ ಉಂಡು ಹೋಗು! ಯಾಕೆ, ಎಲೆ ಹಾಕಲ್ಲ ಇನ್ನು"

ವೈದ್ಯನಾಥನೂ ಸುಬ್ಬಾದೇವನನ್ನು ಉಪಚರಿಸುವುದರಲ್ಲಿ ಜೊತೆಗೆ ಸೇರಿಕೊಂಡನು. ಇವರು ಇಷ್ಟು ದೂರ ಅವನನ್ನು ಉಪಚರಿಸಿದ ಕಾರಣ ಅವನನ್ನು ಹೇಗಾದರೂ ಮಾಡಿ ಊಟಮಾಡುವಂತೆ ಮಾಡಿಬಿಟ್ಟರೆ ಆಮೇಲೆ ಅವರ ಜಾತಿಯ ಸಂಪ್ರದಾಯದ ಪ್ರಕಾರ ಉಂಡ ಮನೆಗೆ ಅವನು ಎರಡು ಬಗೆಯಲಾರನೆಂಬ ಭರವಸೆ. ಕೊನೆಯಲ್ಲಿ ಸುಬ್ಬಾದೇವನೂ ಸಮ್ಮತಿಸಿ ಅಲ್ಲಿಯೇ ಸ್ವಲ್ಪ ಉಂಡನು. ಸುಬ್ರಹ್ಮಣ್ಯ ಅಯ್ಯರ್ ಆಚಾರ ಉಪಚಾರ ಮಾಡಿದರು. ಒಬ್ಬ ಯತಿಯ ಭಿಕ್ಷೆ ಕೂಡ ಅಷ್ಟು ಆಚಾರ ಉಪಚಾರ ದೊಂದಿಗೆ ಸಂಭ್ರಮವಾಗಿ ನಡೆದಿರಲಾರದು. ಭಕ್ಷ್ಯಗಳೂ ಭೋಜ್ಯಗಳೂ ಧಾರಾಳವಾಗಿ, ಸುಬ್ಬಾದೇವನು ಕೂಡ "ಸಾಕು ಸಾಕು" ಎನ್ನುವಂತೆ ಬಡಿಸಿ ಔತಣಮಾಡಿದರು. ಕಲ್ಲುಮರಿಗೆಯಲ್ಲಿದ್ದ ಉಪ್ಪಿನಕಾಯಿಗಳೆಲ್ಲ ಸುಬ್ಬಾದೇವನ ಹೊಟ್ಟೆಗೆ ಸೇರಿದುವು. ಕೊನೆಗೆ ಹಾಲು ಅನ್ನ ಸೇವಿಸುವಾಗ ಸುಬ್ರಹ್ಮಣ್ಯ ಅಯ್ಯರೂ ಪೊನ್ನಮ್ಮಾಳೂ ಎವೆ ಇಕ್ಕದೆ ನೋಡುತ್ತಿದ್ದರು. ಏಕೆಂದರೆ ಅವನು ಆ ಅನ್ನದಲ್ಲಿ ಸ್ವಲ್ಪ ಮಣ್ಣನ್ನು ಚಿಗುಟಿ ಹಾಕಿಕೊಂಡರೆ "ಉಂಡ ಮನೆಗೆ ಎರಡು ಬಗೆಯಬಾರದು" ಎಂಬ ನಿಯಮವು ಅವನನ್ನು ಕಟ್ಟಿ ಹಾಕ ಲಾರದು. ಅವನು ಆ ಮನೆಗೆ ಧಾರಾಳವಾಗಿ ಕೆಡಕನ್ನು ಮಾಡಬಹುದು. ಇದು ಕಳ್ಳರ ಜಾತಿಗೆ ಅನ್ವಯಿಸುವ "ಮನುಸ್ಮೃತಿ" ಗಳಲ್ಲಿ ಒಂದು. ಸುಬ್ಬಾದೇವನವರು ಭಿಕ್ಷೆ ಸ್ವೀಕರಿಸಿದ ನಂತರ ದೀಪವನ್ನು ಆರಿಸಿ ಪೊನ್ನಮ್ಮಾಳ್ ಮೊದಲಾದವರೆಲ್ಲರೂ ಮಲಗಿದರು.

ಮರುದಿನ ಬೆಳಗಾದಮೇಲೆ ವೈದ್ಯನಾಥ, ಪೊನ್ನಮ್ಮಾಳ್, ಸುಬ್ರಹ್ಮಣ್ಯ ಅಯ್ಯರ್—ಈ ಮೂವರಲ್ಲಿ ಸಂಭಾಷಣೆ ನಡೆಯಿತು. ಆ ಮಂತ್ರಾಲೋಚನ

ಸಭೆಯಲ್ಲಿ ಕೊನೆಯ ತೀರ್ಮಾನವೇನೆಂದರೆ ಸುಬ್ರಹ್ಮಣ್ಯ ಅಯ್ಯರ್ ಸುಬ್ಬಾ ದೇವನು ಹೇಳಿದಂತೆಯೇ ಆಭರಣಗಳು ಯಾವುದೂ ಕಳೆವಾಗಲಿಲ್ಲವೆಂದೂ ಎತ್ತುಗಳಲ್ಲಿ ಎರಡು ಮಾತ್ರ ಹೋದುವೆಂದೂ, ಹುಲ್ಲುರಾಶಿಯನ್ನು ಸುಟ್ಟದ್ದು ಪೇಯಾಂಡಿ ದೇವನಲ್ಲವೆಂದೂ ಸಾಕ್ಷ್ಯ ಹೇಳಬೇಕೆಂದು. ಸುಬ್ರಹ್ಮಣ್ಯ ಅಯ್ಯರ್ ಹಾಗೆ ಮಾಡುವುದು ತನ್ನ ಅಣ್ಣನನ್ನು ತೋರಿಸಿಕೊಟ್ಟಂತಾಗು ವುದೆಂಬ ಆಕ್ಷೇಪಣೆ ಬಹಳ ಹೊತ್ತು ಈ ತೀರ್ಮಾನಕ್ಕೆ ಬರಲು ಅಡ್ಡಿ ಯಾಗಿತ್ತು. ಆದರೆ, 'ಮದ್ದಳಕ್ಕೆ ಎರಡು ಕಡೆ ಏಟು' ಎನ್ನುವಂತೆ ವೈದ್ಯ ನಾಥನೂ ಪೊನ್ನಮ್ಮಾಳೂ ತಮ್ಮ ಹಟಮಾರಿತನದಿಂದ ಅವರನ್ನು ಎರಡು ಕಡೆಗಳಿಂದಲೂ ದಾಳಿಮಾಡಲು ಅಯ್ಯರು ಅವರು ಹೇಳಿದಂತೆ ಕೇಳಲು ಒಪ್ಪಿಕೊಳ್ಳಬೇಕಾಯಿತು. ಈ ವಿಧದಲ್ಲಿ ಮುತ್ತುಸ್ವಾಮಿ ಅಯ್ಯರಿಗೂ ಒಂದು ದೊಡ್ಡ ಕೆಡಕನ್ನು ಮಾಡಿಬಿಡಬಹುದೆಂದು ವೈದ್ಯನಾಥನಿಗೆ ಬಹಳ ಸಂತೋಷ.

ಪೇಯಾಂಡಿ ದೇವನ ವಿಚಾರಣೆ ನಡೆಯಿತು. ಸುಬ್ರಹ್ಮಣ್ಯ ಅಯ್ಯರ್ ಸುಬ್ಬಾದೇವನಿಗೆ ಕೊಟ್ಟ ಮಾತನ್ನು ಸ್ವಲ್ಪವೂ ತಪ್ಪದೆ ನಡೆಯಿಸಿಕೊಟ್ಟನು. ಆಭರಣ ಹೋದುದಕ್ಕೆ ಯಾವ ಋಜುವಾತೂ ಸಿಗಲಿಲ್ಲ. ಎತ್ತುಗಳಲ್ಲಿ ಎರಡು ಮಾತ್ರ ಕಳವಾಯಿತೆಂದು ಋಜುವಾತಾಯಿತು. ಹುಲ್ಲಿನ ರಾಶಿಯನ್ನು ಪೇಯಾಂಡಿ ದೇವನೇ ಸುಟ್ಟು ಹಾಕಿದನೆಂಬುದಕ್ಕೆ ಯಾರಿಂದಲೂ ಹೇಳಲಾಗ ಲಿಲ್ಲ. ಕೋರ್ಟಿನವರು ಅವನನ್ನು ಕಠಿಣವಾಗಿ ಶಿಕ್ಷಿಸಬೇಕೆಂದು ತುಂಬ ಆತುರರಾಗಿದ್ದರು. ಸಾಕಷ್ಟು ಋಜುವಾತು ಇಲ್ಲದುದರಿಂದ ಹಾಗೆ ಮಾಡ ಲಾಗಲಿಲ್ಲ. ಸುಬ್ರಹ್ಮಣ್ಯ ಅಯ್ಯರವರ ಸಾಕ್ಷ್ಯ ಮುತ್ತುಸ್ವಾಮಿ ಅಯ್ಯರಿಗೆ ಸಿಡಿಲು ಬಿದ್ದಂತಾಗಿತ್ತು. ಇವರು ಹೀಗೆ ಸಾಕ್ಷ್ಯ ಹೇಳುವರೆಂದು ಅವರು ಕನಸಿನಲ್ಲಿಯೂ ಎಣಿಸಿರಲಿಲ್ಲ. ಮಣ್ಣು ಕುದುರೆಯನ್ನು ನಂಬಿ ನದಿಯಲ್ಲಿ ಇಳಿದಂತಾಯಿತಲ್ಲ ಎಂದು ವ್ಯಸನಪಟ್ಟುಕೊಂಡು ತಮ್ಮ ತಮ್ಮನಮೇಲೆ ಅಡಗಿಸಲಾರದಷ್ಟು ಕೋಪ ತಾಳಿದವರಾಗಿ ಕೋರ್ಟನ್ನು ಬಿಟ್ಟು ಅವರು ಹೊರಕ್ಕೆ ಬಂದಾಗ ಪೇಯಾಂಡಿ ದೇವನನ್ನು ಅವನಿಗೆ ವಿಧಿಸಲಾಗಿದ್ದ ಎರಡು ವರ್ಷ ದಂಡನೆಗೆ ಗುರಿಮಾಡಲು ಕಾವಲುಕಾರರು ಸೆರೆಮನೆಗೆ ಕರೆದುಕೊಂಡು

ಹೋದರು. ಆಗ ಆ ದೇವನು ಮುತ್ತುಸ್ವಾಮಿ ಅಯ್ಯರನ್ನು ನೋಡಿ, ಭಯಂಕರವಾದ ನೋಟದೊಡನೆ ಮೀಸೆಯನ್ನು ಹುರಿ ಮಾಡಿಕೊಳ್ಳುತ್ತ ತೋಳನ್ನು ತಟ್ಟಿ ಘರ್ಜಿಸಿ ಗಂಭೀರವಾಗಿ, "ಏ ಹಾರವಾ ಎರಡು ವರ್ಷ ನನಗೆ ಎರಡು ದಿನ. ಇನ್ನು ನಿನ್ನನ್ನು ಬಿಡೋದಿಲ್ಲ ಬಾ" ಎಂದು ಹೇಳಿ ಅಲಕ್ಷ್ಯವಾಗಿ ಸೆರೆಮನೆಗೆ ತೆರಳಿದನು. ಮುತ್ತುಸ್ವಾಮಿ ಅಯ್ಯರ್ ಅವನನ್ನು ಹಡಗಿನಲ್ಲಿ ಹತ್ತಿಸಿ ಸಮುದ್ರಕ್ಕೆ ಆಚೆ ಕಳುಹಿಸಿಬಿಡಬಹುದೆಂದು ಆಸೆ ಯನ್ನಿಟ್ಟಿದ್ದರು. ಹಾಗೆ ಅವನನ್ನು ಪೂರ್ತಿಯಾಗಿ ತೊಲಗಿಸಿಬಿಡಬಹುದೆಂಬ ಧೈರ್ಯವಿಲ್ಲದಿದ್ದರೆ ಅವರು ಅವನಿಗೆ ವಿರೋಧವಾದ ಯಾವ ಪ್ರಯತ್ನವನ್ನೂ ಮಾಡಲು ಸಾಹಸಪಟ್ಟಿರಲಾರರು.

ಈಗ ವ್ಯಾಪಾರ ಭಾವಿಯನ್ನು ಅರ್ಧ ದಾಟಿದಂತಾಯಿತೆಂದು ವ್ಯಸನ ಪಟ್ಟುಕೊಂಡು ಪೇಯಾಂಡಿ ದೇವನಿಂದ ತನಗೆ ಶೀಘ್ರದಲ್ಲಿ ಏನಾದರೂ ಕೇಡುಂಟಾಗುವುದು ಖಂಡಿತವೆಂಬ ವಿಚಾರ ಮನಸ್ಸನ್ನು ಕಲಕಿತು. ತನ್ನ ತಮ್ಮನ ನಡತೆ ಜುಗುಪ್ಸೆಯನ್ನುಂಟುಮಾಡಿತು. ಅವರ ಚಿತ್ತ ಅವರ ಸ್ವಾಧೀನದಲ್ಲಿ ಸ್ವಲ್ಪವೂ ಇರಲಿಲ್ಲ. ಈ ಪರಿಸ್ಥಿತಿಯಲ್ಲಿ ಅವರು ಊರಿಗೆ ಹಿಂತಿರುಗಿದರು. ಮನೆಗೆ ಬಂದ ಕೂಡಲೆ ಕಮಲಾಂಬಾಳ್ ಅರಳಿದ ಮುಖ ದೊಡನೆ ಅವರನ್ನು ಉಪಚರಿಸಿದಾಗ್ಯೂ ಅವರು ಅವಳೊಡನೆ ಮುಖಕೊಟ್ಟು ಮಾತಾಡದೆ, "ಇದೇನು ಪ್ರಪಂಚ! ಥೇ! ಇದರಲ್ಲಿ ಬದುಕಿರುವುದಕ್ಕಿಂತಲೂ ನಾಲಗೆಯನ್ನು ಕಿತ್ತುಕೊಂಡು ಪ್ರಾಣ ಬಿಡಬಹುದು" ಎಂದು ಗೊಣ-ಗಾಡುತ್ತಿದ್ದರು. ಹೀಗೆ ಇರುತ್ತಿರಲು ಕಮಲಾಂಬಾಳ್ ಸೊಂಟದಲ್ಲಿದ್ದ ಮಗು ಇವರ ವ್ಯಸನವನ್ನೂ ಕೋಪವನ್ನೂ ಸ್ವಲ್ಪವೂ ಲಕ್ಷ್ಯಮಾಡದೆ ಇವರನ್ನು ನೋಡಿ ನಗಲಾರಂಭಿಸಿತು. ಇವರ ಕಡೆ ಬರಲು ಬಹಳ ಆಸೆಪಟ್ಟು ತನ್ನ ತಾಯಿಯ ಸೊಂಟದಲ್ಲಿ ನಿಲ್ಲದೆ ಕೈಕಾಲುಗಳಿಂದ ಸನ್ನೆ ಮಾಡುತ್ತಲಿತ್ತು. ಅದನ್ನು ಕಂಡ ಮುತ್ತುಸ್ವಾಮಿ ಅಯ್ಯರ್ ತನಗೆ ಅರಿವಿಲ್ಲದೆಯೇ ನಗುತ್ತ, "ಪ್ರಪಂಚದಲ್ಲಿ ಮಕ್ಕಳೇ ಯೋಗ್ಯರು. ಇನ್ನು ವಯಸ್ಸಾದರೆ ನೀನು ಏನೇನು ಅಕ್ರಮ ನಡತೆಗಳಲ್ಲಿ ತೊಡಗುವೆಯೊ!" ಎಂದು ತಮ್ಮ ಮನಸ್ಸಿನಲ್ಲಿಯೇ ಹೇಳಿಕೊಳ್ಳುತ್ತ ಆ ಮಗುವನ್ನು ಎತ್ತಿಕೊಳ್ಳಲು ತಮ್ಮ ಕೈಗಳನ್ನು

ಚಾಚಿದರು. ಚಾಚಿದುದೇ ತಡ: ಆ ಮಗು ಒಂದೇ ಹಾರು ಹಾರಿ ಅವ
ತೋಳಿನ ಮೇಲೆ ತೆವಳಲು ಆರಂಭಿಸಿತು. ಅವರು "ಇತರರು ನನ್ನನ್ನ
ಜುಗುಪ್ಸೆಯಿಂದ ದೂರ ಅಟ್ಟಿದರೂ, ನೀನಾದರೂ ನನ್ನನ್ನು ಲಕ್ಷ್ಯಮಾಡ
ತ್ತೀಯಲ್ಲ! ನಿನಗೆ ಈ ಹುಟ್ಟು ಏತಕ್ಕೆ? ಏನು ಪಾಪ ಮಾಡಿರುವೆಯೋ!
ಎಂದು ಹೇಳಿಕೊಳ್ಳುತ್ತ ಅದನ್ನು ಎದೆಯಲ್ಲಿ ತಬ್ಬಿಕೊಂಡು, ಮುದ್ದಿಸಿ
ನಾನಾ ಬಗೆಯಲ್ಲಿ ಲಾಲಿಸಿದರು. ಆದರ ಸಂತೋಷದಲ್ಲಿ ತನ್ನ ವ್ಯಸನವನ್ನು
ಮರೆತು ಅದರೊಡನೆ ಆಟವಾಡಲು ಆ ಸಣ್ಣ ಮಗು ಅವರ ಮುಖವನ್ನು
ಸವರುತ್ತ, ಮೂಗನ್ನು ಪರಿಶೋಧನೆ ಮಾಡಿ, ಕಣ್ಣುಗಳನ್ನು ಒರೆಸಿ, ಕಿವಿ
ಯಲ್ಲಿ ಪ್ರಕಾಶಿಸುತ್ತಿದ್ದ ವಜ್ರದ ಕಡುಕನ್ನು ಬಾರಿ ಬಾರಿಗೂ ಅಲ್ಲಾಡಿಸಿ
ನೋಡಿ "ರಾ, ರಾ ರಾಮಯ್ಯ" ಎಂದು ತನ್ನ ಕೈಗಳನ್ನು ತಾವರೆ ಹೂವಿ
ನಂತೆ ಮಾಡಿ ತೋರಿಸುತ್ತ ಬಾಲಗೋಪಾಲಲೀಲೆಗಳನ್ನು ಮಾಡಲ
ಮುತ್ತುಸ್ವಾಮಿ ಅಯ್ಯರೂ, ಕಮಲಾಂಬಾಳೂ ವಿನೋದವಾಗಿ ಕಾಲ
ವನ್ನು ಕಳೆದರು.

ಈ ಮಗುವಿಗೆ ನಟರಾಜನೆಂದು ಹೆಸರು. ಆದನ್ನು ಅವರು 'ರಾಜಾ'
'ನಟರಾಜಾ' ಎಂಬುದಾಗಿ ಮುದ್ದಿನಿಂದ ಕರೆಯುತ್ತಿದ್ದರು. ಅದು ಅವರಿಗ
ಒಂದು ವಿಶೇಷ ಭಾಗ್ಯವಾಗಿತ್ತು. ಸಾಕ್ಷಾತ್ ಗೋಪಾಲಕೃಷ್ಣನೇ ಬೃಂದಾ
ವನದಲ್ಲಿ ಆಟವಾಡಿದಂತೆ ಅವರೊಡನೆ ಆಟವಾಡಲು ಬಂದಂತಿತ್ತು. ಈ ವಿಧ
ವಾಗಿ ವೃದ್ಧಿ ಹೊಂದುವ ಚಂದ್ರನಂತೆ ಸಂತೋಷವನ್ನು ಕೊಡುತ್ತಿದ್ದ ಅ
ಮಗು ದಿನದಿನಕ್ಕೆ ಚೆಲುವಿನಲ್ಲಿಯೂ ಬುದ್ಧಿಯಲ್ಲಿಯೂ ಬೆಳೆಯುತ್ತಿತ್ತು
ನಟರಾಜನು ಸ್ವಲ್ಪಕೂಡ ಹೊಸಮುಖವೆಂಬುದಿಲ್ಲದವನಾಗಿ ಯಾರ ಬಳಿಯ
ಲ್ಲಿಯಾದರೂ ಪ್ರಿಯವಾಗಿ ಆಟವಾಡುವುದರಿಂದ ಊರಿಗೇ ಮುದ್ದು ಮಗು
ವಾಗಿ ಬೆಳೆದನು. ಅವನು ಆಟವಾಡುತ್ತಿದ್ದಾಗ ಬೀದಿಯಲ್ಲಿ ಅವಸರವಾಗಿ
ಹೋಗುವವರು ಕೂಡ ನಿಂತು ನೋಡಿ ಹೋಗುವರು. ನಾನು ನೀನು ಎಂದು
ಪೊನ್ನಮ್ಮಾಳನ್ನು ಹೊರತು ಇತರ ಎಲ್ಲ ಹೆಂಗಸರೂ ಪೋಟಿ ಹಾಕಿಕೊಂಡು
ಆ ಮಗುವನ್ನು ಅವರ ಮನೆಗಳಿಗೆ ಕರೆದುಕೊಂಡು ಹೋಗಿ ತಿನ್ನಲು ಪದಾರ್ಥ
ಗಳನ್ನು ಕೊಟ್ಟು ಪ್ರೀತಿಯನ್ನು ತೋರಿಸುತ್ತಿದ್ದರು. ಹೀಗೆ ಊರಿನವರು ಹೆಮ್ಮೆ

ಪಡಲು ಕಮಲಾಂಬಾಳಿಗೆ ಎಲ್ಲಿ ದೃಷ್ಟಿದೋಷ ಬರುವುದೊ ಎಂದು ಮಗುವನ್ನು ಹೊರಕ್ಕೆ ಬಿಡಲು ಭಯ ಹೆಚ್ಚಾಗುತ್ತಿತ್ತು. ಮುತ್ತುಸ್ವಾಮಿ ಅಯ್ಯರಿಗೆ ತುಂಬ ಸಂತೋಷವಾಗಿದ್ದ ವೇಳೆಗಳಲ್ಲಿ ಇಂತಹ ಉತ್ತಮವಾದ ಭಾಗ್ಯ ನಮಗೆ ಉಳಿಯಬೇಕಲ್ಲಾ ಎನ್ನುವ ಭಯ ತೋರಿ ವ್ಯಸನವನ್ನುಂಟು ಮಾಡುವುದು. ಈ ವಿಧವಾಗಿ ಕಾಲ ಕಳೆದು ಹೋದುದು ತಿಳಿಯದೆ ಎರಡು ವರ್ಷಗಳು ಕಳೆದುವು.

ಹೀಗಿರಲು ಒಂದು ದಿನ ಇದ್ದಕ್ಕಿದ್ದಂತೆ ಮುದ್ದು ಮಗುವಾದ ನಟರಾಜನು ಕಾಣಿಸಲಿಲ್ಲ. ಅಂದು ಆದ್ರ್ರಾದರ್ಶನ. ಮುತ್ತುಸ್ವಾಮಿ ಅಯ್ಯರ್ ಬೆಳಗಾಗುತ್ತಲೆ ಸ್ನಾನ ಮುಗಿಸಿಕೊಂಡು ಪಟ್ಟುವಸ್ತ್ರವನ್ನು ಧರಿಸಿ ದೇವರ ದರ್ಶನಕ್ಕಾಗಿ ಗುಡಿಗೆ ಹೋದರು. ಕಮಲಾಂಬಾಳ್ ಲಕ್ಷ್ಮಿಗೂ ನಟರಾಜನಿಗೂ ಸ್ನಾನ ಮಾಡಿಸಿ ಎಲ್ಲ ಆಭರಣಗಳನ್ನೂ ತೊಡಿಸಿ ಸಿಂಗರಿಸಿದ್ದಳು. ಮುತ್ತುಸ್ವಾಮಿ ಅಯ್ಯರ್ ಗುಡಿಯಿಂದ ಹೂವನ್ನೂ ಪ್ರಸಾದವನ್ನೂ ತೆಗೆದುಕೊಂಡು ಬಂದ ಕೂಡಲೆ, "ಮಗು ಎಲ್ಲಿ?" ಎಂದು ಕೇಳಿದರು. ಕಮಲಾಂಬಾಳ್ ಮಗು ಬೀದಿ ಬಾಗಿಲಲ್ಲಿ ಮಕ್ಕಳೊಡನೆ ಆಟ ವಾಡುತ್ತ ಇರಬಹುದೆಂದು ಹೇಳಿ ಮನೆಗೆಲಸದಲ್ಲಿ ಮಗ್ನಳಾದಳು. ಮುತ್ತುಸ್ವಾಮಿ ಅಯ್ಯರ್ ಬೀದಿ ಬಾಗಿಲಿಗೆ ಬಂದು ನೋಡಿದರು. ಮಗು ಇರಲಿಲ್ಲ. "ರಾಜಾ, ರಾಜಾ" ಎಂದು ಕರೆದು ನೋಡಿದರು. ಲಕ್ಷ್ಮಿಯನ್ನು ಕಳುಹಿಸಿ ಹುಡುಕಿಸಿದರು. ತಾವೂ ಅಕ್ಕ ಪಕ್ಕಗಳಲ್ಲಿ ಹೋಗಿ ನೋಡಿದರು. ನಟರಾಜನು ಎಲ್ಲಿಯೂ ಕಾಣಿಸಲಿಲ್ಲ.

## ೧೮. ನರಬಲಿ

ಅಷ್ಟರಲ್ಲಿ ದೇವರ ಉತ್ಸವ ಆರಂಭವಾಗುವ ಕಾಲ ಸಮೀಪಿಸಿದುದರಿಂದ "ಸರಿ, ಇಲ್ಲಿಯೇ ಯಾರಾದರೂ ಎತ್ತಿಕೊಂಡು ಹೋಗಿರಬಹುದು. ಬೇರೆ ಎಲ್ಲಿ ಹೋಗುತ್ತಾನೆ ? ನಾನು ಗುಡಿಗೆ ಹೋಗುತ್ತೇನೆ. ತೆಂಗಿನಕಾಯಿ, ಹಣ್ಣು, ವೀಳೆಯದೆಲೆ, ಅಡಿಕೆ, ತೆಗೆದಿಡು" ಎಂದು ಕಮಲಾಂಬಾಳಿಗೆ ಹೇಳಿ

ಮುತ್ತುಸ್ವಾಮಿ ಅಯ್ಯರ್ ಹೊರಟುಬಿಟ್ಟರು. ಅಂದು ಆರ್ದ್ರಾದರ್ಶನ ವಾದುದರಿಂದ ಬೀದಿಯಲ್ಲೆಲ್ಲ ರಂಗವಲ್ಲಿ ಅಲಂಕಾರಗಳನ್ನು ಮಾಡಿದ್ದರು ಮನೆಗಳನ್ನು ಮಾವಿನ ತಳಿರು ತೋರಣಗಳಿಂದ ಅಲಂಕರಿಸಿದ್ದರು. ಪ್ರತಿ ಯೊಬ್ಬ ಹೆಂಗಸೂ ತಾನು ರತಿ ಎಂದು ಭಾವಿಸಿಕೊಂಡು ಉಲ್ಲಾಸವಾಗಿ ನಡೆದು ಹೋಗುತ್ತಿದ್ದಳು. ಗಂಡಸರೆಲ್ಲರೂ ಸ್ನಾನಮಾಡಿ ಪಟ್ಟೆನ್ನುಟ್ಟು ವಿಭೂತಿಯನ್ನು ಧರಿಸಿ ಮನ್ಮಥಾಕಾರಗಳಾಗಿದ್ದರು.

ಉತ್ಸವ ಹೊರಡುವ ಸಮಯ ಬಂದಿತು. ನಾದಸ್ವರಕಾರನಾದ ಮುತ್ತುಕರುಪ್ಪನು ಜೋರಾಗಿ ಘೋಷವನ್ನು ಮಾಡಿದನು. ತನ್ನ ಎರಡು ಕೆನ್ನೆಗಳನ್ನೂ ಉಬ್ಬುವಂತೆ ಮಾಡಿ ತನ್ನ ಅಪಸ್ವರಗಳನ್ನು ಬಹು ಧಾರಾಳ ವಾಗಿ ಬೀದಿಯಲ್ಲೆಲ್ಲ ಹರಿಯಬಿಟ್ಟನು. 'ಡೋಲ್' ಬಾರಿಸಿ ಚಿನ್ನಣ್ಣನು ಅಲ್ಲಿದ್ದವರ ಕಿವಿಗಳನ್ನೂ ವಾದ್ಯದ ಚರ್ಮವನ್ನೂ ಜಲ್ಲಡೆಯ ಕಣ್ಣುಗಳಷ್ಟು ತೂತುಗಳಾಗುವಂತೆ ಹೊಡೆಯಲಾರಂಭಿಸಿದನು. ತಾಳ ಹಾಕುತ್ತಿದ್ದ ಚೆಂಪಕನು ಇವರಿಬ್ಬರನ್ನೂ ಲಕ್ಷ್ಯ ಮಾಡದೆ, ಅಲ್ಲಿದ್ದವರು ಬೇಕಾದರೆ ಕನಿಕರ ಇಟ್ಟುಕೊಳ್ಳಲಿ ಎಂಬಂತೆ ಹತ್ತು ನಿಮಿಷ ಎಡೆಬಿಡದೆ ಪಟಪಟವೆಂದು ಹೊಡೆಯುವುದು, ಹತ್ತು ನಿಮಿಷ ಕೈಯನ್ನು ಕಟ್ಟಿಕೊಂಡು ಸುಮ್ಮನೆ ಇರುವುದು, ಹೀಗೆ ಕಾಲವನ್ನು ತಳ್ಳಿದನು. ಇವರು ಸಾಲದೆಂದು ದಾಸಿ ಪೂರ್ಣ ಚಂದ್ರೋದಯೆ ಎಂಬವಳೂ ಹೊರಟುಬಿಟ್ಟಳು. ಅವಳ ಸೌಂದರ್ಯ ಬಹಳ ಅದ್ಭುತವಾದುದು. ಕಪ್ಪಗಿದ್ದರೂ ಚಂದ್ರನು ಚಂದ್ರನೇ ತಾನೆ! ಅಲ್ಲದೆ ಅವಳ ನಡಿಗೆಯೋ ನಾಟ್ಯದಂತಿರುವುದು. ಹಳ್ಳಿಗಾಡಿನ ದೇವರಿಗೆ ತಕ್ಕಂತಹ ಈ ಪರಿವಾರಗಳೊಡನೆ ನಟರಾಜ ದೇವರ ಉತ್ಸವ ಹೊರಬಿತ್ತು. ಸೇವಂತಿಗೆ ಹೂವಿನ ಮಾಲೆಗಳಿಂದ ಸಿಂಗರಿಸಲ್ಪಟ್ಟ ವಿಮಾನದಲ್ಲಿ, ಎರಡು ಪಕ್ಕಗಳಲ್ಲಿಯೂ ಇಬ್ಬರು ಚಾಮರವನ್ನು ಬೀಸುತ್ತಿರಲು, ನಾದಸ್ವರ ಗೋಷ್ಠಿ ಮುಂದೆ ಹೋಗುತ್ತಿರಲು, ಭಾಗವತ ಗೋಷ್ಠಿ ಹಿಂದೆ ಬರುತ್ತಿರಲು, ಕೈಯಲ್ಲಿ ಆಯುಧವನ್ನು ಧರಿಸಿ, ಜಟೆಯಲ್ಲಿ ಗಂಗೆಯನ್ನು ಹೊತ್ತು ಚಂದ್ರಮೌಳಿ ಯಾಗಿ, ನಂಜುಂಡ ಕಂಠದಿಂದ ಕೂಡಿದವನಾಗಿ, ಪಾರ್ವತಿಯನ್ನು ಅರ್ಧಾಂಗಿ ಯನ್ನಾಗಿ ಮಾಡಿಕೊಂಡು, ನೆಲವನ್ನು ನೋಡುವ ಕುಂಚಿತಪಾದನಾಗಿಯೂ,

ಒಂದು ಕಾಲನ್ನು ಮೇಲೆತ್ತಿ, ವರದ ಹಸ್ತವನ್ನು ತೋರಿಸುತ್ತ, ಚರ್ಮಾಂಬರನನ್ನು ಧರಿಸಿದವನಾಗಿಯೂ, ತೇಜೋಮಯನಾಗಿಯೂ, ಬಡವರಲ್ಲಿ ಬಡವನಾಗಿಯೂ, ಸಾಕ್ಷಾತ್ ಕೈಲಾಸಪತಿಯು ಬಿಜಯ ಮಾಡುವಂತಿತ್ತು. ಪಾಪವನ್ನುಗೆದ್ದು, ಮೋಹವನ್ನು ಪಡೆದ ಆತ್ಮಕ್ಕೆ ಅದರ ನೈಜ ಸ್ವರೂಪವನ್ನು ತೋರಿಸಿಕೊಟ್ಟು, ಜ್ಞಾನಿಗಳು ಅರ್ಥ ಮಾಡಿಕೊಳ್ಳುವಂತಹ ಒಂದು ವೈಖರಿಯಿಂದ ಕೂಡಿದ ನರ್ತನ ಭಂಗಿಯನ್ನು ತಾಳಿದ ಆ ದೃಶ್ಯವನ್ನು ಕಂಡು ಆ ಊರಿನವರೆಲ್ಲರೂ ಆನಂದಸಾಗರದಲ್ಲಿ ಮುಳುಗಿ, ಮೈಮರೆತು, ಪುಳಕಾಂಕಿತರಾಗಿ, ಆಡುತ್ತ ಹಾಡುತ್ತ, ಓಡುತ್ತ, ಕುಣಿಯುತ್ತ "ಶಂಭೋ ಶಂಕರಾ, ದಯಾನಿಧೇ" ಎಂಬ ಉದ್ಗಾರಗಳಿಂದ ಸ್ತುತಿಸಿ, ಆನಂದತಾಂಡವವನ್ನು ಮಾಡಿದರು.

ಪಾಂಡವರ ವನವಾಸ ಕಾಲದ ಭಗವಾನ್ ಕೃಷ್ಣನು ಉಣ್ಣಲು ದೂರ್ವಾಸಾದಿ ಮುನಿಗಳೆಲ್ಲರ ಹಸಿವೆ ಇಂಗಿದಂತೆ ಪರಶಿವನ ಆನಂದವೇ ತಮ್ಮ ಸ್ವಂತ ಆನಂದವೆಂದು ಭಾವಾವಿಷ್ಮರಾದ ಭಕ್ತರ ಗೋಷ್ಠಿಯ ನಿರ್ಮಲವಾದ ಕುತೂಹಲವನ್ನು ಮುತ್ತುಸ್ವಾಮಿ ಅಯ್ಯರೂ ಕಮಲಾಂಬಾಳೂ ಮೈಮರೆತು ಅನುಭವಿಸಿದರು. ಆದರೂ ತಮ್ಮ ಬಳಿ ಆ ಸಮಯದಲ್ಲಿ ಮಗುವನ್ನು ಕಾಣದಿದ್ದುದರಿಂದ ಅವರಿಗೆ ಉಂಟಾದ ಕ್ಲೇಶಕ್ಕೆ ಪಾರವಿರಲಿಲ್ಲ. ತಮ್ಮ ಮನೆಯ ನಟರಾಜನಿಗೆ ಗುಡಿಯ ನಟರಾಜನನ್ನು ತೋರಿಸಿ, ಆವನ ಪುಟ್ಟ ಸುಂದರವಾದ ನಿಷ್ಕಳಂಕವಾದ ಕಣ್ಣುಗಳ ಮೂಲಕ ಆ ದಿವ್ಯ ದೃಶ್ಯವನ್ನು ನೋಡಿ ಅನುಭವಿಸಲು ಭಾಗ್ಯವಿಲ್ಲದೆ ಹೋದುದಕ್ಕಾಗಿ ಅವರಿಗೆ ತುಂಬ ಸಂಕಟವಾಯಿತು. ಮುತ್ತುಸ್ವಾಮಿ ಅಯ್ಯರ್ ದೇವರನ್ನು ನೋಡುತ್ತಾರೆ—ಕಮಲಾಂಬಾಳ ಸೊಂಟದ ಕಡೆ ನೋಡುತ್ತಾರೆ—ಲಕ್ಷ್ಮಿಯನ್ನು ನೋಡುತ್ತಾರೆ — ಕಮಲಾಂಬಾಳ ಕಣ್ಣುಗಳಲ್ಲಿ ನೀರು ತುಂಬಿ ತುಳುಕುತ್ತದೆ! ಮುತ್ತುಸ್ವಾಮಿಯವರು ಇದನ್ನು ಎವೆಯಿಕ್ಕದೆ ನೋಡಲು ಅವರಿಗೂ ದುಃಖವು ಉಕ್ಕಿಬಂತು. ತುಳುಕುತ್ತಿದ್ದ ತಮ್ಮ ಕಣ್ಣೀರನ್ನು ತಡೆದುಕೊಂಡರು. ಲಕ್ಷ್ಮಿಯನ್ನು ನೋಡಲು ತಲೆಯೆತ್ತಿದ ಕೂಡಲೆ ಅವಳನ್ನು ಆಸಕ್ತಿಯಿಂದ ಗಮನಿಸುತ್ತಿದ್ದ ಶ್ರೀನಿವಾಸನ ಕಣ್ಣುಗಳು ಅವಳ

ಕಣ್ಣುಗಳನ್ನು ಸಂಧಿಸಲು ಇಬ್ಬರೂ ಬೇರೆಕಡೆ ನೋಡಲಾರಂಭಿಸಿದರು. ಕೂಡಲೆ ಲಕ್ಷ್ಮಿ ತಾಯಿಯನ್ನು ನೋಡಿ, "ಅಂಬಿ—ಕಾಣಲಿಲ್ಲವಲ್ಲಮ್ಮ" ಎಂದು ಹೇಳಿ ತಲೆ ಎತ್ತಿದ ಕೂಡಲೆ ಕಮಲಾಂಬಾಳಿಗೆ ತಡೆಯಲಾರದ ರೀತಿಯಲ್ಲಿ ಕಣ್ಣೀರು ಪ್ರವಹಿಸಿತು. ಲಕ್ಷ್ಮಿಯೂ ಧಾರೆಧಾರೆಯಾಗಿ ಕಣ್ಣೀರು ಸುರಿಸಿದಳು.

ದೇವರ ಗುಡಿಗೆ ಹೋದಕೂಡಲೆ ಮಗುವನ್ನು ಕುರಿತು ಎಲ್ಲ ಕಡೆಯೂ ವಿಚಾರಿಸಲು ತೊಡಗಿದರು. ಮನೆಮನೆಗೂ ಆಳುಗಳನ್ನು ಕಳುಹಿಸಿ ಹುಡುಕಿಸಿದರು. ಶಿರುಕುಳದಲ್ಲಿ ದನಗಳ ಕೊಟ್ಟಿಗೆ ಸಮೀಪದಲ್ಲಿ ಮನೆಗಳಿದ್ದುವು. ಆ ಮನೆಗಳಿಗೆಲ್ಲ ಕೊನೆಯಾಗಿದ್ದ ಮನೆ ಮುತ್ತುಸ್ವಾಮಿ ಅಯ್ಯರ ತಂಗಿಯಾದ ಸೀತಾಲಕ್ಷ್ಮಿ ಅಮ್ಮನ ಮನೆ. ಆ ಮನೆಗೆ ಮಗು ನಟರಾಜನನ್ನು ಯಾರೋ ಎತ್ತಿಕೊಂಡು ಹೋದುದಾಗಿ ಸುದ್ದಿ ತಿಳಿಯಿತು. ಅದನ್ನು ಕುರಿತು ಮತ್ತೆ ವಿಚಾರಿಸಿದುದರಲ್ಲಿ ನಟರಾಜನನ್ನು ಬೆಳಗಿನಲ್ಲಿ ಏಳು ಗಂಟೆಗೆ ಮುಂಚಿತವಾಗಿ ಅನೇಕರು ನೋಡಿರುವುದಾಗಿ ಹೇಳಿದರು. ಅದೂ ಅಲ್ಲದೆ ಮೇಲೆ ಹೇಳಿದ ಮನೆಯ ಜಗುಲಿಯ ಮೇಲೆ ಕೆಲವು ಸಣ್ಣ ಮಕ್ಕಳು ಸೇರಿ ಹುಣಿಸೇ ಬೀಜಗಳನ್ನಿಟ್ಟು ಆಟವಾಡುತ್ತಿದ್ದರೆಂದೂ ಆ ಸ್ಥಳದಲ್ಲಿ ಒಬ್ಬ ಹುಡುಗಿ ನಟರಾಜನನ್ನು ಎತ್ತಿಕೊಂಡು ಹೋದಳೆಂದೂ ತಿಳಿದುಬಂತು. ಮುತ್ತುಸ್ವಾಮಿ ಅಯ್ಯರ್ ಮೊದಲಾದವರು ಈ ರೀತಿಯಲ್ಲಿ ವಿಚಾರಿಸುತ್ತಿರುವಾಗ ಸುಬ್ಬರಾಮ ಅಯ್ಯರೆಂಬುವರೊಬ್ಬರು "ಅಯ್ಯೋ! ನನ್ನ ಹುಡುಗಿ ಮೀನಾಕ್ಷಿ ಕಾಣಲಿಲ್ಲವಲ್ಲ!" ಎಂದು ಕೂಗಿಕೊಳ್ಳುತ್ತ ಬಂದರು. ಸೀತಾಲಕ್ಷ್ಮಿ ಅಮ್ಮನ ಮನೆಯ ಜಗುಲಿಯ ಮೇಲೆ ಆಟವಾಡಿಕೊಂಡಿದ್ದ ಹುಡುಗಿಯರೊಂದಿಗೆ ಮೀನಾಕ್ಷಿಯೂ ಇದ್ದಳೆಂದು ಗೊತ್ತಾಯಿತು. ನಟರಾಜನನ್ನೂ ಅವಳನ್ನೂ ಕಾಣದಿದ್ದುದರಿಂದ ಅವಳೇ ಎತ್ತಿಕೊಂಡು ಹೋಗಿರಬೇಕೆಂದು ಅಲ್ಲಿದ್ದವರು ಊಹಿಸಿದರು. ಆದರೆ ಅವಳು ಎಲ್ಲಿಗೆ ಎತ್ತಿಕೊಂಡು ಹೋಗಿರಬಹುದೆಂಬುದು ತಿಳಿಯಲಿಲ್ಲ. ಆ ಊರಿನಲ್ಲಿ ಬೇಸಾಯಗಾರರ ಮನೆಗಳು, ಅಂಗಡಿ ಬೀದಿ, ಅಗ್ರಹಾರ—ಯಾವುದನ್ನೂ ಬಿಡದೆ ಎಲ್ಲೆಲ್ಲಿಯೂ ಹುಡುಕಿಸಿ ನೋಡಿದರು. ಎಲ್ಲಿಯೂ ಕಾಣ

ನುದರಿಂದ ನಾಲ್ಕೂ ಕಡೆಗಳಿಗೂ ಆಳುಗಳನ್ನು ಕಳುಹಿಸಿ ಊರು ಹೊರಗೆ ನೋಡಿಬರುವಂತೆ ಹೇಳಿದರು.

ಊರಿಗೆ ಪಶ್ಚಿಮಕ್ಕೆ ಹೋದವರು ಎರಡು ಮೈಲಿಗಳು ಹೋದಮೇಲೆ ಒಂದು ಸಣ್ಣ ಹುಡುಗಿಯ ರೋದನದ ಧ್ವನಿಯನ್ನು ಕೇಳಿದರು. ಕೂಡಲೆ ಅವರು ಆ ಶಬ್ದ ಬಂದ ಸ್ಥಳದ ಕಡೆ ಹೋಗಲು ಒಂದು ಪೊದೆಯ ಮಧ್ಯದಲ್ಲಿ ಕಾಲು ಕೈಗಳಲ್ಲಿ ಮುಳ್ಳಿನ ಗಾಯಗಳಾಗಿದ್ದು "ಅಯ್ಯೋ! ಅಮ್ಮಾ! ಅಪ್ಪಾ!" ಎಂದು ಅಳುತ್ತಿದ್ದ ಒಬ್ಬ ಹುಡುಗಿಯನ್ನು ಕಂಡರು. ಅವಳೇ ಮೀನಾಕ್ಷಿ. ಅವರನ್ನು ಕಂಡಕೂಡಲೆ ಅವಳು ಓಡಿಬಂದು ಅವರನ್ನು ತಬ್ಬಿಕೊಂಡು ಅತ್ತಳು. ಕೇಳಿದ ಪ್ರಶ್ನೆಗಳಿಗೆ ಯಾವುದಕ್ಕೂ ಉತ್ತರವನ್ನು ಹೇಳಲಾಗದೆ ಬಿಕ್ಕಿ ಬಿಕ್ಕಿ ಅತ್ತ ಅವಳನ್ನು ಅವರು ಎತ್ತಿಕೊಂಡು, ಸಮಾಧಾನಗೊಳಿಸಿ, ಊರಿಗೆ ಕರೆದುಕೊಂಡು ಬಂದರು. ಅವಳು ಬಳಲಿ ಅವರ ಕೈಯಲ್ಲಿಯೇ ನಿದ್ದೆ ಹೋಗಿಬಿಟ್ಟಳು. ಮನೆಗೆ ಬಂದ ಕೂಡಲೆ ಮಜ್ಜಿಗೆಯನ್ನು ಕಾಯಿಸಿ ಕೊಟ್ಟರು. ಅದನ್ನು ಕುಡಿದು ಅವಳು ಹಾಗೆಯೇ ಮತ್ತೆ ನಿದ್ರಿಸಿದಳು. ಅವಳು ಯಾವಾಗ ಏಳುವಳೋ ಎಂದು ಮುತ್ತುಸ್ವಾಮಿ ಅಯ್ಯರ್ ಮೊದಲಾದವರೆಲ್ಲರೂ ಆತುರದಿಂದ ಕಾದಿದ್ದರು. ಹಗಲು ಎರಡು ಗಂಟೆಗೆ ಅವಳಿಗೆ ಎಚ್ಚರವಾಯಿತು. "ಮಗು ನಟರಾಜನನ್ನು ನೀನು ನೋಡಿದೆಯಾ ಅಮ್ಮ!" ಎಂದು ಅವಳನ್ನು ಕೇಳಲು ಅವಳು ಸೀತಾಲಕ್ಷ್ಮಿ ಅಮ್ಮ ಅವರ ಮನೆಯಲ್ಲಿ ನಟರಾಜನನ್ನು ಎತ್ತಿಕೊಂಡು ಆಟವಾಡುತ್ತಿದ್ದಳೆಂದೂ ಯಾರೋ ಒಬ್ಬ ಹೆಂಗಸು ಅವಳನ್ನು "ಇಲ್ಲಿ ಬಾ" ಎಂದು ಆಸೆ ತೋರಿಸಿ ಕರೆದಳೆಂದೂ, ಬಹಳ ಹೊತ್ತು ಭ್ರಮೆಯಲ್ಲಿ ಅವಳ ಜೊತೆಯಲ್ಲಿ ಹೋದ ಮೇಲೆ ಒಂದು ಕಾಡಿನ ಒಂಭಾಗದಲ್ಲಿ ಬಹಳ ಭಯಂಕರವಾದ ಘೋರ ರೂಪದೊಡನೆ ಕೆಲವು ಹೆಂಗಸರು ಅವಳ ಬಳಿ ಬಂದು, ನಟರಾಜನನ್ನು ಎಳೆದುಕೊಂಡು ಕುದುರೆಯ ಮೇಲೆ ಕೂಡಿಸಿಕೊಂಡು ಓಡಿ ಹೋದರೆಂದೂ ತನ್ನನ್ನು ಕರೆದುಕೊಂಡು ಹೋದ ಹೆಂಗಸೂ ಸಹ ಅವರ ಜೊತೆಯಲ್ಲಿಯೇ ಓಡಿ ಹೋದಳೆಂದೂ ಬಿಕ್ಕಿ ಬಿಕ್ಕಿ ಅಳುತ್ತ ಹೇಳಿದಳು. ಅನಂತರ ಅವಳು ದಾರಿ ತಿಳಿಯದೆ ಪೇಚಾಡಿಕೊಂಡು, ಎದೆ ಬಡಬಡವೆಂದು ಬಡಿದುಕೊಳ್ಳುತ್ತಿರಲು, ಭಯಪಟ್ಟು, ಅರಚಿ

ಕೊಳ್ಳುತ್ತ ಸ್ವಲ್ಪ ದೂರ ಓಡುವುದು, ಆಮೇಲೆ ಭಯ ಹೆಚ್ಚಾದರೆ ಕಣ್ಣನ್ನು ಮುಚ್ಚಿಕೊಂಡು ಅಳುವುದು — ಹೀಗೆ ಕೊನೆಗೆ ಮನೆಗೆ ಅವಳನ್ನು ಕರೆದು ಕೊಂಡು ಬಂದ ಸಂಗತಿಯವರೆಗೂ ಹೇಳಿ ತನ್ನ ಕಥೆಯನ್ನು ಮುಗಿಸಿದಳು. ಇದನ್ನು ಕೇಳಿದವರೆಲ್ಲರೂ ಅವಳನ್ನು, "ಇಷ್ಟುಮಟ್ಟಿಗಾದರೂ ಬಂದು ಸೇರಿದೆಯಲ್ಲಮ್ಮ" ಎಂದು ತಟ್ಟಿಕೊಟ್ಟು ಸುಧಾರಿಸಿದರು.

ಅನಂತರ ಕಳ್ಳರು ಮಗುವನ್ನು ಎತ್ತಿಕೊಂಡು ಯಾವ ದಿಕ್ಕಿನಲ್ಲಿ ಹೋದರೆಂದು ವಿಚಾರಿಸುತ್ತ ಎಲ್ಲರು ಮಗು ಕಳೆದು ಹೋದ ಸ್ಥಳವನ್ನು ಉದ್ದೇಶಿಸಿ ನಡೆದುಕೊಂಡು ಹೋದರು. ಸಬ್ ಮ್ಯಾಜಿಸ್ಟ್ರೇಟ್ ವೈದ್ಯನಾಥ ಅಯ್ಯರೂ ಅವರೊಡನೆ ಜೊತೆಯಲ್ಲಿ ಹೋದರು. ಎಲ್ಲರೂ ಸೇರಿ ಆ ಸ್ಥಳಕ್ಕೆ ಹೋಗಿ ನೋಡಿದಾಗ ಅಲ್ಲಿ ಎರಡು ಮೂರು ಕುದುರೆಗಳ ಗೊರಸಿನ ಗುರುತೂ ನಾಲ್ಕು ಬೇರೆ ಬೇರೆ ಮನುಷ್ಯರ ಪಾದದ ಗುರುತೂ ಕಾಣಿಸಿದುವು. ವೈದ್ಯನಾಥ ಅಯ್ಯರ್ ಆ ಮನುಷ್ಯರ ಪಾದದ ಗುರುತುಗಳನ್ನು ಸರಿಯಾಗಿ ಅಳೆದು ಗುರುತು ಹಾಕಿಕೊಂಡರು. ಅನಂತರ ಆ ಪಾದದ ಗುರುತುಗಳನ್ನು ಹಿಂಬಾಲಿಸಿದರು. ಕಾಡಿನಲ್ಲಿದ್ದ ಕಾಳಿಯಮ್ಮನ ಗುಡಿಗೆ ಆ ಗುರುತುಗಳು ಅವರನ್ನು ಕೊಂಡೊಯ್ದುವು.

ಆ ಭದ್ರಕಾಳಿಯಮ್ಮನ ಗುಡಿ ಎರಡು ಬೆಟ್ಟಗಳಮಧ್ಯೆ ಇದ್ದಿತು. ಆ ಅಮ್ಮನವರ ಸನ್ನಿಧಿಯಲ್ಲಿ ಹತ್ತು ಹದಿನೈದು ಮರಗಳು ದಟ್ಟವಾಗಿ ಬೆಳೆದಿದ್ದುವು. ಅವುಗಳ ಮಧ್ಯೆ ಕುದುರೆಯ ಗೊರಸಿನ ಗುರುತುಗಳೂ ಇದ್ದುದರಿಂದ ಎಲ್ಲರೂ ಅತ್ತ ಕಡೆ ಹೋದರು. ಹೋದಕೂಡಲೆ ಒಂದು ಘೋರವಾದ ದೃಶ್ಯವನ್ನು ಕಂಡರು. ಅದೇನೆಂದರೆ ಮೂರು ಕಲ್ಲುಗಳನ್ನಿಟ್ಟು ಒಂದು ಒಲೆಯೂ ಅದರ ಪಕ್ಕದಲ್ಲಿ ಒಂದು ಮಗುವಿನ ಮೂಳೆಗಳೂ ಕಾಣಿಸಿದುವು. ನೆಲದ ಮೇಲೆ ರಕ್ತದ ಗುರುತುಗಳಿದ್ದುವು. ಅದನ್ನು ಕಂಡಕೂಡಲೆ ಮುತ್ತುಸ್ವಾಮಿ ಅಯ್ಯರ್, "ಅಯ್ಯಯ್ಯೊ! ಕೊಲೆ! ಪಾಪಿ!" ಎಂದು ಕೂಗಿಕೊಂಡರು. ಅಲ್ಲಿ ಬಿದ್ದಿದ್ದ ಮೂಳೆಗಳು ಮಗು ನಟರಾಜನ ಮೂಳೆಗಳಾಗಿರಬಹುದೆಂದು ಅವರಿಗೆ ತೋರಿತು. ಆ ಒಲೆಯ ಸಮೀಪದಲ್ಲಿ ಬೆಂಕಿ ಹತ್ತಿಸಿದುದಾಗಿಯೂ ಭಾವಿಸಲು ಅವಕಾಶವಿತ್ತು. ಕೂಡಲೆ ಆ ಕ್ರೂರವಾದ ದುರ್ಗಾದೇವಿಗೆ ನರಬಲಿ

ಯನ್ನು ಕೊಡಲು ಮಗುವನ್ನು ಕೊಂದು ಹಾಕಿದರೆಂದು ಎಲ್ಲರೂ ಊಹಿಸಿದರು. ಮಗುವನ್ನು ಎತ್ತಿಕೊಂಡು ಹೋದವರು ಕಳ್ಳರಾಗಿದ್ದ ಪಕ್ಷದಲ್ಲಿ ಮೀನಾಕ್ಷಿಯ ಕತ್ತಿನಲ್ಲಿದ್ದ ನಗಗಳನ್ನು ಅವರು ಅಪಹರಿಸುವರು. ಒಂದುವೇಳೆ ಪೇಯಾಂಡಿ ತೇವನು ಸೆರೆಮನೆಯಿಂದ ತಪ್ಪಿಸಿಕೊಂಡು ಬಂದು ಮಗುವನ್ನು ಕದ್ದುಕೊಂಡು ಹೋಗಿರಬಹುದೆಂದು ಎಣಿಸಿದರೂ ಅವನು ಮಗುವನ್ನು ಕೊಂದು ಬಲಿ ಕೊಟ್ಟಿರಲಾರನು. ನರಬಲಿಯನ್ನು ಕೊಡುವ ಪದ್ಧತಿ ಅವರಲ್ಲಿಲ್ಲ. ಬೇರೆ ಯಾರು ಈ ಕಠೋರವಾದ ಅತ್ಯಾಚಾರವನ್ನು ಮಾಡಿರಬಹುದೆಂದು ತಿಳಿಯಲಿಲ್ಲ. ಮುತ್ತುಸ್ವಾಮಿ ಅಯ್ಯರ್ ಮೂರ್ಛಿತರಾಗಿ ಬಿದ್ದಿದ್ದರು. ಎಲ್ಲರೂ ಸೇರಿ ಅವರನ್ನೆತ್ತಿ ಬಂಡಿಯಲ್ಲಿ ಹಾಕಿಕೊಂಡು ಹೇಳಲಾಗದ ದುಃಖ ಭರಿತರಾಗಿ ಊರಿಗೆ ಹಿಂತಿರುಗಿದರು. ಕಮಲಾಂಬಾಳ್ ಮೊದಲಾದವರು ಅಡಿಗೆ ಮಾಡಿದ ಪದಾರ್ಥಗಳನ್ನು ಮುಚ್ಚಿಟ್ಟುಬಿಟ್ಟು, ಮಗುವನ್ನು ಹುಡುಕಲು ಹೋದವರ ಬರುವಿಕೆಯನ್ನು ಎದುರು ನೋಡುತ್ತ ಬಹು ದುಃಖದಿಂದ ಕುಳಿತಿದ್ದರು.

ಭದ್ರಕಾಳಿಯ ಗುಡಿಯಲ್ಲಿ ನಡೆದ ವಿಪರೀತ ವೃತ್ತಾಂತವನ್ನು ಕೇಳಿದ ಸಮಯದಲ್ಲಿ ಅವರಿಗೆ ಉಂಟಾದ ದುರ್ಭರವಾದ ಶೋಕವನ್ನು ಏನೆಂದು ಹೇಳುವುದು? ಕಮಲಾಂಬಾಳ್ ಗಟ್ಟಿಯಾಗಿ ಅಳುತ್ತ ಮೂರ್ಛಿತಳಾದಳು. ಲಕ್ಷ್ಮಿ ಅಬ್ಬರಿಸುತ್ತ ಅಳತೊಡಗಿದಳು. ಮುತ್ತುಸ್ವಾಮಿ ಅಯ್ಯರ್ ಪ್ರಲಾಪಿಸುತ್ತಲೂ ಅಳುತ್ತಲೂ ಇದ್ದರು. ವೈದ್ಯನಾಥ ಅಯ್ಯರೂ ಅವರೊಡನೆ ಸ್ವಲ್ಪ ಹೊತ್ತು ದುಃಖಪಟ್ಟು, ಅನಂತರ, "ಅಲ್ಲಿದ್ದ ಮೂಳೆ ಗಳು ನಿಮ್ಮ ಮಗುವಿನದೆಂದು ಏತಕ್ಕೆ ಭಾವಿಸಬೇಕು? ನಿಮಗೆ ಅಂತಹ ಕ್ರೂರವಾದ ವಿರೋಧಿ ಯಾರಿರುವರು? ಹಾಗೆ ವಿರೋಧಿಗಳಿದ್ದರೂ ನರಬಲಿ ಮಾಡತಕ್ಕವರು ಇಲ್ಲಿ ಯಾರಿದ್ದಾರೆ?" ಎಂದು ಹಲವು ರೀತಿಯಲ್ಲಿ ಆಕ್ಷೇಪ ಗಳನ್ನು ಎತ್ತಿ ಅವರನ್ನು ಸಮಾಧಾನಗೊಳಿಸಿದರು. ಬಲಿ ಮಾಡಲ್ಪಟ್ಟ ಮಗು ಬೇರೆಯಾಗಿದ್ದರೆ ನಟರಾಜನನ್ನು ಕದ್ದು ಹೋದವರ ಕುದುರೆಗಳು ಆ ಕಾಳಿಯಮ್ಮನ ಗುಡಿಗೆ ಹೋಗಲು ಕಾರಣವೇನೆಂದು ಮುತ್ತುಸ್ವಾಮಿ ಅಯ್ಯರ್ ಕೇಳಲು, ವೈದ್ಯನಾಥ ಅಯ್ಯರ್, "ಒಂದು ವೇಳೆ ಆ ಕಳ್ಳರು

ನಮ್ಮ ಮಗು ಕೊಲ್ಲಲ್ಪಟ್ಟುದಾಗಿ ನಾವು ಎಣಿಸುವಂತೆ ಬೇರೆ ಯಾವ ಮ
ವಿನ ಮೂಳೆಗಳನ್ನಾದರೂ ಅಲ್ಲಿ ತೆಗೆದುಕೊಂಡು ಹಾಕಿರಬಹುದು" ಎಂದರ
ಮುತ್ತುಸ್ವಾಮಿ ಅಯ್ಯರ್, "ಹಾಗೆ ನನಗೆ ತೋರುವುದಿಲ್ಲ." ಎಂದು ಹೇಳಿ
ಕೂಡಲೆ ವೈಧ್ಯನಾಥ ಆಯ್ಯರ್ ಜ್ಯೋತಿಷ ನೋಡುವವರನ್ನು ಕರೆಯಿ
ಕೇಳೋಣವೆಂದು ಹೇಳಿ ಆ ಊರಿನ ಬುಡುಬುಡುಕಿಗೆ ಹೇಳಿಕಳುಹಿ
ದರು. ಅವನು ಬುಡುಬುಡುಕೆಯನ್ನು ಹಿಡಿದುಕೊಂಡು ಬೇಗ ಬಂದು ದೀ
ನೈವೇದ್ಯಗಳು ಎಲ್ಲವನ್ನೂ ಮಾಡಿ ಬುಡುಬುಡುಕೆಯನ್ನು ಬಾರಿಸಿ,
ಊರಿನಲ್ಲಿದ್ದ ಒಬ್ಬ ಮಂತ್ರಿವಾದಿಯೇ ನರಬಲಿಯನ್ನು ಮಾಡಿರುವನೆಂದ
ಹೇಳಿ ಮುಗಿಸಿದನು. ಕೂಡಲೆ ಆ ಮಂತ್ರಿವಾದಿಯನ್ನು ಕರೆತರಲು ಆಳನ್
ಕಳುಹಿಸಿದರು. ಆ ಊರನ್ನು ಬಿಟ್ಟು ಆ ಬೆಳಗಿನಲ್ಲಿಯೇ ಅವನು ಹೊರಟ
ಹೋದುದಾಗಿ ತಿಳಿದುಬಂತು. ಕೂಡಲೆ ಅವನೇ ಆ ಬಲಿಗೆ ಕಾರಣನೆಂದ
ಅಲ್ಲಿದ್ದವರು ಅನುಮಾನಿಸಿದರು. ನಿಜವೇನೆಂದರೆ ಅಲ್ಲಿದ್ದ ಬುಡುಬುಡ
ಕೆಯವನಿಗೂ ಆ ಮಂತ್ರವಾದಿಗೂ ವಿರೋಧವಿತ್ತು. ಆ ಮಂತ್ರವಾದಿಯ
ಕಸಬನ್ನು ಕೆಡಿಸಲು ಇದೇ ಒಳ್ಳೆಯ ಸಮಯವೆಂದು ಆ ಬುಡುಬುಡಿ
ಯವನು ಅವನ ಮೇಲೆ ದೋಷಾರೋಪಣೆ ಮಾಡಿದನು.

## ೧೯. ಪುತ್ರಶೋಕ

ಆ ಮಂತ್ರವಾದಿ ಊರನ್ನು ಬಿಟ್ಟು ಇದ್ದಕ್ಕಿದ್ದ ಹಾಗೆ ಹೊರಟುಬಿಟ್ಟ
ದರಿಂದ ಆ ಊರಿನವರೆಲ್ಲರಿಗೂ ಅವನ ಮೇಲೆ ಬಲವಾದ ಸಂದೇಹ ಉಂಟಾ
ಯಿತು. ಅವನನ್ನು ಕಂಡು ಹಿಡಿಯಲು ಸರಕಾರದಲ್ಲಿ ಹಲವು ಬಗೆಯ
ಪ್ರಯತ್ನಗಳನ್ನು ಮಾಡಿಯೂ ಸಫಲವಾಗಲಿಲ್ಲ. ಮುತ್ತುಸ್ವಾಮಿ ಅಯ್ಯರ
ಪರಿಸ್ಥಿತಿಯಾದರೋ ಬಹಳ ಶೋಚನೀಯವಾಗಿತ್ತು. ಹುಟ್ಟು ಕುರುಡ
ನೊಬ್ಬನು ಕಣ್ಣುಗಳನ್ನು ಪಡೆದು ಹೊಸದಾಗಿ ಸಿಕ್ಕಿದ ಆ ಭಾಗ್ಯದ ದೆಸೆ
ಯಿಂದ ಪ್ರಪಂಚದ ದೃಶ್ಯಗಳನ್ನು ಆಸಕ್ತಿಯಿಂದ ನೋಡಿ ಸಂತೋಷಿಸು
ತ್ತಿರುವ ತರುಣದಲ್ಲಿ ತಟಾರನೆ ಆ ಕಣ್ಣುಗಳ ದೃಷ್ಟಿ ನಷ್ಟವಾದರೆ ಅವನಿಗೆ

ಾವ ದುಃಖವು ಉಂಟಾಗುವುದೊ ಅಂತಹ ದುಃಖವನ್ನು ಮುತ್ತುಸ್ವಾಮಿ
ಯ್ಯರ್ ಸಂಪೂರ್ಣವಾಗಿ ಅನುಭವಿಸಿದರು. ಮಗು ಹುಟ್ಟದೇ ಇದ್ದರೆ
ದೊಂದೇ ದುಃಖವಾಗಿರುತ್ತಿತ್ತು. ಮಗುವನ್ನು ಪಡೆದು ಪ್ರೀತಿಯಿಂದ
ಳಿಸುವ ಸಂತೋಷವನ್ನು ಆಗ ಅವರು ಹೆಚ್ಚಾಗಿ ತಿಳಿದಿರಲಾರರು.
ಹಳ ಕಾಲ ಅನುಭವಿಸುವ ದುಃಖ ಮನುಷ್ಯನಿಗೆ ಸಹಜವಾಗಿಬಿಡುವುದು.
ಇಲ್ಲದೆ ಹುಟ್ಟದವರ ದುಃಖಕ್ಕಿಂತಲೂ, ಕೈಯನ್ನು ಪಡೆದಿದ್ದು ಆ
ೀಲೆ ಅದನ್ನು ಕಳೆದುಕೊಂಡವರ ದುಃಖ ಹೆಚ್ಚಾದುದಲ್ಲವೆ? ದೇವರು
ತ್ರಭಾಗ್ಯವನ್ನು ಕೊಟ್ಟು ಅದನ್ನು ಕಿತ್ತುಕೊಂಡುದರಿಂದ ಅಲ್ಲವೇ
ಟ್ಟಣದ ಪಿಳ್ಳೆಯಾರೆನ್ನುವ ತಮಿಳು ನಾಡಿನ ಪ್ರಸಿದ್ಧ ಸಂತರು ಜ್ಞಾನಿ
ಾದರು ? ಮುತ್ತುಸ್ವಾಮಿ ಅಯ್ಯರ್ ಪೂರ್ವದಿಂದಲೂ ಪ್ರಾಪಂಚಿಕ
ುಖದಲ್ಲಿ ಅತೃಪ್ತರೂ ಮಾನವರ ವರ್ತನೆಗಳಲ್ಲಿ ಉದಾಸೀನ ಉಳ್ಳವರೂ
ಗಿದ್ದರು. ಈಗ ಮಗುವನ್ನು ಕಳೆದುಕೊಂಡ ನಂತರ ಎಲ್ಲ ವಿಷಯ
ಳಲ್ಲಿಯೂ ಅವರಿಗೆ ವಿರಕ್ತಿ ಹೆಚ್ಚಾಯಿತು. "ಏನು ಹಾಳು ಪ್ರಪಂಚ !
ನು ಪಾಪವನ್ನು ಮಾಡಿದೆನೊ, ಈ ಜನ್ಮ ನಮಗೆ ಉಂಟಾಯಿತು."
ಂದು ಅವರು ಬಾರಿ-ಬಾರಿಗೂ ಹೇಳಿಕೊಳ್ಳುವರು. ಕೆಲವು ಸಮಯಗಳಲ್ಲಿ
ದೇವರು ಯಾವುದು— ಭೂತ ಯಾವುದು— ಪ್ರಪಂಚವೇ ಒಬ್ಬರನ್ನೊ
್ಬರು ಹೊಡೆದು ತಿನ್ನುವ ವ್ಯಾಪಾರ" ಎನ್ನುವರು. ಯಾರಾದರೂ ನಗುತ್ತ
ಟವಾಡುತ್ತಿರುವುದನ್ನು ಅವರು ನೋಡಿದರೆ, ತನ್ನ ದೃಷ್ಟಿಯನ್ನು ಬೇರೆ
ಡೆ ತಿರುಗಿಸಿ "ಇದೇನು ಬೇಕಾಗಿದೆ ? ಮೂಢ ! ಮೂಢ" ಎಂದು
ನ್ನೊಳಗೆ ಹೇಳಿಕೊಳ್ಳುವರು. ಮಗುವನ್ನು ನೆನೆದು ವ್ಯಸನಪಟ್ಟುಕೊಂಡು
ಾಲ್ಕೈದು ದಿನ ಅನ್ನಪಾನಾದಿಗಳನ್ನು ಸಹ ಸರಿಯಾಗಿ ಸೇವಿಸದೆ,
ುನೆಯೊಳಗೇ ಮುಸುಕು ಹಾಕಿಕೊಂಡು ಶೋಕದಲ್ಲಿದ್ದರು. ಊರಿನವ
ಲ್ಲರೂ ಬಂದು ಅವರಿಗೆ ಧೈರ್ಯವನ್ನು ಹೇಳುತ್ತಿದ್ದರು. ಆದರೂ ಅವರ
ುಃಖ ಶಮನವಾಗಲಿಲ್ಲ.

ಕಮಲಾಂಬಾಳ್ ತಾನು ಸುಧಾರಿಸಿಕೊಂಡು ಅವರನ್ನು ಸುಧಾರಿಸುವ
ುದ್ದೇಶದಿಂದ ಕೆಲವು ವೇಳೆಗಳಲ್ಲಿ ವೇದಾಂತವನ್ನು ಮಾತಾಡುವಳು.

ಇನ್ನೊಮ್ಮೆ ಹಾಡುವಳು. ಮತ್ತೊಮ್ಮೆ "ಮಗು ಸಿಕ್ಕಿದರೂ ಸಿಕ್ಕ ಬಹುದು" ಎನ್ನುವಳು. ಹೀಗೆ ಅವರನ್ನು ಸಮಾಧಾನಗೊಳಿಸಿ ಅವರ ವ್ಯಸನವನ್ನು ಮರೆತು ಶಾಂತವಾಗಿರುವ ಸಮಯದಲ್ಲಿ ಅವಳಿಗೆ ಅಡಗಿ ಲಾರದ ದುಃಖ ಉಂಟಾಗಿ ಕಣ್ಣೀರು ಧಾರೆಧಾರೆಯಾಗಿ ಸುರಿಯುವುದು. ಆಗ ತಾವೂ ಅಳುತ್ತ, "ಅಳಬೇಡವೆ!" ಎಂದು ಅವಳನ್ನು ಸಮಾಧಾನ ಗೊಳಿಸುವರು. ಯಾವುದನ್ನು ಕಂಡರೂ ಅವರಿಗೆ ನಟರಾಜನ ನೆನಪಾಗು ವುದು. ತೆಂಗಿನ ಚಿಪ್ಪು, ಹಗ್ಗ, ಕೋಲು—ಈ ಎಲ್ಲ ಪದಾರ್ಥಗಳೂ ಅವರಿಗೆ ಆ ಮಗುವಿನ ನೆನಪನ್ನು ಮಾಡಿಕೊಟ್ಟು ವ್ಯಥೆಗೆ ಗುರಿಮಾಡುವುವು. ಈ ವಿಧವಾದ ದುಃಖವನ್ನು ದೂರಮಾಡಲು ಅವರು ಅವನ ಪಟ್ಟುವಸ್ತ್ರ ಗಳನ್ನೂ, ನಗಗಳನ್ನೂ, ತೊಟ್ಟಿಲನ್ನೂ, ಬೊಂಬೆಗಳನ್ನೂ—ಈ ಎಲ್ಲವನ್ನೂ ಅವರಿವರಿಗೆ ದಾನ ಕೊಟ್ಟುಬಿಟ್ಟರು. ಹೀಗೆಲ್ಲ ಮಾಡಿಯೂ ತಠಾರನೆ— ಹೇಗೊ ಮಗುವಿನ ಜ್ಞಾಪಕ ಉಂಟಾಗಿಬಿಡುವುದು. ಮುತ್ತುಸ್ವಾಮಿ ಅಯ್ಯರ್ ಪೂಜೆಯನ್ನು ಮಾಡುತ್ತಿರುವರು. ಇಹಲೋಕದ ಬಾಳ್ವೆ ಹೇಗಾದರೂ ಕಳೆದುಹೋಗಬೇಕೆಂಬ ವೈರಾಗ್ಯಚಿತ್ತದಿಂದ ಕೂಡಿದವ ರಾಗಿ ಅವರು ದೇವರನ್ನು ಧ್ಯಾನಮಾಡಿ ಪರಮಭಕ್ತಿಯಿಂದ ಗಂಟೆಯನ್ನು ಬಾರಿಸಿ ದೀಪಾರಾಧನೆ ಮಾಡುತ್ತಿರುವರು. ಇದ್ದಕ್ಕೆ ಇದ್ದ ಹಾಗೆಯೆ ಮಗುವಿನ ನೆನಪಾಗುವುದು. ಕೂಡಲೆ ಅವರು, "ಅಯ್ಯೋ! ನಟರಾಜಾ" ಎಂದು ಕೂಗುತ್ತ ದೀಪವನ್ನು ಕೆಳಗೆ ಇಟ್ಟು—'ಓ' ಎಂದು ಬಾಯಿ ಬಿಟ್ಟು ಅಳುವರು. ಬೀದಿಯಲ್ಲಿ ಹೋಗುತ್ತಿರುವಾಗ ಯಾರ ಮಗುವಾದರೂ ಎದುರಿಗೆ ಕಂಡರೆ ದುಃಖವು ಉಕ್ಕಿಬಂದು ಬಿಡುವುದು. ಆಗ ಅವರು ಸರಸರವೆಂದು ಮನೆಗೆ ತಿರುಗಿ ಬಂದು ಒಂದು ಸಲ ಕಣ್ಣನ್ನು ಒರೆಸಿಕೊಂಡು ಮತ್ತೆ ಹೊರಗೆ ಹೋಗುವರು. ಕೆಲವು ಸಮಯಗಳಲ್ಲಿ ಬೀದಿಯಲ್ಲಿಯೆ ನಿಂತುಕೊಂಡು ಅಳುವರು. ಎಣ್ಣೆಯನ್ನು ಉಜ್ಜಿಕೊಂಡು ಸ್ನಾನ ಮಾಡುತ್ತಿರುವವರು ಅರ್ಧ ಸ್ನಾನದಲ್ಲಿ "ಅಯ್ಯೋ" ಎಂದು ಕೂಗಿಕೊಂಡು ಅಳುವರು. ಕಮಲಾಂಬಾಳ್ ಸಹ ಅಡಿಗೆ ಮಾಡುತ್ತಿರುವಾಗ, ಸ್ನಾನ ಮಾಡುವಾಗ ಹೀಗೆಯೇ ಅಳಲು ಆರಂಭಿಸಿಬಿಡುವಳು.

ದುಃಖವೆನ್ನುವುದು ಅವರ ವಿಷಯದಲ್ಲಿ ಆರಾಧಿಸಿ ಕರೆಯಬೇಕಾದ
ನ್ಯ ದೇವತೆಯಾಗಿರಲಿಲ್ಲ. ಅವರ ಕುಟುಂಬದೊಂದಿಗೆ ಐಕ್ಯ ಹೊಂದಿ
ಾತ್ರಿ ಹಗಲೆನ್ನುವ ಭೇದವಿಲ್ಲದೆ ನೆನೆದ ಹಾಗೆಲ್ಲ ಬಂದು ಹೋಗುವ ಅಧಿ
ಾರವನ್ನು ಪಡೆದಿತ್ತು. ಮಗು ಹೋದ ಮೇಲೆ ಬರಿದಾಗಿದ್ದ ಜಾಗವನ್ನು
ದು ತುಂಬಿಕೊಂಡಿತ್ತು. ಕಮಲಾಂಬಾಳ್ ತನ್ನ ಪತಿಯನ್ನು ಸಮಾಧಾನ
ೂಳಿಸಿ, ನಿದ್ದೆ ಹೋಗುವಂತೆ ಮಾಡಿ ಅವರು ಚೆನ್ನಾಗಿ ನಿದ್ರಿಸುವಾಗ ಅರ್ಧ
ಾತ್ರಿಯಲ್ಲಿ ಎದ್ದು ಕುಳಿತುಕೊಂಡು ನಟರಾಜನನ್ನು ನೆನೆದು ಕಣ್ಣೀರು
ಾಕುವಳು. ಕೆಲವು ವೇಳೆಗಳಲ್ಲಿ ಮುತ್ತುಸ್ವಾಮಿ ಅಯ್ಯರೂ ಎಚ್ಚರ
ೂಳ್ಳುವರು. ಎದ್ದಮೇಲೆ ಬೆಳಗಾಗುವವರಿಗೂ ಒಂದು ರೋದನೆ! ಆದರೆ
ವಳೂ ಅವಳ ಗಂಡನೂ ತಮ್ಮ ದುಃಖವನ್ನು ಮರೆಯಲು ಅನೇಕ ವಿಧ
ಾದ ಪ್ರಯತ್ನಗಳನ್ನು ಮಾಡಿದರು. ಉಲ್ಲಾಸವಾಗಿ ಮಾತಾಡುವುದು,
ಗುತ್ತ ಆಟವಾಡುವುದು—ಏನೊ ಇರುವವರಿಗೂ ಸುಖವಾಗಿದ್ದು ಹೋಗ
ೇಕು. ಆಯಿತು— ಅರ್ಧ ಕಳೆಯಿತು—ಇನ್ನೇನು ಒಂದು ವರ್ಷವೊ—
ರಡೋ—ಇಂದೊ ನಾಳೆಯೊ ಎಂದು ಹೇಳಿ ಕೊಳ್ಳುವುದು, ಹಾಡು
ುದು—ಮುಂತಾದ ಉಪಾಯಗಳೆಲ್ಲವನ್ನೂ ಅವರು ಪ್ರಯೋಗ ಮಾಡಿದರು.
ಂದು ರಾತ್ರಿ ಬೆಳದಿಂಗಳು ಹಿತವಾಗಿತ್ತು. ಅಂದು ಕಮಲಾಂಬಾಳೂ
ವಳ ಪತಿಯೂ ಮಹಡಿಯ ಮೇಲೆ ಕುಳಿತುಕೊಂಡು ವಿನೋದವಾಗಿ
ಾತಾಡಿಕೊಳ್ಳುತ್ತಿದ್ದರು. ಮಾತಾಡುತ್ತಿದ್ದ ಹಾಗೆಯೆ ಕಮಲಾಂಬಾಳ್,
ಈ ಚಂದ್ರನನ್ನು ನೋಡಿ! ಇವನಿಗೇನು ಕೊಬ್ಬು! ವೃಷಭದಂತೆ ಆಕಾಶ
ೆಲ್ಲವು ತನ್ನ ರಾಜ್ಯವೇ ಎನ್ನುವ ಹಾಗೆ ಉಲ್ಲಾಸವಾಗಿ ತನಗೆ ಸಮಾನ
ಲ್ಲವೆಂದು ತಿರುಗುತ್ತಾನೆ" ಎಂದಳು.

ಮುತ್ತುಸ್ವಾಮಿ ಅಯ್ಯರ್:- "ಹೌದು! ಅವನಿಗೇನು? ಅವನು ದೇವ
ೋಕವಾಸಿ! ಭೂಮಿಯಲ್ಲಿ ತೆವಳುವ ನಮ್ಮಂತಹ ಹುಳವೆ? ಒಬ್ಬನನ್ನು
ುತ್ತೊಬ್ಬ ಹೊಡೆದು ತಿಂದುಕೊಂಡು ನಾವಿರುವೆವಲ್ಲ—ಹಾಗೆ ಅವನೂ
ಇರಬೇಕೆ?"

ಕಮಲಾಂಬಾಳ್:- ಹಾಗಲ್ಲ! ಅದಕ್ಕೆ ಕಾರಣ ನಿಮಗೆ ತಿಳಿ ದಿದ್ದರೆ ನಾನು ಹೇಳುತ್ತೇನೆ ಕೇಳಿ. ಹೇಳಿ ಬಿಡುತ್ತೇನೆ—ನೋಡಿ—ಹೇ ಬಿಡಲೆ?

ಮುತ್ತುಸ್ವಾಮಿ ಅಯ್ಯರ್:- ಛಿ! ಹಾಗೆ ಮಾಡಬೇಡ! ಭಯವಾಗ ತ್ತದೆ. ಹಾಗೆಲ್ಲ ಮಾಡಬೇಡ!

ಕಮಲಾಂಬಾಳ್:- ಇಗೊ, ಹೇಳುತ್ತೇನೆ — ಜೋಕೆ — ಹೇಳಿಯೆ ಬಿಡುತ್ತೇನೆ. ಏನು ಗೊತ್ತೇ? ರೋಹಿಣಿ ಅವನ ಹೆಂಡತಿ. ಅವನ ಹತ್ತಿ ದಲ್ಲಿಯೇ ಯಾವಾಗಲೂ ಇರುತ್ತಾಳಲ್ಲವೆ? ಅವನ ಮದ ಕೇಳಬೇಕೆ? ತಿ ಯಿತೆ? ಈಗಲಾದರೂ ತಿಳಿಯಿತೆ? ಅವರಿಬ್ಬರೂ ಯಾರಂತೆ ಇದ್ದಾ ಹೇಳಿ—ಅದಾದರೂ ತಿಳಿದಿದೆಯೇ, ನೋಡೋಣ"

ಮುತ್ತುಸ್ವಾಮಿ ಅಯ್ಯರ್:-"ಹೌದೆ— ಹೌದು! ನಿನ್ನಂತೆ, ನನ್ನಂತೆ ಮಧ್ಯಾಹ್ನವೆಲ್ಲ ಅತ್ತುದು ಮರೆತು ಹೋಯಿತು! ಅದಿರಲಿ, ಏನಾದರೂ ಹಾಡು ನೋಡೋಣ''

ಕಮಲಾಂಬಾಳ್:- "ಹಾಡಲೆ! ನನ್ನ ಹಾಡನ್ನು ಕೇಳಿ ಗಾಳಿ, ಚಂದ್ರ ಎಲ್ಲರೂ ಮೋಹಿಸಿ ಭ್ರಮೆಗೊಳ್ಳುವಂತೆ ಮಾಡಿ ಬಿಡುತ್ತೇನೆ ನೋಡಿ

—"ಮಂಜಿನಿಂದ ತೋಯ್ದು
ಬಿಸಿಲಿನಲ್ಲಿ ಕಾಯ್ದು

—ಛೇ ಏನು ಹಾಡು ಬರುತ್ತದೆ ಈ ವೇಳೆಯಲ್ಲಿ!"

ಕಮಲಾಂಬಾಳ್ ಹಾಡಲು ತೊಡಗಿದ ಕೂಡಲೆ ಅವಳ ಮನದಲ್ಲಿ ಹುದುಗಿದ್ದ "ಮಂಜಿನಿಂದ ತೋಯ್ದು" ಎನ್ನುವ ಹರಿಶ್ಚಂದ್ರ ಪುರಾಣದ ಹಾಡು ಅವಳ ಜ್ಞಾಪಕಕ್ಕೆ ಬಂದಿತು. ಇದು ಹಾವು ಕಡಿದು ಸತ್ತು ಬಿದ್ದಿದ್ದ ಲೋಹಿತಾಶ್ವನನ್ನು ಕುರಿತು ಚಂದ್ರಮತಿ ಹಲುಬಿಕೊಂಡು ಹಾಡುವ ಹಾಡು. ತನಗೇ ತಿಳಿಯದೆ ಆ ಹಾಡು ಅವಳ ಬಾಯಲ್ಲಿ ಬರಲು ಅವಳು ಅದನ್ನು ಬಿಟ್ಟು, "ಪೊ! ಪೋವೇ ಚೆಲಿಯಾ" ಎನ್ನುವ ಬೇರೆ ಹಾಡನ್ನು ಆರಂಭಿಸಿ ದಳು. ಮುತ್ತುಸ್ವಾಮಿ ಅಯ್ಯರ್: "ಇದು ಬೇಡ — ಮಂಜಿನಿಂದ

ೋಯ್ದು—ಎನ್ನುವ ಹಾಡನ್ನೇ ಹಾಡು" ಎಂದು ಒತ್ತಾಯ ಮಾಡಲು
ನುಲಾಂಬಾಳ್ ಅದನ್ನು ಹಾಡಿದಳು.

ಒಂಟಿಯಾಗಿ ಬಿದ್ದುಕೊಂಡು
ವಿಷದ ನೋವು ಪಾಡಿಸಲು
ನೆಲದ ಮೇಲೆ ಹೊರಳುವ ದೊರೆಯೆ
ಇನ್ನು ಯಾರನ್ನು ನೆಚ್ಚಲಿ ಲೋಹಿತಾಶ್ವ ನಾನು

—ಎಂದು ಹಾಡುವಾಗ ಅವಳ ದುಃಖ ಅವಳ ಗಂಟಲನ್ನು ಹಿಡಿ
ಯಿತು. ಅವಳು "ಅಯ್ಯೋ! ನನ್ನ ಮಗ" ಎಂದು ಅರಚಿಕೊಂಡಳು.
ನಟರಾಜಾ! ನಟರಾಜಾ! ರಾಜಾ! ಎಂದು ನಿನಗೆ ಮುದ್ದಾದ
ಸರಿನ್ನಿಟ್ಟು ಕರೆದೆನೆ! ಇನ್ನು ಮುಂದೆ ಯಾರನ್ನು "ರಾಜಾ" ಎಂದು
ಾಗೇನು — 'ಅಮ್ಮಾ' ಎಂದು ಆರು ತಿಂಗಳು ಕಾಲ ನನ್ನನ್ನು ಚೆನ್ನಾಗಿ
ರೆಯಲಿಲ್ಲವೆ! ನಿನ್ನ ಹೆತ್ತ ಕರಳು ಬೆಂಕಿಯಾಗಿ ಉರಿಯುತ್ತದೆಯೇ!
ಯ್ಯಯ್ಯೋ! ಈ ಬೆಂಕಿ ಎಂದು ಆರೀತು! ರಾಜಾ, ನಟರಾಜ! ಅಪ್ಪ
ಾಗುತ್ತಿದ್ದಾರೋ! ಏಕೆಂದು ಕೇಳಲಾರೆಯಾ! ನಟರಾಜ! ಇದಕ್ಕಾಗಿಯೇ
ನ್ನನ್ನು ಹೆತ್ತು ಹೆಸರಿಟ್ಟೆ? ನಿನಗೆ ಹಾಲು ಕೊಡುತ್ತೇನೆ –ಬಾರೋ—
ನ್ನಪ್ಪ! ಅಪ್ಪ! ಚಿನ್ನ! ಮುತ್ತೆ! ಮಣಿಯೇ! ಬುದ್ಧಿಕೆಟ್ಟು ನಿನ್ನನ್ನು
ೀದಿಯಲ್ಲಿ ಬಿಟ್ಟೆ! ಹೀಗೆಲ್ಲ ಆಗುವುದೆಂದು ನಾನು ಅರಿಯಲಿಲ್ಲವೆ!
ನ್ನನ್ನು ಸಿಂಗರಿಸಿ, ನಿನ್ನ ಚೆಲುವನ್ನು ನೋಡಿ ಹಿಗ್ಗಿದೆನೆ! ನನ್ನ ಭಾಗ್ಯಕ್ಕೆ
ಯಶೋದೆಯ ಭಾಗ್ಯವೂ ಎಣೆಯಾಗದೆಂದು ಗರ್ವಿಸಿದೆನೆ! ಚಂದ್ರಮತಿ
ತ್ತು ಹೋದ ಮಗುವನ್ನಾದರೂ ಎದೆಯಲ್ಲಿ ತಬ್ಬಿಕೊಂಡು ಅತ್ತಳಲ್ಲಾ!
ನಗೆ ಅದೂ ಸಿಗಲಿಲ್ಲವೆ! ಕೈಬೇರೆ—ಕಾಲುಬೇರೆ—ಎಲ್ಲಿ ಹೂತು ಬಿದ್ದಿರು
ಯೊ! ಚದರಿಬಿದ್ದ ನಿನ್ನ ಮೂಳೆಯನ್ನಾದರೂ ಎನ್ನ ಹೆತ್ತ ಹೊಟ್ಟೆ
ಾಂದಿಗೆ ಇಟ್ಟು ತಬ್ಬಿಕೊಳ್ಳುತ್ತೇನೆ! ನೀನು ಹೋದ ಸ್ಥಳಕ್ಕೆ ನನ್ನನ್ನೂ
ರೆದುಕೊಂಡು ಹೋಗಬಾರದಾಗಿತ್ತೆ! ಅಯ್ಯಯ್ಯೋ!" ಎಂದು ಇಷ್ಟು
ೊತ್ತು ಅಡಗಿಸಿಟ್ಟಿದ್ದ ದುಃಖವೆಲ್ಲ ಹೊರಹೊಮ್ಮಲು, ಬಾಯಿ ಬಿಟ್ಟು
್ರಲಾಪಿಸಿಕೊಂಡು ಅತ್ತುಬಿಟ್ಟಳು. ಅನಂತರ ಮುಖದ ಮೇಲೆ ವಸ್ತ್ರ

ವನ್ನು ಮುಚ್ಚಿಕೊಂಡು ಬಿಕ್ಕಿಬಿಕ್ಕಿ ಅಳುತ್ತಿದ್ದ ಮುತ್ತುಸ್ವಾಮಿ ಅಯ್ಯರನ್ನು ನೋಡಿ: "ನನ್ನ ಬುದ್ಧಿ ಕೆಟ್ಟಿತ್ತು! ಅಷ್ಟು ಸಿಂಗರಿಸಿ ಬೀದಿಯಲ್ಲಿ ಬಿಟ್ಟು ಅಡಿಗೆಯು ಮನೆಯು ಕೆಲಸ ದೊಡ್ಡದೆಂದು ಎಣಿಸಿದೆನಲ್ಲ! ನನ್ನ ಹೊಟ್ಟೆ ಕುದಿಯುತ್ತದೆಯಲ್ಲ" ಎಂದು ಹೇಳಲು ಅವರು, "ಹೊರಗೆ ಹೋಗಿ ಬಂದೆನಲ್ಲ — ನಾನಾದರೂ ಹುಡುಕಿ ಕಂಡುಹಿಡಿದೆನೆ! ಯಾವ ಕಾಳಿಗೆ ಬಲಿಯೋ? ಯಾವ ಗುಣಿಯಲ್ಲಿ ಬಿದ್ದು ಅವನ ಎಲುಬು ಕೊಳೆಯುತ್ತಿದೆಯೊ? ಗಂಡು ಸಿಂಹದ ಮರಿಯೆಂದು ಗರ್ವಗೊಂಡಿದ್ದೆನಲ್ಲ! ಅಷ್ಟು ಸೌಂದರ್ಯವೂ ಗುಣಿಯಲ್ಲಿ ಮಾಯವಾಯಿತೆ?" ಎಂದು ಅವರು ಪ್ರಲಾಪಿಸಿದರು. ಹೀಗೆ ಇಬ್ಬರೂ ಒಬ್ಬರನ್ನೊಬ್ಬರು ತಬ್ಬಿಕೊಂಡು 'ಓ' ಎಂದು ರಾತ್ರಿಯೆಲ್ಲ ಅತ್ತು ತೀರಿಸಿದರು. ಹೀಗೆ ಆ ರಾತ್ರಿ ಸಂತೋಷವಾಗಿ ಆರಂಭಗೊಂಡು ವ್ಯಸನದಲ್ಲಿ ಮುಕ್ತಾಯವಾಯಿತು.

## ೨೦. ಅತಿ ರಹಸ್ಯವಾದ ಕೆಲವು ವಿಷಯಗಳು

ಈ ವಿಧದಲ್ಲಿ ಮೂರು ವರ್ಷಗಳು ಕಳೆದುಹೋದುವು. ಸೂರ್ಯ ಚಂದ್ರ ನಕ್ಷತ್ರಗಳೆಲ್ಲವೂ ತಮ್ಮ ತಮ್ಮ ನಿತ್ಯ ಕರ್ಮಾನುಷ್ಠಾನಗಳನ್ನು ತಪ್ಪದೆ ಮಾಡುತ್ತ ಬಂದುವು. ಕಮಲಾಂಬಾಳೂ, ಮುತ್ತುಸ್ವಾಮಿ ಅಯ್ಯರೂ ವ್ಯಸನಪಡುತ್ತಾರೆಂದು ಅವುಗಳಿಗೆ ಚಿಂತೆಯೇ ಇದ್ದಂತೆ ಕಾಣಲಿಲ್ಲ. ತಮ್ಮನ್ನು ಗೆದ್ದ ಕಮಲಾಂಬಾಳ್ ಮನಕರಗಿ, ದೇಹ ಕೃಶವಾಗಿ, ದುಃಖಪಡುತ್ತಿದ್ದಾಳಲ್ಲಾ ಎಂದು ನಲಿಯುವ ಕೋಗಿಲೆಯ ಹಿಂಡುಗಳೂ ವ್ಯಸನಗೊಳ್ಳಲಿಲ್ಲ. ಮುತ್ತುಸ್ವಾಮಿ ಅಯ್ಯರ್ ಪುತ್ರಶೋಕದಿಂದ ತಪಿಸುತ್ತಿದ್ದಾರೆಂದು ಸ್ವಲ್ಪವೂ ಚಿಂತೆಯಿಲ್ಲದೆ ಧೂರ್ತ ಸ್ವಭಾವದ ಗಾಳಿ ಮರಗಳೊಡನೆ ಧಾರಾಳವಾಗಿ ಸಲ್ಲಾಪ ಮಾಡುವುದು, ಅವುಗಳ ಪುಷ್ಪ ವೈವಿಧ್ಯಗಳನ್ನು ಅನುಭವಿಸುವುದು, ಅವುಗಳನ್ನು ಮೃದುವಾಗಿ ಚುಂಬಿಸಿ, ಅವುಗಳೊಂದಿಗೆ ಒಲವಿನಿಂದ ಆಟವಾಡಿಕೊಳ್ಳುವುದು. ಒಂದೊಂದು ಸಮಯದಲ್ಲಿ ಆ ಗಾಳಿ ಒಂದು ಮಾತನ್ನೂ ಆಡದೆ ಕೈಹಿಡಿದ ಗಂಡನು ದೂರ ನಿಲ್ಲುವಂತೆ ನಿಲ್ಲುವುದು.

ಮತ್ತೊಂದು ಸಮಯದಲ್ಲಿ ಅವುಗಳೊಂದಿಗೆ ಸೇರಿ 'ಓ' ಎಂದು ಕೂಗಿಕೊಳ್ಳುತ್ತ ಊರನ್ನೆಲ್ಲ ಸೂರೆಗೊಂಡು ಅಬ್ಬರಿಸುತ್ತ ನಿಶ್ಚಿಂತೆಯಾಗಿ ಸಂತೋಷವಾಗಿ ಕಾಲ ಕಳೆಯುವುದು.

ಮುತ್ತುಸ್ವಾಮಿ ಅಯ್ಯರ ಇಷ್ಟಮಿತ್ರ ಬಂಧುಗಳು ಮಾತ್ರ ಅವರ ದುಃಖವನ್ನು ತಮ್ಮ ದುಃಖವೆಂದು ತಿಳಿದು ಅವಕಾಶವಿದ್ದಾಗಲೆಲ್ಲ, ಅವರ ಮಗು ಕಾಣದೆ ಹೋದ ಕಥೆಯನ್ನು ಹೇಳುತ್ತಿದ್ದರು. ಇದನ್ನು ಹೊರತು ಸುತ್ತುತ್ತಿದ್ದ ಈ ಪ್ರಪಂಚ ಒಂದು ಕ್ಷಣವೂ ಬಿಡುವಿಲ್ಲದೆ ಸುತ್ತಿಕೊಂಡೇ ಇತ್ತು. ಹಜಾಮ ಮಾರಿಯಪ್ಪನು ಕ್ಷೌರ ಮಾಡುವುದೂ, ಅಗಸ ನಾಗನು ಬಟ್ಟೆ ಒಗೆಯುವುದೂ, ಕುಂಬಾರ ಕುಟ್ಟೆಯ್ಯನು ಮಡಿಕೆ ಮಾಡುವುದೂ, ವೇಂಬಪತ್ತನೆಂಬ ಅಕ್ಕಸಾಲಿಗನು ಬೆಳ್ಳಿ, ಚಿನ್ನವನ್ನು (ಹೆರರಿಂದ) ತಟ್ಟುವುದೂ, ಮೂಕನು ದನ ಕಾಯುವುದೂ, ಶ್ಯಾನುಭಾಗ ಮುತ್ತುಪಿಳ್ಳೆ ಕಳ್ಳನಮಸ್ಕಾರ ಹಾಕುವುದೂ, ಶೇಷಶೆಟ್ಟಿ ಕಲ್ಲುಸಕ್ಕರೆ ಮಾರುವುದೂ, ವೈದಿಕ ರಾಮಣ್ಣನು ಬ್ರಾಹ್ಮಣಾರ್ಥದ ಊಟಗಳನ್ನು ಮಾಡುವುದೂ, ವಕೀಲ್ ಶೇಷಯ್ಯ ಕೋರ್ಟಿನ ಮುಂಭಾಗದಲ್ಲಿಯೇ ಲೂಟಿ ಮಾಡುವುದೂ, ಹುಟ್ಟಿದವರು ಸಾಯುವುದೂ, ಸತ್ತವರು ಹುಟ್ಟುವುದೂ—ಹೀಗೆ ದಿನಗಳು ವಾರಗಳಾಗಿ, ವಾರಗಳು ತಿಂಗಳುಗಳಾಗಿ, ತಿಂಗಳುಗಳು ವರ್ಷಗಳಾಗಿ, ಸ್ವಲ್ಪವೂ ಚಿಂತೆಯಿಲ್ಲದೆ ಸಾಗುತ್ತಿದ್ದವು.

ಹೀಗೆ ಪುನರ್ಜನ್ಮವೂ ಇಲ್ಲದೆ ಸತ್ತುಹೋಗುತ್ತಿದ್ದ ದಿನಗಳಲ್ಲಿ ಒಂದು ದಿನ ಸಂತೆಯ ಗುಂಪಿನಂತಿದ್ದ ಚೆನ್ನಪಟ್ಟಣದಲ್ಲಿ [ಮದರಾಸಿನಲ್ಲಿ] ತಂಬುಚೆಟ್ಟಿ ಬೀದಿಯಲ್ಲಿ ೩೨೧ನೇ ನಂಬರಿನ ಮನೆಯಲ್ಲಿ ಮಹಡಿಯ ಮೇಲೆ ಇಬ್ಬರು ಯುವಕರು ಮಾತನಾಡಿಕೊಳ್ಳುತ್ತಿದ್ದರು. ಅವರಲ್ಲಿ ದೊಡ್ಡವನು, ಇನ್ನೊಬ್ಬನನ್ನು ನೋಡಿ, "ಅಂಚೆಯವನು ಬರುವ ಹೊತ್ತಾಯಿತು. ಇಂದು ಕಾಗದ ಬರುವುದಲ್ಲವೆ ?" ಎಂದು ಕೇಳಿದನು. ಅವನು "ಏನು ಗೋಳು? ಇನ್ನೂ ಬರಲಿಲ್ಲ. ನಿನ್ನೆ ಇಷ್ಟುಹೊತ್ತಿಗೆ ಮುಂಚೆಯೇ ಬಂದಿದ್ದ. ನಾನು ಅರ್ಧಗಂಟೆಯಿಂದ ದಾರಿ ನೋಡುತ್ತಿದ್ದೇನೆ"ಎಂದು ಹೇಳುತ್ತ ಕೋಣೆಯನ್ನು ಬಿಟ್ಟು ಬೀದಿಗೆ ಎದುರಿಗಿರುವ ಮಹಡಿಯ ಮೇಲೆ ಬಂದು ನಿಂತುಕೊಂಡು

ಅಂಚೆಯವನು ಬರುವ ದಾರಿಯನ್ನು ನೋಡುತ್ತಿದ್ದನು. ಅಂಚೆಯವನು ಕಾಣಿಸಲಿಲ್ಲ. ಅನಂತರ ಒಳಗೆ ಬಂದು ಗಡಿಯಾರವನ್ನು ನೋಡಿದನು. "ಇದೇನು ಗಂಟೆ ಸರಿಯಾಗಿದೆಯೇ — ನಿನ್ನೆ ಕೀ ಕೊಟ್ಟೆಯಾ ? ಗಂಟೆ ಒಂಬತ್ತಾಯಿತು. ಇನ್ನೂ ಬರಲಿಲ್ಲ." ಎಂದು ಹೇಳುತ್ತ ಹೊರಗೆ ಹೋದನು. ಮತ್ತೆ ಒಳಗೆ ಬಂದು, "ಈ ಹೊತ್ತು ಪತ್ರ ಬರುವುದಿಲ್ಲವೆಂದೇ ತೋರುತ್ತೆ. ಅವೇನು...ಹಾಗೆ ಬರೆಯದೆ ಇರಲಾರಳಲ್ಲ?" ಎಂದು ಹೇಳಿದನು. ಅಷ್ಟರಲ್ಲಿ ಒಳಗಿದ್ದ ಅವನ ಸ್ನೇಹಿತನು, "ಏನೋ ತಿಳಿಯಲಿಲ್ಲ. ಹೋಗೋಣ, ಬಾ. ಊಟ ಮಾಡಿ ಬಂದು ನೋಡೋಣ. ಇಲ್ಲದಿದ್ದರೆ ಊಟವಾದ ಮೇಲೆ ಪೋಸ್ಟ್ ಆಫೀಸಿಗೆ ಹೋಗಿ ವಿಚಾರಿಸೋಣ. ಪತ್ರ ಬಂದಿದ್ದರೆ ಬಂದಿರ ಬೇಕು. ಇಷ್ಟು ಹೊತ್ತಾಯಿತು. ಇಂದು ಇಲ್ಲವೆಂದು ತೋರುತ್ತೆ" ಎಂದನು. ಅದಕ್ಕೆ ಅವನು "ಏಕೋ! ಹೆಂಗಸರನ್ನು ಮಾತ್ರ ನಂಬಬಾರದು. ಏನಾದರೂ ಮೈ ಸರಿಯಾಗಿಲ್ಲವೋ — ಏನು ಗೋಳೋ ? ಇದ್ದಾಳೆಯೋ, ಹೋಗಿ ಬಿಟ್ಟಳೋ ! ಅದನ್ನಾದರೂ ಕಂಡವರಾರು ?" ಎಂದು ಹೇಳಿ ಒಂದು ಕಡೆಗೆ ತಿರುಗಿಕೊಂಡು, ತನ್ನ ಕಣ್ಣಿನಿಂದ ಚಿಮ್ಮಿದ ನೀರನ್ನು ಒರೆಸಿಕೊಂಡು "ಎಲೆ, ಹೋಗೋ ಹುಚ್ಚಾ! ಅವಳೇ ನಿನ್ನನ್ನು ಲಕ್ಷ್ಯ ಮಾಡಲಿಲ್ಲವಂತೆ! ನಿನಗೇನೊ ಈಗ? ಆದರೆ ತೌರುಮನೆಗೆ ಹೋದ ಹೆಣ್ಣುಗಳನ್ನು ನಂಬಬಾರದು. ಬಿದ್ದಿರುತ್ತಾಳೆ, ಒದ್ದು ಓಡಿಸು ಆಚೆ ಕತ್ತೆಯನ್ನು." ಎಂದು ಮನಸಿನಲ್ಲಿಯೇ ಹೇಳುತ್ತ ತನ್ನ ಸ್ನೇಹಿತನನ್ನು ನೋಡಿ, "ಬಾ—ಊಟಕ್ಕೆ ಹೋಗೋಣ, ಬಾ ! ಏಳು !" ಎಂದು ಗಟ್ಟಿಯಾಗಿ ಹೇಳಿದನು. ಆಮೇಲೆ ಅವನೂ ಅವನ ಸ್ನೇಹಿತನೂ ಜೊತೆಯಲ್ಲಿ ಊಟಕ್ಕೆ ಹೋದರು.

ಅಂದು ಅವನಿಗೆ ಊಟ, ಊಟದಂತೆಯೇ ಇರಲಿಲ್ಲ. ಪತ್ರ ಬಾರದು ದಕ್ಕೆ ಕಾರಣಗಳನ್ನು ಕುರಿತು ತನ್ನ ಮನಸ್ಸಿನಲ್ಲಿಯೇ ಆಲೋಚನೆ ಮಾಡು ತ್ತಿದ್ದ ಅವನಿಗೆ, ಇತರರು ಮಾತಾಡುತ್ತಿದ್ದುದು ಏನೂ ಕೇಳಿಸಲಿಲ್ಲ. ಏನು ತಿನ್ನುತ್ತಿದ್ದನೋ ಅದರ ಪ್ರಜ್ಞೆಯೂ ಇಲ್ಲ. ಒಂದು ಕ್ಷಣ ಮುಗುಳ್ನಗೆ, ಮರು ಕ್ಷಣ ಕಣ್ಣೀರು ಹನಿ, ಒಂದೇ ಕ್ಷಣದಲ್ಲಿ ಈ ಎರಡೂ ಉಂಟಾದಾಗ ಅವನ ಮುಖ ಕಾರ್ತಿಕ ತಿಂಗಳಿನ ಆಕಾಶದ ಮುಖದಂತೆ ಬದಲಾಯಿಸುತ್ತಿತ್ತು,

ಹೀಗೆ ಊಟವನ್ನು ಮುಗಿಸಿಕೊಂಡು ಅವನೂ ಅವನ ಸ್ನೇಹಿತನೂ ಹಿಂತಿರುಗುತ್ತಿರಲು ಅಂಚೆಯವನು ಎದುರಿಗೆ ಬಂದು ಅವನ ಕೈಯ್ಯಲ್ಲಿ ಒಂದು ಕಾಗದವನ್ನು ಕೊಟ್ಟನು. "ಏತಕ್ಕೆ ಇಷ್ಟು ಹೊತ್ತಾಯಿತು ?" ಎಂದು ಅಂಚೆಯವನನ್ನು ಕೇಳಿದನು. ಅವನು "ಈಹೊತ್ತು ಮೆಯಿಲೇ ಇಷ್ಟು ತಡವಾಗಿ ಬಂತು." ಎಂದು ಹೇಳಿದ ಉತ್ತರವನ್ನು ಕೂಡ ಕಿವಿಯಲ್ಲಿ ಹಾಕಿಕೊಳ್ಳದೆ ಪತ್ರವನ್ನು ಅವನು ಆತುರದಿಂದ ಬಿಚ್ಚಿ ನೋಡಿದನು. ಅದರಲ್ಲಿ ಕೆಳಗೆ ಕಂಡಂತೆ ಬರೆದಿತ್ತು :

"ನನ್ನ ಪ್ರೇಮವನ್ನು ಬೆಳೆಸುವ ನನ್ನ ಪ್ರಾಣನಾಥರಾದ............ ಅನೇಕ ನಮಸ್ಕಾರಗಳು. ಕ್ಷೇಮ. ಕ್ಷೇಮ ಸಮಾಚಾರಕ್ಕೆ ಬರೆಯುವುದು.

ನನ್ನ ಪತ್ರವನ್ನು ಕಂಡ ಕೂಡಲೆ ಉತ್ತರ ಬರೆಯಲು ತಮಗೆ ಅವಕಾಶ ವಾಗಲಿಲ್ಲ. ತಾವೇನು ಮಾಡೀರಿ? ತುಂಬ ಕೆಲಸವಿರೋವರು. ನನ್ನ ಜ್ಞಾಪಕ ಎಲ್ಲಿರಬೇಕು? ಅಲ್ಲದೆ ಅಪ್ಪಣೆ ಕೊಡುವವರು ಅಪ್ಪಣೆ ಕೊಟ್ಟ ಮೇಲೆಯೋ ಅಲ್ಲವೆ ನೀವು ಉತ್ತರ ಬರೆಯಬೇಕು. ಇರಲಿ! ಇರಲಿ! ನಾನು ಸಮಕ್ಷಮ ಬಂದು ನಿಮಗೆ ಸರಿಯಾದ ದಾರಿ ಹೇಳುತ್ತೇನೆ. ರಾತ್ರಿಯೇ ಬಂದು, ಶಬ್ದಮಾಡದೆ, ನನ್ನ ಮನಸ್ಸನ್ನು ಕದ್ದು ಹೋಗುವುದು—ಆಮೇಲೆ ಎಷ್ಟು ಬರೆದರೂ ಹಾಕಿದ ಪತ್ರಕ್ಕೆ ಉತ್ತರವಿಲ್ಲ. ಧೈರ್ಯವಿದ್ದರೆ ಪ್ರತ್ಯಕ್ಷ ಬರಬೇಕು. ಇಲ್ಲದಿದ್ದರೆ ಸುಮ್ಮನೆ ಇರಬೇಕು.

"ನನ್ನ ದೊರೆಯೆ! ನಾನು ಎಷ್ಟು ವಿನೋದವಾಗಿ ಬರೆಯ ಬೇಕೆಂದಿದ್ದರೂ, ಬರೆಯಲಾಗುವುದಿಲ್ಲವಲ್ಲ! ತಮ್ಮನ್ನು ಬಿಟ್ಟು ಅಗಲಿ, ಬೆಂಕಿಯಲ್ಲಿಟ್ಟ ಮೇಣದಂತೆ ಕರಗಿ, ಸೋನೆ ಮಳೆ ಹುಯ್ಯುವಂತೆ ಒಂದು ಸಲ ಗಾಳಿ ಬೀಸುವುದು, ಕೂಡಲೆ ಚಟಚಟನೆಂದು ಮಳೆ ಸುರಿಯುವುದು— ಹೀಗೆ ನಿಟ್ಟುಸಿರೂ ಕಣ್ಣೀರಾಗಿ, ದಾರಿಯಲ್ಲಿ ಮಲಗಿರುವ ಅಜಗರದಂತೆ ಚಲಿಸದಿರುವ ಈ ಹೊತ್ತನ್ನು ಕಳೆಯುತ್ತ ತಪಿಸುತ್ತಿರುವ ನನಗೆ ಏನು ತಮಾಷೆ ಬೇಕಾಗಿದೆ? ಹೋದ ಜನ್ಮದಲ್ಲಿ ಯಾವ ಪ್ರೀತಿಯ ದಂಪತಿಗಳನ್ನು ಬೇರ್ಪಡಿಸಿದೆನೋ — ಆ ಪಾಪವೇ ನಾವು ಅಗಲುವಂತೆ ಮಾಡಿತು. ಪತ್ರ ವಾದರೂ ಬಂದರೆ ನನ್ನ ವ್ಯಸನ ತೀರುವುದು ಎಂದರೆ ಅದೂ ಸರಿಯಾದ ರೀತಿ

ಯಲ್ಲಿ ಬರುವುದಿಲ್ಲ. ಹೋಗಲಿ, ಈಗಲಾದರೂ ದಯಮಾಡಿ ಬರೆದಿರಲ್ಲಾ! ಸ್ವಲ್ಪ ತಡವಾದರೆ ದೇಹಸ್ಥಿತಿ ಏನೋ ಎಂದು ಶಂಕೆ ಉಂಟಾಗುತ್ತದೆ. ಎಣಿಸಬಾರದ ಯೋಚನೆಗಳೆಲ್ಲ ಸುಳಿಯುತ್ತವೆ. ಹಾಗೆ ವ್ಯಸನಗೊಂಡಿರುವಾಗ ತಮ್ಮ ಪತ್ರ ತಲುಪಿತು. ತಮ್ಮ ಚಿನ್ನದ ಹಸ್ತದಿಂದ ಬರೆದ ಆ ಪತ್ರವನ್ನು ತಬ್ಬಿಕೊಂಡು ಮುದ್ದಿಸಿದೆನು. ಅದನ್ನು ಮತ್ತೆ ಮತ್ತೆ ಓದುವಾಗ ತಮ್ಮೊಡನೆ ನೇರವಾಗಿ ಮಾತಾಡಿದಂತೆ ಭಾವಿಸಿದೆನು. ಉಂಗುರವನ್ನು ಕಂಡ ಸೀತೆಯಂತೆ ಸಂತೋಷದಲ್ಲಿ ನನಗೆ ಕಣ್ಣೂ ಕಾಣಲಿಲ್ಲ. ತಮ್ಮ ಪತ್ರವೆಂದರೆ ಅಷ್ಟು ಸಂತೋಷವಾದರೆ — ಪ್ರತ್ಯಕ್ಷವಾಗಿ ಕಾಣಲಿದ್ದೇವೆ ಎಂದರೆ ಎಷ್ಟು ಸಂತೋಷ ಆಗಲಾರದು?

ನಾನು ಅಲ್ಲಿಗೆ ಮುಂದಿನ ಶುಕ್ರವಾರ ತಾಯಿ ತಂದೆಗಳೊಡನೆ ತಮ್ಮನ್ನೇ ಪ್ರತ್ಯಕ್ಷವಾಗಿ ಕಾಣಲು ಖಂಡಿತವಾಗಿ ಬರಲಿದ್ದೇನೆ. ಮಗು ನಟರಾಜನನ್ನು ಕುರಿತು ರಾತ್ರಿ ಹಗಲು ಒದರಿಕೊಳ್ಳುತ್ತಿರುವುದೇ ನಮಗೆ ದೊಡ್ಡ ಕೆಲಸವಾಗಿದೆ. ತಾಯಿ ತಂದೆಗಳಂತೂ ಅತ್ತು ಅತ್ತು ಕೃಶವಾಗಿ ಬಿಟ್ಟಿದ್ದಾರೆ. ಅವರು ವ್ಯರ್ಥವಾದ ಈ ನೆನಪನ್ನು ಕಳೆದುಕೊಳ್ಳಲು ಯೋಚಿಸಿಯೇ ಮದರಾಸಿಗೆ ಬರುತ್ತಾರೆ. ನನ್ನನ್ನು ಬಿಟ್ಟು ಅಗಲಿ ಅವರು ಹೇಗೆ ಬದುಕಲಾದೀತು? ಮುಂದಿನ ವಾರ ಖಂಡಿತವಾಗಿ ಬರುತ್ತೇನೆ. ಶಕುಂತಲೆಯನ್ನು ನೋಡಿ ದುಷ್ಯಂತನು, "ನೀನು ಯಾರು?" ಎಂದು ಕೇಳಿದನಲ್ಲ, ಹಾಗೆ ನೀವೂ ನನ್ನನ್ನು ಕೇಳುವಿರೇನು? ಕೇಳಿದರೆ ಏನು ಉತ್ತರ ಹೇಳಲಿದ್ದೇನೆ ಎನ್ನುವುದನ್ನು ಬೇಕಾದರೆ ಪರೀಕ್ಷಿಸಿ, ನೋಡೋಣ. ಪ್ರಯಾಣ ನಿಶ್ಚಯ. ನನ್ನಿಂದ ತಾವು ಎಷ್ಟು ಕಷ್ಟವನ್ನು ಪಟ್ಟಿರಿ? ನಾನು ಪಟ್ಟ ಪಾಡೆಲ್ಲವನ್ನೂ ನೀವೂ ಪಟ್ಟಿರಬೇಕಲ್ಲವೆ? ನನ್ನ ದೊರೆಯೇ! ತಾವು ನನ್ನ ವಿಷಯದಲ್ಲಿ ಇಟ್ಟಿರುವ ಪ್ರೀತಿಯನ್ನು ನೆನೆದರೆ ನನಗಾಗುವ ಸಂತೋಷ ಅಷ್ಟಿಷ್ಟಲ್ಲ. ಈಗ ತಮ್ಮನ್ನು ಕಾಣುವ ಕಾಲ ಸಮೀಪಿಸಿರುವುದರಿಂದ ಅದು ಇನ್ನೂ ಮೇಲಕ್ಕೆ ಉಕ್ಕಿ ಬರುತ್ತದೆ. ನಂದನು ಚಿದಂಬರಕ್ಕೆ ಹೋಗಬೇಕೆಂಬ ಚಿಂತೆಯಲ್ಲಿದ್ದಾಗ ಅದನ್ನು ನೋಡಿದ ಕೂಡಲೆ ಎಷ್ಟು ಸಂತೋಷವಾಯಿತು ಅವನಿಗೆ! ಹಾಗೆಯೆ ನಾನು ತಮ್ಮನ್ನೇ ಕಾಣಲು ಬರುವ

ಸಂತೋಷವನ್ನು ಅಲ್ಲಿಗೆ ಬಂದು ತಮ್ಮಲ್ಲಿ ಒಂದು ಮಾತಿಗೆ ಒಂದು ಮುದ್ದಾಗಿ, ಜೇನೂ ಸಕ್ಕರೆಯೂ ಕಲಸಿದಂತೆ ಕಲಸಿ ಹೇಳಿ ಆನಂದಿಸುವೆನು. ಒಂದು ದಿನವಾದರೂ ನಮ್ಮ ಪ್ರೀತಿ ಬದಲಾಗಬಾರದು. ತಮ್ಮ ಪ್ರೀತಿಯನ್ನು ಭೂಷಣವಾಗಿ ಧರಿಸಿಕೊಂಡು ತಮ್ಮ ಚಿಂತೆಯನ್ನು ದೂರಮಾಡಿ, ಇಬ್ಬರೂ ನಲಿಯಲು ಅಲ್ಲಿಗೆ ಬರುತ್ತೇನೆ. ನಾನು ನಳಚರಿತ್ರೆಯ ಹಾಡನ್ನು ಪೂರ್ತಿಯಾಗಿ ಪಾಠಮಾಡಿ ಆಯಿತು. ನಾನು ಬರೆದ ಪತ್ರದಲ್ಲಿ ತಪ್ಪುಗಳು ಹೆಚ್ಚಾಗಿರಬಹುದು, ತಾವು ಅದನ್ನು ಹರಿದು ಹಾಕದೆ ಹಾಗೇ ಇಟ್ಟಿದ್ದರೆ ಅಲ್ಲಿಗೆ ಬಂದು ತಮ್ಮಿಂದ ಈ ತಪ್ಪುಗಳನ್ನು ತಿದ್ದಿಸಿಕೊಳ್ಳುತ್ತೇನೆ. ನನ್ನ ದೇಹಾರೋಗ್ಯ ಚೆನ್ನಾಗಿದೆ. ತಮ್ಮ ಪ್ರೀತಿಯೇ ನನ್ನನ್ನು ಹುರಿದುಂಬಿಸಿದೆ. ನಾನು ಅಲ್ಲಿಗೆ ಬರುವುದರಿಂದ ಪತ್ರವನ್ನು ಇಲ್ಲಿಗೆ ನಿಲ್ಲಿಸಿ ಸಮಕ್ಷಮ ಮಾತಾಡೋಣ. ಆದುವರೆಗೂ ಪ್ರತಿಯೊಂದು ನಿಮಿಷವೂ ಒಂದು ಯುಗವಾಗಿದೆ. ತಮ್ಮ ಬಳಿಗೆ ಹಕ್ಕಿಯಂತೆ ಹಾರಿ ಕೂಡಲೆ ಬರಬೇಕೆಂದು ಆಸೆಯಾಗಿದೆ.

ಪ್ರಿಯನಾಥನ ಪಾದದಲ್ಲಿ ತಮ್ಮ ಪ್ರಾಣ ಸಖಿಯಾದ
ಲಕ್ಷ್ಮಿಯ ನಮಸ್ಕಾರ.

ಈ ಪತ್ರ ಯಾರು ಯಾರಿಗೆ ಬರೆದರೆಂದು ನಾವು ಹೇಳದೆಯೆ ವಾಚಕರು ತಿಳಿದುಕೊಂಡಿರುವರು. ಶ್ರೀನಿವಾಸನು ಈ ಪತ್ರವನ್ನು ಆತುರದಿಂದ ಬಿಚ್ಚಿ ಓದಿದನು. ಮತ್ತೆ ಮುಚ್ಚಿಟ್ಟನು. ಮತ್ತೆ ಓದಿದನು. ತನ್ನ ಸ್ನೇಹಿತನಾದ ಸುಬ್ಬರಾಯನಿಗೆ ಓದಿ ತೋರಿಸಿದನು. ಮತ್ತೆ ತಾನೇ ಓದಿಕೊಂಡನು. ಕಣ್ಣುಗಳಿಗೆ ಒತ್ತಿಕೊಂಡು ಮುತ್ತಿಟ್ಟನು. ಸಂತೋಷದಲ್ಲಿ ಅವನ ಮಾತು ತೊದಲಿತು. ಸ್ನೇಹಿತನಾದ ಸುಬ್ಬರಾಯನೂ ಬಹಳ ಸಂತೋಷಪಟ್ಟು, "ನಿನ್ನ ಹೆಂಡತಿ ಲಕ್ಷ್ಮಿ ಅಲ್ಲ, ಸರಸ್ವತಿಯಪ್ಪಾ" ಎಂದು ಹೇಳಿದನು. ಶ್ರೀನಿವಾಸನಿಗೆ ಶಾಂತಿಮುಹೂರ್ತವಾದ ಸಮಾಚಾರವನ್ನು ನಾವು ಈ ಮೊದಲೆ ಹೇಳಲು ಅವಕಾಶವಾಗಲಿಲ್ಲ. ಅವನೂ ಲಕ್ಷ್ಮಿಯೂ ನಳ ದಮಯಂತಿಯರಂತೆ ಬಹಳ ಅನ್ಯೋನ್ಯವಾಗಿದ್ದರು. ಪರಸ್ಪರ ಪ್ರೇಮದಿಂದ ಒಮ್ಮನಸ್ಸಿನಿಂದ ತಮ್ಮ ಜೀವನಯಾತ್ರೆಯನ್ನು ನಡೆಸುವವರ ಸುಖಕ್ಕಿಂತಲೂ ಮಿಗಿ

ಲಾದ ಸುಖ ಈ ಪ್ರಪಂಚದಲ್ಲಿಲ್ಲ. ಆ ಬಗೆಯ ಸುಖಜೀವನಕ್ಕೆ ಪಾತ್ರ ರಾಗಿದ್ದವರು ಲಕ್ಷ್ಮಿ ಮತ್ತು ಶ್ರೀನಿವಾಸನ್.

ಶಾಂತಿ ಮೂಹೂರ್ತಕ್ಕೆ ಮೊದಲೇ ಅವರಿಬ್ಬರೂ ಯಾರಿಗೂ ತಿಳಿಯದೆ ಮಾತನಾಡಿಕೊಳ್ಳಲು ಆರಂಭಿಸಿದ್ದರು. ಶ್ರೀನಿವಾಸನ್ ಶಿರುಕುಳಕ್ಕೆ ಬಂದಿದ್ದ ವೇಳೆಯಲ್ಲಿ ಒಂದು ದಿನ ಗುಡಿಗೆ ಹೋಗಿ ದೇವರ ದರ್ಶನವನ್ನು ಮಾಡಿಕೊಂಡು ತನ್ನ ಮಾವನವರ ಮನೆಯ ಬೀದಿಯ ಜಗುಲಿಯಲ್ಲಿ ಕುಳಿತು ಕೊಂಡಿದ್ದನು. ಅವನಿಗೆ ಕೆಲವು ದಿನಗಳಿಂದಲೂ ತನ್ನ ಹೆಂಡತಿಯೊಡನೆ ಮಾತಾಡಬೇಕೆಂಬ ಆಸೆ. ಆದರೆ ಸಮಯ ದೊರೆಯಲಿಲ್ಲ. ಸಮಯ ಸಿಕ್ಕಿ ದರೆ ಧೈರ್ಯವಿಲ್ಲ. ಅಂದು ಲಕ್ಷ್ಮಿಯನ್ನು ಕುರಿತೇ ಧ್ಯಾನ ಮಾಡುತ್ತ ಮೇಲೆ ಹೇಳಿದಂತೆ ಅವನು ಕುಳಿತಿದ್ದನು. ಆಗ ಒಬ್ಬ ಭಿಕ್ಷುಕ ಬಂದನು. ಶ್ರೀನಿವಾಸನು ಭಿಕ್ಷೆಯನ್ನು ಹಾಕಲು ಅವಳು ಬಂದರೂ ಬರಬಹುದು, ಎಂದು ಆತುರದಿಂದ ನೋಡುತ್ತಿದ್ದನು. ಅವನು ಎಣಿಸಿದಂತೆಯೇ ಲಕ್ಷ್ಮಿ ಅನ್ನ ವನ್ನು ತೆಗೆದುಕೊಂಡು ಬಂದಳು. ಇದೇ ಮಾತಾಡುವುದಕ್ಕೆ ಸಮಯ ವೆಂದು ಶ್ರೀನಿವಾಸನು ಯೋಚಿಸುತ್ತಿರಲು ಬಹಳ ದಿನಗಳಿಂದ ತನ್ನ ಗಂಡ ನೊಂದಿಗೆ ಮಾತನಾಡಬೇಕೆಂದು ಆಸೆಗೊಂಡಿದ್ದ ಲಕ್ಷ್ಮಿ 'ಅವರಾಗಿ ಮಾತಾ ಡುವಂತಿಲ್ಲ—ನಾಚಿಕೆ—ಇದೇ ಸಮಯ' ಎಂದು ಎಣಿಸಿ, "ಊಟಕ್ಕೆ ಬರ ಬಾರದೆ" ಎಂದು ಬಹಳ ಮಧುರವಾಗಿ ಹೇಳಿ ಹೊರಟು ಹೋದಳು. ಅದನ್ನು ಕೇಳಿದ ಕೂಡಲೆ ಶ್ರೀನಿವಾಸನು ಆನಂದಪರವಶನಾದನು. ಉತ್ತರ ಹೇಳಲು ಸಹ ಅವನಿಗೆ ತೋರಲಿಲ್ಲ. ಅವನ ಅಂತರಂಗ ವಸಂತ ಋತು ವಿನಂತೆ ಅರಳಿತು. ಮೃದುವಾಗಿ ಹೇಳಲ್ಪಟ್ಟ ತನ್ನ ಹೆಂಡತಿಯ ಮಾತುಗಳು ಅವನ ಕಿವಿಯಲ್ಲಿ ವೀಣಾಗಾನ ಮಾಡುತ್ತ ನಿಂತುವು. ಅವನು ಮತ್ತೆ ಮತ್ತೆ ತನ್ನೊಳಗೇ ಪಠಿಸುತ್ತ—ಅತಿ ರುಚಿಯಾದ ಒಂದು ಪದಾರ್ಥವನ್ನು ಉಂಡ ವನಂತೆ ಆ ಮಾತುಗಳನ್ನು ಒಂದೊಂದಾಗಿ ಚರ್ವಣಮಾಡಿ, ಅನುಭವಿಸಿ, ಗುಡಿಗೆ ಹೋಗಿ ಬಂದ ಫಲ ಕೂಡಲೆ ಲಭಿಸಿತೆಂದು ಆನಂದಿಸಿದನು. ಇದೇ ಅವರು ಮೊಟ್ಟ ಮೊದಲು ಮಾತಾಡಿಕೊಂಡ ಸಂದರ್ಭ. ಅನಂತರ ಅವರು

ಗೋಪ್ಯವಾಗಿ ಮಾತಾಡಿಕೊಂಡ ರಹಸ್ಯಗಳೆಲ್ಲವನ್ನೂ ಎಲ್ಲರೂ ಅರಿಯು ವಂತೆ ಇಲ್ಲಿ ಏತಕ್ಕೆ ಹೇಳಬೇಕು?

ಈ ಕಾಲದಲ್ಲಿ ಕೆಲವರು ಹೆಣ್ಣುಮಕ್ಕಳು ಇಪ್ಪತ್ತು ವರ್ಷಕ್ಕೆ ಮೇಲ್ಪಟ್ಟು ಮದುವೆ ಮಾಡಿಕೊಂಡರೇನೇ ಗಂಡನೊಂದಿಗೆ ಸುಖದಿಂದ ಬಾಳಲು ಸಾಧ್ಯವೆಂದು ಭಾವಿಸುತ್ತಾರೆ. ಶ್ರೀನಿವಾಸ-ಲಕ್ಷ್ಮಿ ಇವರ ಪ್ರೇಮವನ್ನು ಚೆನ್ನಾಗಿ ತಿಳಿದ ನನಗೆ ಹಾಗೆ ತೋರುವುದಿಲ್ಲ.

ಶ್ರೀನಿವಾಸನು ಬಿ. ಎ. ಪರೀಕ್ಷೆಯಲ್ಲಿ ಎಲ್ಲರಿಗೂ ಮೊದಲನೆಯವನಾಗಿ ಉತ್ತೀರ್ಣನಾದನು. ಅದಾದ ಮೇಲೆ ಎಫ್. ಎಲ್. ಪರೀಕ್ಷೆಗೆ ಓದುವಾಗ ಅವನಿಗೆ ಶಾಂತಿ ಮುಹೂರ್ತ ನಡೆಯಿತು. ಮಗು ನಟರಾಜನನ್ನು ಕಳೆದು ಕೊಂಡ ಮುತ್ತುಸ್ವಾಮಿ ಅಯ್ಯರ್, ಲಕ್ಷ್ಮಿ-ಶ್ರೀನಿವಾಸನ್ ಇವರ ಸಂತೋಷದಲ್ಲಿ ತನ್ನ ದುಃಖವನ್ನು ಒಂದು ಬಗೆಯಲ್ಲಿ ಮರೆತಿದ್ದರು. ಆದರೆ ಲಕ್ಷ್ಮಿಯನ್ನು ಅತ್ತೆಯ ಮನೆಗೆ ಕಳುಹಿಸುವಾಗ ಅವರ ಅಳುವಿಗೆ ಮಿತಿ ಇರಲಿಲ್ಲ. "ನನ್ನ ಮನೆ ಇನ್ನು ಹಾಳುಬಿತ್ತು. ಅಡಿಗೆಯ ಮನೆಯಲ್ಲಿ ಎಕ್ಕದ ಗಿಡ ಬೆಳೆಯಲಿ. ಇನ್ನು ನನಗೇನು ಆಗಬೇಕು?" ಎಂದೂ,"ಅಯ್ಯೋ! ಇದಕ್ಕೇ ಅಲ್ಲವೆ ಹೆಣ್ಣನ್ನು ಹೆತ್ತು ಕೆಡಬೇಡ" ಎಂದು ಹೇಳುತ್ತಾರೆ—ಎಂತಲೂ ಅವರು ವ್ಯಸನಗೊಂಡಾಗ ಶ್ರೀನಿವಾಸನ ತಂದೆ ಲಕ್ಷ್ಮಿಯನ್ನು ಸ್ವಲ್ಪ ಕಾಲ ಮನೆಯಲ್ಲಿಟ್ಟುಕೊಂಡಿದ್ದು ಆಮೇಲೆ ಕಳುಹಿಸಿದರಾಯಿತೆಂದು ಹೇಳಿ ಸಮಾಧಾನ ಮಾಡಿದರು. ಶ್ರೀನಿವಾಸನು ಮದರಾಸಿಗೆ ಹೋದನಂತರ ಕಮಲಾಂಬಾಳೂ, ಮುತ್ತುಸ್ವಾಮಿ ಅಯ್ಯರೂ ಒಂದು ಸರಿಯಾದ ಜಾಗ ವನ್ನು ಕುದುರಿಸಿಕೊಂಡು ತಮ್ಮ ಮಗಳು ಅಳಿಯನೊಂದಿಗೆ ಇರಬೇಕೆಂದು ಉದ್ದೇಶಿಸಿದರು. ಲಕ್ಷ್ಮಿಯ ಪತ್ರ ಬಂದ ಕೆಲವು ದಿನಗಳಲ್ಲಿಯೇ, ಎಲ್ಲರೂ ಮದರಾಸಿಗೆ ಬಂದು ಸೇರಿದರು. ಅವರನ್ನು ಕಂಡ ಶ್ರೀನಿವಾಸನು ತಾಯಿ ಯನ್ನು ಕಂಡ ಕರುವಿನಂತೆಯೂ, ತನ್ನ ಒಡನಾಡಿಯನ್ನು ಕಂಡ ಚಕ್ರವಾಕ ಪಕ್ಷಿಯಂತೆಯೂ ಆನಂದಿಸಿದನು. ಅನುಕೂಲವಾದ ಒಂದು ಮನೆಯಲ್ಲಿ ಅವರೆಲ್ಲರೂ ಬಹಳ ಸಂತೋಷವಾಗಿ ವಾಸಮಾಡಿದರು.

## ೨೧. ಸಮುದ್ರ ತೀರದ ಆಟ

ಶ್ರೀನಿವಾಸನೂ ಲಕ್ಷ್ಮಿಯೂ ಆಗಾಗ್ಗೆ ಸಮುದ್ರ ತೀರಕ್ಕೆ ಹೋಗುವುದುಂಟು. ಮಕ್ಕಳು ತಾಯಂದಿರ ಮಡಲಿನ ಮೇಲೆ ಹತ್ತಿ ಮೊಳಕಾಲ ಮೇಲೆ ನಿಂತು ಹಾಯ್ದು ಆಟವಾಡುವಂತೆ ಅಲೆಗಳು, ಕುಶುಲವರಂತಹ ಮಕ್ಕಳ ಕೂಟಗಳು, ತಾಯಿಯಾದ ಸಮುದ್ರದ ಮಡಲಿನಲ್ಲಿ ಹತ್ತಿ, ನೆಗೆದು, ದಡದ ಮೇಲೆ ಬಂದು ಬಿದ್ದು ಮರಳನ್ನೆತ್ತಿ ನೀರಿನಲ್ಲಿಯೂ, ನೀರನ್ನೆತ್ತಿ ಮರಳಿನಲ್ಲಿಯೂ ಹಾಕಿ, ಆಟವಾಡುತ್ತಿದ್ದುವು. ಆಕಾಶದಲ್ಲಿ ನಕ್ಷತ್ರಗಳು ಹೇಗೋ ಹಾಗೆ, ಲೆಕ್ಕವಿಲ್ಲದ ಚಿನ್ನದ ಬಣ್ಣದ ಮರಳಿನ ಸಣ್ಣ ಕಣಗಳು ಕಪ್ಪು ಮರಳಿನ ಮಧ್ಯದಲ್ಲಿ ಪ್ರಕಾಶಿಸಲು, ಹಲವಾರು ಬಗೆಯ ವಿಚಿತ್ರವಾದ ರಂಗೋಲಿ ಮಾದರಿಗಳನ್ನು ಹಾಕಿ, ಅಳಿಸಿ, ಮತ್ತೆ ರಚಿಸಿ, ನೊರೆಯ ಮೊತ್ತವನ್ನೂ, ಮುತ್ತನ್ನೂ ಎರಚಿ, ಕಪ್ಪೆ ಚಿಪ್ಪುಗಳನ್ನೂ ಏಡಿಗಳನ್ನೂ ಮರದ ತುಂಡುಗಳನ್ನೂ ಉರುಳಿಸಿ, ಹೊರಳಿಸಿ, ಹರಡಿ, ಹೂತು, ಒಂದು ಕ್ಷಣವಾದರೂ ಬಿಡುವಿಲ್ಲದೆ ಈ ವಿಧವಾದ ಬಾಲ್ಯ ಲೀಲೆಗಳನ್ನು ಮಾಡುತ್ತಿದ್ದ ಸಮುದ್ರ ತೀರಕ್ಕೆ ಒಂದು ದಿನ ಸಂಜೆ ಶ್ರೀನಿವಾಸನೂ ಲಕ್ಷ್ಮಿಯೂ ಬಂದರು.

ಅಂದಿನ ಸೂರ್ಯಾಸ್ತಮಾನದ ಸೊಬಗನ್ನು ಏನೆಂದು ಬಣ್ಣಿಸುವುದು? ಹಗಲೆಲ್ಲ ನೋಡಲಾಗದ ಕಣ್ಣನ್ನು ಕೋರೈಸುತ್ತಿದ್ದ ಕಾಂತಿಯೊಡನೆ ಆಕಾಶ ಭೂಮಿಗಳನ್ನು ತನ್ನ ಆಜ್ಞೆಗೆ ಅಧೀನಪಡಿಸಿಕೊಂಡು ಸರ್ವಾಧಿಕಾರವನ್ನು ಮಾಡಿದ ಗಾಂಭೀರ್ಯದಿಂದ ರಾರಾಜಿಸುವ ಚಕ್ರವರ್ತಿಯಾದ ಸೂರ್ಯನು ವೃದ್ಧಾಪ್ಯ ಹೊಂದಿ ಅಜ, ರಘು, ದಿಲೀಪಾದಿ ಅರಸರುಗಳನ್ನು ನೋಡಿ ತಾನೂ ರಾಜ್ಯವನ್ನು ತ್ಯಜಿಸಿ ತಪಸ್ಸು ಮಾಡಲು ಬಯಸಿದಂತೆ, ಶಾಂತ ಸ್ವರೂಪವನ್ನು ತಾಳಿ ಕೆಂದಾವರೆಯಂತೆ ಅರಳಿದ ತನ್ನ ಸುಂದರವಾದ ಮುಖವನ್ನು ಎಲ್ಲರೂ ನೋಡುವಂತೆ ವ್ಯಕ್ತಮಾಡಿ, ಅರ್ಘ್ಯಾದಿಗಳಿಂದ ತನ್ನನ್ನು ಸ್ತುತಿಸುವ ಪ್ರಜೆಗಳಿಂದ ಬೀಳ್ಕೊಂಡು, ಕೆಂಪು ಬಾನೆಂಬ ತನ್ನ ಕೆಂಪು ಜಟೆಯನ್ನು ಹೆಣೆದು ಒಂಟಿಯಾಗಿ ತೆರಳಲು, "ಇದೂ ನಿನ್ನ ದಿವ್ಯ ಲೀಲೆಯೇ" ಎಂದು ಮುಗ್ಧರಾಗಿ ಭಕ್ತಗಣಗಳು, ನದಿ, ಕೊಳ, ಮನೆ—ಇವೇ

ಮೊದಲಾದ ಸ್ಥಳಗಳಲ್ಲಿ ಬದ್ಧಾಂಜಲಿಗಳಾಗಿ ನಿಂತು,"ಯಾರು ನಿನ್ನ ಅತಿಶಯವಾದ ಮಾಯವನ್ನು ಬಲ್ಲವರು ?" ಎಂದು ಭಗವಂತನನ್ನು ಸ್ತುತಿಸಿದರು. ಸಮುದ್ರತೀರದಲ್ಲಿಯಾದರೊ 'ಈ ವೇಳೆಗೆ ನಮ್ಮ ಉದ್ಯೋಗ ಕೊನೆಗೊಂಡಿತು' ಎಂದು ತಮ್ಮ ಮತ್ಸ್ಯಭರಿತವಾದ ಬಲೆಗಳೊಂದಿಗೆ ಕಟ್ಟುಮರಗಳನ್ನೂ ದೋಣಿಗಳನ್ನೂ ದಡಕ್ಕೆ ಸೇರಿಸಿ, ಬೆಸ್ತರು ಸಮುದ್ರದ ಮೇಲೆ ಹೋಗಿ ತಾವು ಗಳಿಸಿದ ದ್ರವ್ಯವನ್ನು ತರುತ್ತಿರಲು, ಕೈಯ್ಯಲ್ಲಿ ಬುಟ್ಟಿ ಹಿಡಿದುಕೊಂಡು ತಮ್ಮ ದಾರಿಯನ್ನು ನೋಡುತ್ತಿದ್ದು ಬಂದಕೂಡಲೆ ಚಪ್ಪಾಳೆ ತಟ್ಟುತ್ತ ನಿಂತ ತಮ್ಮ ಹೆಂಡಿರು ಮಕ್ಕಳನ್ನು ಅವರು ಕೂಡಿಕೊಂಡರು.

ಆಂಗ್ಲೇಯ ಮಹಿಳೆಯರು ನವಿಲಿನ ಬಾಲವನ್ನು ಹೋಲುವ ವಸ್ತ್ರಗಳನ್ನು ಧರಿಸಿ, ಹಂಸಗತಿಯಿಂದ, ಗಿಳಿಯಂತೆ ಮಾತುಗಳನ್ನಾಡುತ್ತ ತಮ್ಮ (ಅಥವಾ ಪರ) ನಾಯಕರೊಡನೆ ಕೈಜೋಡಿಸಿಕೊಂಡು ಸಂಭಾಷಿಸುತ್ತ, ನಗುತ್ತ ಒಯ್ಯಾರದಿಂದ ಓಡಾಡುತ್ತಿದ್ದರು. ಪಾಠಶಾಲೆಗಳಲ್ಲಿ ಓದುವ ಕೆಲವು ಹುಡುಗರು ಗಂಗೆಗೆ ಹೋದ ಕೋಣನ ಕಥೆಯಂತೆ ಸಮುದ್ರತೀರದಲ್ಲಿಯೂ ಪುಸ್ತಕಗಳನ್ನು ಕಟ್ಟಿಕೊಂಡು ಅಳುತ್ತಿದ್ದರು. ಯುವಕ ದಂಪತಿಗಳು ಸಮುದ್ರದ ಹತ್ತಿರಕ್ಕೆ ಹೋಗುವ ಸಾಹಸವನ್ನು ಮಾಡಿ ಅಲ್ಲಿ ಯಾರಾದರೂ ಎದುರುಗೊಂಡರೆ, ತಮ್ಮ ದೃಷ್ಟಿಯನ್ನು ಬೇರೆ ಕಡೆಗೆ ತಿರುಗಿಸಿ, ನಾಚಿಕೆಯಿಂದ ಏನೋ ತಪ್ಪು ಮಾಡಿದವರಂತೆ, ಎದೆ ಡಬಡಬವೆಂದು ಬಡಿದುಕೊಳ್ಳುತ್ತಿರಲು ತಲೆಯನ್ನು ತಗ್ಗಿಸಿಕೊಂಡು, ಮರಳಿನ ಗುಡ್ಡಗಳ ಬಳಿ ಸಂಕೋಚದಿಂದ ಹುದುಗಿದರು. ಜಿಂಕೆಯ ಮರಿಗಳಂತೆ ಎದ್ದು ಬಿದ್ದು ಕುಪ್ಪಳಿಸುತ್ತಿದ್ದ ಅಲೆಗಳು ಬೀಸುತ್ತಿದ್ದ ಗಾಳಿಯೊಡನೆ ಓಕಳಿಯಾಡುತ್ತಿದ್ದುದನ್ನು ಕಂಡು ತಾವೂ ಉತ್ಸಾಹಭರಿತರಾಗಿ, ಏಕಾಂತ ಸ್ಥಳದಲ್ಲಿ ತಮ್ಮ ಧ್ವನಿಯನ್ನು ಸಮುದ್ರ ಘೋಷವು ನುಂಗಿಬಿಡುವುದೆಂದು ಧೈರ್ಯಗೊಂಡು, ಹಾಡಲು ತಿಳಿಯದಿದ್ದರೂ ಕೆಲವರು ಹಾಡುತ್ತಿದ್ದರು. ಹೇರಳವಾಗಿ ಹರಡಿದ್ದ ಮರಳಿನ ಮೇಲೆ ಕೆಲವರು ಮಲ್ಲಯುದ್ಧ ಮಾಡುತ್ತ ಕಾಲ ಕಳೆದರು. ಮತ್ತೆ ಕೆಲವರು ಅಲ್ಲಿ ಬೀಸುತ್ತಿದ್ದ ತೆಂಗಾಳಿಯಂತೆ ಓಡಿ, ನೆಗೆದು, ಬಿಡುವಿಲ್ಲದೆ ಹಾಯುತ್ತಿದ್ದ

ಅಲೆಗಳಂತೆ ಕುಣಿದಾಡುತ್ತಿದ್ದರು. ಕೆಲವರು ಒಬ್ಬಂಟಿಗರಾಗಿ ಕುಳಿತು ತಮ್ಮ ಕುಟುಂಬ ರಹಸ್ಯಗಳನ್ನು ಅಲೆಗಳೊಡನೆ ಹೇಳಿಕೊಳ್ಳುತ್ತಿದ್ದರು.

ಈ ವಿಧದಲ್ಲಿ 'ವೆರ್ರಿ ವೆಯ್ಯಿ ವಿಧಾಲು' (ಹುಚ್ಚು ಸಾವಿರ ಬಗೆ) ಎಂಬ ತೆಲುಗು ನಾಣ್ಣುಡಿಯಂತೆ ಹಲವಾರು ವಿಚಿತ್ರಗಳಿಂದ ಕೂಡಿದ ಸಮುದ್ರ ತೀರದಲ್ಲಿ ಶ್ರೀನಿವಾಸನೂ ಲಕ್ಷ್ಮಿಯೂ ಒಂದು ಜಾಗದಲ್ಲಿ, ಒಂದು ದೋಣಿಯ ಮರೆಯಲ್ಲಿ, ನಕ್ಷತ್ರಗಳು ಮುತ್ತುಗಳಂತೆ ತುಂಬಿದ್ದ ಆಕಾಶದ ಛಾವಣಿಯ ಕೆಳಗೆ ಸಮುದ್ರರಾಜನು ಪಾದಪೂಜೆಯನ್ನು ಮಾಡುತ್ತಿರಲು, ವಾಯು ಭಗವಾನನು ಚಾಮರವನ್ನು ಬೀಸುತ್ತಿರಲು, ಸಾವಿರಾರು ಅಲೆಗಳು ಸೇರಿ ಅನವರತ ಶ್ರಮಿಸಿ ರಾಶಿ ಹಾಕಿದ ಬಿಳಿಯ ಮರಳಿನ ವಿಮಾನದ ಮೇಲೆ ತಮಗೆ ಎಣೆಯಾದವರು ತಾವೇ ಎಂದು ಭಾವಿಸುತ್ತ ಹೋಗಿ ಕುಳಿತು ಕೊಂಡರು. ಅವರು ಕುಳಿತ ಕೂಡಲೆ ಲಕ್ಷ್ಮಿ ಹಾಡ ತೊಡಗಿದಳು. ಅವಳ ನುಡಿಗಳು ಅಮೃತದ ಸತ್ವದಿಂದ ಹೊರಹೊಮ್ಮಿ, ಕೋಗಿಲೆ, ಕೊಳಲು, ವೀಣೆ ಇವುಗಳನ್ನು ಧಿಕ್ಕರಿಸುವ ಕಂಠದಿಂದ ಹಾಡಲು ಶ್ರೀನಿವಾಸನಿಗೆ ಭೂಲೋಕದಲ್ಲಿರುವ ಪ್ರಜ್ಞೆಯೇ ಇಲ್ಲವಾಯಿತು. "ವಿವೇಕವಿಲ್ಲದ ಅಲೆಗಳು ಮಾತ್ರ ಸ್ವಲ್ಪ ಹೊತ್ತು ಶಬ್ದ ಮಾಡದೆ ಇದ್ದರೆ, ಸಮುದ್ರವೂ ಗಾಳಿಯೂ ಹಾಗೆಯೇ ಭ್ರಮಿಸಿ, ಪ್ರಜ್ಞೆ ತಪ್ಪಿ ಗುಲಾಮರಾಗಿ ಹೋಗುವುವು" ಎಂದು ಶ್ರೀನಿವಾಸನು ನುಡಿದನು.

ಲಕ್ಷ್ಮಿ:– "ಹೌದು. ಸಮುದ್ರವನ್ನು ಕೂಗಿಕೊಳ್ಳಬೇಡವೆಂದರೆ ಸುಮ್ಮನೆ ಇರುವುದೆ? ತುಂಬ ಸರಿ" ಎಂದು ಅವನನ್ನು ಹಾಸ್ಯ ಮಾಡಿದಳು.

ಸ್ವಲ್ಪ ಹೊತ್ತಿಗೆಲ್ಲ ಚಂದ್ರೋದಯವಾಯಿತು. ಕಳಕಳಿಸುವ ಅಮೃತ ಕಲಶದಂತೆ ಎದ್ದು, ಬಿಳಿ ತಾವರೆ ಅರಳಿದಂತೆ ಶುಭ್ರವಾದ ಪ್ರಕಾಶದಿಂದ ಶೋಭಿಸಿತು.

ಶ್ರೀನಿವಾಸನ್:– "ಚಂದ್ರನು ಬಂದನೆಂದು ಸಮುದ್ರದ ಮುಖ ಹಿಗ್ಗಿ ಸಂತೋಷದಿಂದ ಮಂದಹಾಸವನ್ನು ಬೀರುತ್ತಿದೆ. ಆಹಾ! ಭೇಷ್."

ಲಕ್ಷ್ಮಿ :– "ಅದಕ್ಕೆ ಅಷ್ಟು ಸಂತೋಷ ಯಾಕೆ ಹೇಳಿ, ನೋಡೋಣ."

ಶ್ರೀನಿವಾಸನ್ :– "ಚಂದ್ರನು ಅತಿಥಿ ಅಲ್ಲವೇ? ಅದೇ ಕಾರಣ."

ಲಕ್ಷ್ಮಿ : "ಹಾಗಲ್ಲ. ಇನಿಯರು ಕೂಡಿದರೆ ಮದ್ಯಪಾನದ ಸೊಕ್ಕಿನಂತಲ್ಲವೆ? ಸ್ತ್ರೀ–ಪುರುಷರು ಪ್ರೇಮದಿಂದ್ದರೆ ಅದೇ ಅವರಿಗೆ ಚಂದ್ರನ ಅಮೃತ ಪಾನದಂತೆ................"

ಶ್ರೀನಿವಾಸನ್ :– "ಸ್ತ್ರೀ ಯಾರು, ಪುರುಷ ಯಾರು?"

ಲಕ್ಷ್ಮಿ : "ಹೇಳಲೆ?ತಾಳಿ, ಹೇಳುತ್ತೇನೆ. ಈ ಸಮುದ್ರವೇ ಹೆಂಡತಿ: ತಂಗಾಳಿ ಬೀಸುತ್ತಿದೆ ಅಲ್ಲವೆ?"

ಶ್ರೀನಿವಾಸನ್ :– "ಹೌದು ಬೀಸುತ್ತಿದೆ. ಅದಕ್ಕೆ ಏನು ಮಾಡಬೇಕೆನ್ನುತ್ತೀಯ? ಅದು ಹಾಗೆಯೇ ಬೀಸುವುದು. ನೀನು ಹೇಳುವುದು ಏನು?"

ಲಕ್ಷ್ಮಿ :– "ಹೋಗಿ. ನೀವು ಹಾಸ್ಯ ಮಾಡುತ್ತೀರಿ. ನಾನು ಮಾತಾಡುವುದಿಲ್ಲ ಹೋಗಿ"

ಶ್ರೀನಿವಾಸನ್:– "ಇಲ್ಲವೆ—ಹೇಳು. ಛೀ—ಕೋಪಿಸಿಕೊಳ್ಳಬೇಡ."

ಲಕ್ಷ್ಮಿ:– (ಶ್ರೀನಿವಾಸನನ್ನು ಚುಂಬಿಸುತ್ತ) "ತಂಗಾಳಿ ಸೀನೂವಂತೆ (ಶ್ರಿನಿವಾಸನಂತೆ) ; ಸಮುದ್ರವೇ ಲಕ್ಷ್ಮಿಯಂತೆ ; ಅಲೆಗಳೇ ಮಗುವಂತೆ."

ಶ್ರೀನಿವಾಸನ್:– "ಹಾಗಾದರೆ ಗಾಳಿಗೆ ಎಷ್ಟು ಜನ ಹೆಂಡರು? ಅಗೋ, ಆ ಮರಗಳೆಲ್ಲ ಗಾಳಿಯಲ್ಲಿ ತೂಗಾಡುತ್ತಿವೆಯಲ್ಲ. ಅವೂ ಅದಕ್ಕೆ ಹೆಂಡರೆ?"

ಲಕ್ಷ್ಮಿ:– "ಗಂಡಸರು ಯಾವಾಗಲೂ ದುಷ್ಟರು ತಾನೆ! ಅವರನ್ನು ನಂಬಬಹುದೆ? ಅಗೋ, ನೋಡಿ ಗಾಳಿಯನ್ನು. ಆ ಮರವನ್ನು ಹೋಗಿ ಮುತ್ತಿಡುತ್ತೆ. ಆ ಮರ ಚೆನ್ನಾಗಿದೆ. 'ಎಲ್ಲರೂ ಇರುವಾಗಲೆ ಮುದ್ದಿಸುತ್ತದಂತೆ' ಎಂದು ಮನಸ್ಸಿನಲ್ಲಿ ಸ್ವಲ್ಪ ಬೇಜಾರು ಪಟ್ಟುಕೊಳ್ಳುವಂತೆ ನಟಿಸುತ್ತದೆ."

ಶ್ರೀನಿವಾಸನ್:– "ಹೌದು. ಸ್ತ್ರೀಯರಿಗೆ ಯಾವಾಗಲೂ ನಟಿಸುವುದು ತಾನೇ ಕಸಬು. ಮಾಯಾವಿಗಳು. ಸೀರೆಯುಟ್ಟ ಹೆಂಗಸರನ್ನು ನಂಬಿದರೆ..." —ಎಂದು ಹೇಳಿ ಮುಗಿಸುವುದರೊಳಗೆ ತಕ್ಷಣವೆ ಒಂದು ಅಲೆ ಹೊಮ್ಮಿ

ಶ್ರೀನಿವಾಸನ ಮೇಲೆ ನೀರನ್ನು ಎರಚಿತು. ಕೂಡಲೆ ಲಕ್ಷ್ಮಿ ತನ್ನ ವಸ್ತ್ರದಿಂದ ಅವನ ಮುಖವನ್ನು ಒರೆಸಿ, "ಇನ್ನು ಮುಂದೆ ಸ್ತ್ರೀಯರನ್ನು ಬೈಬೇಡಿ. ಆಗಬೇಕು—ಚೆನ್ನಾಗಿ ಆಗಬೇಕು. ಹೆಂಗಸರನ್ನು ದೂರುತ್ತೀರಾ? ದಿಕ್ಕಿಲ್ಲ ದವರಿಗೆ ದೇವರೇ ದಿಕ್ಕು." ಎಂದು ಹೇಳಿದಳು.

ಶ್ರೀನಿವಾಸನ್:- ಪೋಕರಿ ಸಮುದ್ರ! ಅಧಿಕ ಪ್ರಸಂಗಿ ಸಮುದ್ರ! ಗಂಡನಿಗೆ ಅಡಗದ ಹೆಂಡತಿಯಂತೆ ಸದಾ ದಡದ ಮೇಲೆ ದಾಳಿ ಮಾಡು ತ್ತಿರುತ್ತೆ."

ಲಕ್ಷ್ಮಿ:- "ಆದರೂ ಈ ಸಮುದ್ರಕ್ಕೆ ತುಂಬ ಮದ. ನಿಮ್ಮಂತೆ ಸಾಧು ವಾಗಿರಬಾರದೆ?"

ಶ್ರೀನಿವಾಸನ್:- "ಅಗಸ್ತ್ಯರು ಒಂದುಸಲ ಎಲ್ಲವನ್ನೂ ಆಚಮನ ಮಾಡಿ ಮುಗಿಸಿದರು. ಶ್ರೀರಾಮನು ಒಂದು ಸಲ ಹೊಟ್ಟೆ ಉರಿ ತೀರುವಂತೆ ಅಪಮಾನ ಮಾಡಿದರು. ಇಷ್ಟೆಲ್ಲ ಆಗಿಯೂ ಈ ರೀತಿ ಇದೆ ಈ ಸಮುದ್ರ."

ಲಕ್ಷ್ಮಿ:- "ಏತಕ್ಕೆ, ಅದಕ್ಕೆ ಪೂರ್ವದಲ್ಲಿಯೇ ದೇವತೆಗಳೂ, ರಾಕ್ಷಸರೂ ಸೇರಿ ಇದರ ಬಳಿ ಇರುವುದೆಲ್ಲವನ್ನು ಕಡೆದು ತೆಗೆದುಬಿಡಲಿಲ್ಲವೆ? ಚಂದ್ರ, ಲಕ್ಷ್ಮಿ— ಎಲ್ಲವನ್ನೂ ಕಳೆದುಕೊಂಡ ಈ ದರಿದ್ರ ಸಮುದ್ರಕ್ಕೆ ಇಷ್ಟು ಗರ್ವವೆ? ನೀವು ಬಂದಿರುವಿರೆಂದು ಸ್ವಲ್ಪವಾದರೂ ಮರ್ಯಾದೆ ಕೊಟ್ಟಿತೆ ನೋಡಿ!"

ಶ್ರೀನಿವಾಸನ್:- "ಓ ಹೊ! ಸರಿಯೆ! ಸಮುದ್ರವನ್ನು ಬೈದರೆ ತಪ್ಪೇನು! ಅದರಿಂದ ಹುಟ್ಟಿದ ಲಕ್ಷ್ಮಿ ನೀನು ಬಂದು ಬಿಟ್ಟಿರುವೆಯಲ್ಲವೆ? ಆ ಸಂತೋಷವೇ ಅದಕ್ಕೆ? ಹಾಗೆ ಹೇಳು. ಈ ಗಡಿಬಿಡಿಯಲ್ಲಿ ನನ್ನನ್ನು ಅದೆಲ್ಲಿ ಲಕ್ಷ್ಯ ಮಾಡೀತು. ಅಲ್ಲದೆ ಎಷ್ಟು ಜನ ಅದರಲ್ಲಿ ಸ್ನಾನ ಮಾಡು ತ್ತಾರೆ. ಅವರ ಪಾಪವೆಲ್ಲವೂ ಅದಕ್ಕೆ ಹೋಗಿ ಸೇರಿಕೊಂಡಿದೆ. ಆ ಪಾಪ ವನ್ನೆಲ್ಲ ಹೋಗಲಾಡಿಸಲು ಪತಿವ್ರತಾ ಸ್ತ್ರೀಯರ ಪಾದ ಧೂಳಿಯೇ ಔಷಧ. ಪತಿವ್ರತಾ ಶಿರೋಮಣಿ ನೀನೇ ಬಂದಿರುವೆಯಲ್ಲ! ಅದಕ್ಕೇ ಇಂದು ಇಷ್ಟು ಆರ್ಭಟ ಮಾಡುತ್ತಿದೆ."

ಲಕ್ಷ್ಮಿ: "ಒಂದು ಅಲೆಯಾದರೂ ನನ್ನ ಹತ್ತಿರ ಬಂತೆ, ಹಾಗೆ ಹೇಳೋದಕ್ಕೆ? ನನ್ನ ಮೇಲೆ ಒಂದು ತೊಟ್ಟು ನೀರನ್ನು ತೋರಿಸಿ. ನೀವು ಹೇಳುವ ರೀತಿಯಲ್ಲಿ ಇಲ್ಲವಲ್ಲ. ಪ್ರಹ್ಲಾದನನ್ನು ಹಿರಣ್ಯಕಶಿಪು ಸಮುದ್ರದಲ್ಲಿ ತಳ್ಳಿದಾಗ ಸಮುದ್ರ ಅವನನ್ನು ಹೊತ್ತುಕೊಂಡಿತು. ಏತಕ್ಕೆ? ಅವನು ಮಹಾ ಪುಣ್ಯಶಾಲಿ. ಅವನನ್ನು ಸಮೀಪಿಸಿದರೇನೇ ಪಾಪವೆಲ್ಲ ಹೋಗಿಬಿಡುವುದೆಂದು. ಅದರಂತೆ ತಾವು—ಅಯ್ಯರ್—ಈಗ ಬಿಜಯ ಮಾಡಿದ್ದೀರಿ. ಏಕಪತ್ನೀವ್ರತ ತೊಟ್ಟವರು. ಭೋಜರಾಜನಿಗೆ ಎರಡನೆಯವರಾಗಿ ತಮ್ಮನ್ನೇ ಹೇಳಬೇಕು. ಅದಕ್ಕಾಗಿಯೇ ತಮ್ಮನ್ನು ಮುಟ್ಟಲು ಸಮುದ್ರ ಇಷ್ಟು ಆತುರಪಡುತ್ತದೆ. ಮುಟ್ಟ ಆಯಿತು. ಈಗ ಅಲೆಗಳೆಲ್ಲವೂ 'ಜೇನು ಕುಡಿದ ನರಿ ಪಟ್ಟ ಪಾಡನ್ನು' ಪಡುತ್ತಿವೆ.

ಹೀಗೆ ಇವರು ಮಾತಾಡುತ್ತಿದ್ದಾಗ ಒಂದು ದೊಡ್ಡ ಅಲೆ ಗುಂಪು ಕಟ್ಟಿಕೊಂಡು ದಾಳಿ ಮಾಡುವ ಒಬ್ಬ ಅರಸನಂತೆ ಘೋಷಿಸುತ್ತ ಇವರನ್ನು ಅಟ್ಟಿಕೊಂಡು ಬರಲು ಇವರು ಓಡಿದರು. ಅನಂತರ ಅವರು ಕೈ ಕೈ ಹೆಣೆದುಕೊಂಡು ತಿರುಗಿ ಬಂದು ಜಲ್ಲಿಕಟ್ಟುಆಟದಲ್ಲಿ ಎತ್ತಿನೊಡನೆ ಆಡುವಂತೆ ಅಲೆಗಳೊಡನೆ ಆಟವಾಡತೊಡಗಿದರು. ಹೀಗೆ ಮಾಡುತ್ತಿರಲು ಒಂದು ಸಣ್ಣ ಮರದ ತುಂಡು ಅವರಿಗೆ ಸಿಕ್ಕಿತು. ಅದನ್ನು ನೀರಿನಲ್ಲಿ ಎಸೆದು, 'ನನಗೆ ಬೇಡ ಕುಂಬಳಕಾಯಿ' ಎಂಬ ಕಥೆಯಂತೆ ಅಲೆಗಳು ಅದನ್ನು ದಡಕ್ಕೆ ತಂದು ಹಾಕಲು, ಇವರು ಮತ್ತೆ ಅದನ್ನು ನೀರಿನಲ್ಲಿ ಎಸೆದು ಆಟವಾಡಿದರು. ಹೀಗೆ ಆಟವಾಡಿ ಬಳಲಿ ಮನೆಗೆ ಹಿಂತಿರುಗುವ ಸಮಯದಲ್ಲಿ ಸಮುದ್ರದ ಘೋಷ ಅವರ ಕಿವಿಯಲ್ಲಿ ಬಹಳ ಹೊತ್ತು ಪ್ರತಿಧ್ವನಿಗೊಳ್ಳುತ್ತಿತ್ತು. ಇದಕ್ಕೆ ಮುಂಚೆ ತಮ್ಮ ಸ್ವಂತ ಉಲ್ಲಾಸದ ಭರದಲ್ಲಿ ಆ ಘೋಷವನ್ನು ಇವರು ಗಮನಿಸಿರಲಿಲ್ಲ. ಈಗ ಅವರು ಆಡಿ, ಹಾಡಿ ಬಳಲಿ ನೆಮ್ಮದಿಯಾಗಿದ್ದುದರಿಂದ ಎಡೆಬಿಡದೆ ಈ ಮೂಢ ಪ್ರಪಂಚಕ್ಕೆ ಯಾವುದೋ ಒಂದು ದೊಡ್ಡ ತತ್ವಾರ್ಥವನ್ನು ಉಪದೇಶಿಸುತ್ತಿರುವಂತೆ ತೋರುವ ಆ ಸಮುದ್ರಘೋಷವನ್ನು ಕಿವಿಯಾರ ಕೇಳಿ ಅದರ ಅರ್ಥವನ್ನು ಅವರು ಗ್ರಹಿಸುವವರಾದರು.

ಲಕ್ಷ್ಮಿ:- "ತಾಳಿ! ತಾಳಿ! ಈ ಸಮುದ್ರ ಘೋಷವನ್ನು ಕಿವಿಗೊಟ್ಟು ಕೇಳೋಣ"—ಎಂದು ಹೇಳಿ ತನ್ನ ಪೂರ್ಣ ಮನಸ್ಸನ್ನು ಅದರಲ್ಲಿ ಲೀನಮಾಡಿ ಗಮನಿಸಿದಳು. ಶ್ರೀನಿವಾಸನೂ ಹಾಗೆಯೇ ಮಾಡಿದನು. ಸಮುದ್ರಘೋಷ ವಿಟಪುರಷರ ಆಟಪಾಟಗಳ ಆರ್ಭಟವಲ್ಲ. ಯುವತಿಯ ವ್ಯರ್ಥಾಲಾಪವಲ್ಲ. ಮಧುರವಾದ ವೀಣಾವಾದ್ಯಗಳ ಗಾನವಲ್ಲ. ವಿಜಯದ ತಮಟೆಯ ಶಬ್ದವೂ ಅಲ್ಲ. ಅದರಲ್ಲಿ ಸಂತೋಷದ ಧ್ವನಿ ಇಲ್ಲ—ಶೋಕರಸ ಉಂಟು. ಆದರೆ ಮಗುವನ್ನು ಕಳೆದುಕೊಂಡ ತಂದೆಯ ದುಃಖ, ಗಂಡನನ್ನು ಕಳೆದುಕೊಂಡ ಹೆಂಡತಿಯ ದುಃಖ—ಇವೇ ಮೊದಲಾದ ದುಃಖಗಳಿಗೂ ಆ ಶೋಕರಸಕ್ಕೂ ಸಂಬಂಧವಿಲ್ಲ. ಚಂಡಾಲನ ಹೊಟ್ಟೆಯಲ್ಲಿ ಹುಟ್ಟಿ "ತಸ್ಮಾತ್ ಜಾಗ್ರತ ಜಾಗ್ರತ" ಎಂದು ಡಿಂಡಿಮವನ್ನು ಬಾರಿಸುವ ಪುಣ್ಯಪುರುಷನ ಅನುಕಂಪದಿಂದ ಕೂಡಿದ ತನ್ನ ಪ್ರಜ್ಞೆಯೇ ಇಲ್ಲದ ಶೋಕಕ್ಕೂ, "ಸುಖವಿಲ್ಲದ ಈ ಹಾಳು ಪ್ರಪಂಚದಲ್ಲಿ ಬಂಧುಗಳನ್ನೂ ಕೊಂದು ಸುಖವನ್ನನುಭವಿಸಲು ಯಾರಾದರೂ ಬಯಸುವರೆ?" ಎಂದು ಯೋಚಿಸಿದ ಅರ್ಜುನನ ಶೋಕಕ್ಕೂ, ಗಂಭೀರ ಲಕ್ಷಣದಿಂದ ಕೂಡಿದ ಕಡಲಿನ ಶೋಕಕ್ಕೂ ತುಂಬ ನಿಕಟವಾದ ಸಂಬಂಧ ಉಂಟು. ಆದರೆ ಅವರ ಡಿಂಡಿಮನಾದದಂತೆಯೂ, ಕಂಠ ಸ್ವರದಂತೆಯೂ ಕಿರಿದಾಗಿರದೆ, ಅಳಿವಿಲ್ಲದೆ, ಆಕಾಶದವರೆಗೂ ವ್ಯಾಪಿಸಿ, ಅನೇಕ ಸಹಸ್ರ ಶಿರಸ್ಸುಗಳನ್ನುಳ್ಳದುದಾಗಿ, ಎಲ್ಲ ದಿಕ್ಕುಗಳಲ್ಲಿಯೂ ಹರಡಿ ಪರಮಾತ್ಮನ ಪ್ರತೀಕದಂತೆ ನಿಲ್ಲುವ ಹಿಮಾಲಯ ಪರ್ವತವು ಇದ್ದಕ್ಕಿದ್ದಂತೆ ಒಂದು ದಿನ ತನ್ನ ಮೌನ ಪ್ರಸಂಗವನ್ನು ನಿಲ್ಲಿಸಿ ಬಾಯಿ ತೆಗೆದು ಮಾತಾಡಿದರೆ ಹೇಗೊ ಹಾಗೆ ದೊಡ್ಡ ಗಂಭೀರವಾದ ಅರ್ಥಗರ್ಭಿತವಾದ ವೇದರಹಸ್ಯ ತತ್ವಾರ್ಥವನ್ನು ಹೇಳಲು ತಕ್ಕುದಾದ ಸ್ವರದಿಂದ ಸಮುದ್ರವು ನಮ್ಮೊಡನೆ ಎಡೆಬಿಡದೆ ಪ್ರವಚನ ಮಾಡುತ್ತಿದೆ.

ಶ್ರೀನಿವಾಸನೂ ಲಕ್ಷ್ಮಿಯೂ ಕಿವಿಗೊಟ್ಟು ಗಮನಿಸಿದ ಕೂಡಲೆ ಅವರ ಸ್ವಾಭಾವಿಕ ಗುಣದಿಂದಲೂ, ಅವರು ಆಗ ಪಡೆದಿದ್ದ ಶಾಂತವಾದ ಪರಿಸ್ಥಿತಿಯಿಂದಲೂ ಆ ಸಮುದ್ರಘೋಷದ ರಹಸ್ಯಾರ್ಥವು ಅವರಿಬ್ಬರಿಗೂ ಏಕಕಾಲದಲ್ಲಿ ಧ್ವನಿಸಿತು. ಹೀಗೆ ಧ್ವನಿಸಿದ ಕೂಡಲೆ ಅವರು, "ದೇವರ ಮಹಿಮೆಯೇ

ನುಹಿಮೆ! ಆಹಾ!" ಎಂದು ಬಾಯಿಬಿಟ್ಟು ಹೇಳಲಾಗದವರಾಗಿ ಹೇಳಿ, ಆನಂದಿ ಸಿದರು. ಆಗ ಲಕ್ಷ್ಮಿ, "ಏನು ಗಾಂಭೀರ್ಯ! ಏನು ವಿಸ್ತೀರ್ಣ! ಅದರಲ್ಲಿ ಎಷ್ಟು ಕೋಟಿ ಜೀವಜಂತುಗಳಿವೆ! ಅದೇ ಒಂದು ಪ್ರತ್ಯೇಕ ಪ್ರಪಂಚ, ಅದು ರಾತ್ರಿಯೂ ಸಹ ನಿದ್ರಿಸಲಾರದೇ!" ಎನ್ನಲು ಶ್ರೀನಿವಾಸನು, ದೇವರಿಗೆ ನಿದ್ದೆ ಉಂಟೇ! ಇದೂ ಅವನಂತೆಯೇ [ವಾಯಿ ಬಂದು ಗಾಳಿ ಯಿಂದ ಅಲೆಗಳನ್ನು] ಸೃಷ್ಟಿ ಮಾಡುತ್ತಲೂ, ಸಂಹಾರ ಮಾಡುತ್ತಲೂ ಇದೆ. ನಾವು ಕೊನೆಯಲ್ಲಿ ಈಶ್ವರನನ್ನು ಹೋಗಿ ಸೇರುವಂತೆ ಅಲೆಗಳೂ ಸಮುದ್ರದಲ್ಲಿ ಸೇರಿಹೋಗುತ್ತವೆ" ಎಂದು ಅದ್ವೈತ ವೇದಾಂತವನ್ನು ಮಾತಾಡಿ, ಅನಂತರ ಅವನು, "ಇನ್ನೊಂದು ಆಶ್ಚರ್ಯವನ್ನು ನೋಡು! ಈ ಅಲೆಗಳು ಹುಟ್ಟುವುದೂ, ನೆಗೆಯುವುದೂ, ನಗುವುದೂ, ಓಡುವುದೂ, ಒಂದಕ್ಕೊಂದು ಹೊಡೆಯುವುದೂ, ತಿವಿಯುವುದೂ, ಮೇಲೆ ಬೀಳುವುದೂ, ಲೀನವಾಗುವುದೂ — ಇದೇ ಇವುಗಳ ಕಸಬಾಗಿದೆ. ಇವುಗಳ ವೀಣಾರವ ದಿಂದ ಬೆಳೆಯುವ ಕೊನೆಯ ಧ್ವನಿ ಇವುಗಳ ನಗು ಮತ್ತು ಆಟಕ್ಕೆ ತೀರ ವಿರೋಧವಾಗಿ, 'ಅಯ್ಯೋ! ಏತಕ್ಕೆ ಹೀಗೆ ವ್ಯರ್ಥವಾಗಿ ಅರಚಿಕೊಂಡು ಕೆಟ್ಟುಹೋಗುತ್ತೀರಿ.' ಎಂದು ಹೇಳುವಂತೆ ಶೋಕ ಧ್ವನಿಯಿಂದ ಕೂಡಿದು ದಾಗಿದೆ. ಹೀಗೆಯೇ ಪ್ರಪಂಚದ ಬಾಳೂ ಆಗಿದೆ." ಎಂದನು.

ಲಕ್ಷ್ಮಿ: "ಹೀಗೆಯೇ ಮನುಷ್ಯನೂ ಹುಟ್ಟಿ, ನಲಿದು, ಅತ್ತು, ಜಗಳ ವಾಡಿ, ಆಡಿ, ಹಾಡಿ, ಕೊನೆಯಲ್ಲಿ ಒರಗುತ್ತಾನೆ. 'ಇಲ್ಲಿ ಒಬ್ಬ ಆಳು ಇದ್ದನಲ್ಲ—ಏನಯ್ಯಾ ಉಳಿಯಿತು?' ಎಂದರೆ ಒಂದು ಹಿಡಿ ಬೂದಿ ಮಾತ್ರ. ಅದನ್ನೂ ಗಾಳಿ ಒಂದು ಉಸಿರಿನಲ್ಲಿ ಚೆದರಿಸಿ ಬಿಡುವುದು. 'ಏಕಯ್ಯಾ ವೃಥಾ ವ್ಯಾಜ್ಯ? ನಿನಗೇನು ಉಳಿದು ಹೋಗುತ್ತದೆ? ಆವರೊಬ್ಬರೆ ಇರುವುದು! ಹೋಗಿ ಆವರನ್ನು ಹುಡುಕು' ಎಂದು ಈ ಸಮುದ್ರ ನಮಗೆ ಹೇಳುವಂತಿದೆ" ಎಂದು ಹೇಳಲು ಇಬ್ಬರೂ ಸ್ವಲ್ಪ ಹೊತ್ತು ಮೌನವನ್ನು ತಾಳಿದರು.

ಶ್ರೀನಿವಾಸನ್:- "ಏನು ದೊಡ್ಡ ವೇದಾಂತಿಯಾಗಿ ಬಿಟ್ಟೆಯಲ್ಲ !" —ಎಂದು ಅವಳನ್ನು ತಟ್ಟಲು, ತನ್ನನ್ನು ತಟ್ಟಿದ ಕೈಗೆ ಅವಳು ಒಂದು ಮುತ್ತನ್ನು ಕೊಟ್ಟಳು. ಹೀಗೆ ಆಟವಾಡಿಕೊಂಡು ಇವರು ಮನೆಗೆ ಬಂದು

ಸೇರಿದರು. ಇವರು ಹೋಗಿ ಸೇರಿದ ತತ್‌ಕ್ಷಣವೆ, ಅಂಚೆಯವನ ಮುತ್ತುಸ್ವಾಮಿ ಅಯ್ಯರ್ ಹೆಸರಿಗೆ ಒಂದು ಅವಸರವಾದ ತಾರನ್ನು ತೆಗೆದುಕೊಂಡು ಬಂದನು. ಮುತ್ತುಸ್ವಾಮಿ ಅಯ್ಯರ್ ಎಲ್ಲಿಯೋ ಆಚೆ ಹೋಗಿದ್ದರು. ತಾರಾದರೋ ಅವಸರವಾದುದು. ಶಿರುಕುಳದಿಂದ ಬಂದಿತ್ತು ಕಮಲಾಂಬಾಳ್, "ಏನೋ –ಎಂತೋ! ನೀವು ಒಡೆದು ನೋಡಿ!" ಎಂದು ಅಳಿಯನನ್ನು ನೋಡಿ ಹೇಳಿದಳು. ಅದನ್ನು ಬಿಚ್ಚಿ ನೋಡುವವರೆಗೂ ಯಾರಿಗೂ ಸಮಾಧಾನವಿರಲಿಲ್ಲ. ಶ್ರೀನಿವಾಸನು 'ಅದು ಎಂತಹ ಸಮಾ ಚಾರವೋ—ನಾವು ಒಡೆದು ನೋಡಬಹುದೊ, ಬಾರದೊ', ಎಂದು ಬಹಳ ಹೊತ್ತು ಆಲೋಚಿಸಿದನು. ಮನೆಗೆ ತಾರು ಬಂತೆಂದರೆ, ಆಮೇಲೆ ಮಾಡೋ ದೇನು? ಶ್ರೀನಿವಾಸನು ಕೊನೆಗೆ ಅದನ್ನು ಒಡೆದು ನೋಡುವ ಸಾಹಸ ಮಾಡಿದನು.

## ೨೨. ದುರ್ಮರಣವೂ ಸಹೋದರಶೋಕವೂ

ಬಂದ ತಾರನ್ನು ಒಡೆದು ನೋಡುವವರೆಗೂ ಅವರವರ ಪ್ರಾಣ ಅವರ ವರ ವಶದಲ್ಲಿರಲಿಲ್ಲ. ಅದನ್ನು ಒಡೆಯುತ್ತಿರುವಾಗಲೆ ಮುತ್ತುಸ್ವಾಮಿ ಅಯ್ಯರ್ ಬಂದು ಬಿಟ್ಟರು. ಆ ತಾರಿನಲ್ಲಿ, "ತಮ್ಮ ಸುಬ್ರಹ್ಮಣ್ಯ ಅಯ್ಯರಿಗೆ ಅಪಾಯ: ಅಸೌಖ್ಯ. ಕೂಡಲೆ ಬರುವುದು" ಎಂದು ಬರೆದಿತ್ತು. ಸಿಡಿಲು ಬಿದ್ದಂತಾಯಿತು ಆ ಸಮಾಚಾರವನ್ನು ನೋಡಿ. ಮುತ್ತುಸ್ವಾಮಿ ಅಯ್ಯರ್ "ಅಯ್ಯಯ್ಯೋ! ಇರುವವನು ಅವನೊಬ್ಬ. ಅವನೂ ಹೋಗಿಬಿಡಬೇಕೆ?" ಎಂದು ಅತ್ತರು. ಅವರಿಗೆ ಸುಬ್ರಹ್ಮಣ್ಯ ಅಯ್ಯರ್ ಒಬ್ಬರೇ ತಮ್ಮ. ಒಬ್ಬರ ಮೇಲೊಬ್ಬರು ಬಹುಕಾಲ ಪ್ರೀತಿಯಿಂದ ಬಾಳಿದ್ದರು. ಕೊನೆಯ ಕಾಲದಲ್ಲಿ ಕಲಹಕಾರಿಯಾದ ಪೊನ್ನಮ್ಮಾಳ್ ಮಿತ್ರಭೇದ ಮಾಡಿದ್ದರೂ ಶಿರುಕುಳವನ್ನು ಬಿಟ್ಟು ಮದರಾಸಿಗೆ ರೈಲು ಹತ್ತುವಾಗಲೆ ಅದೆಲ್ಲವೂ ಮುತ್ತುಸ್ವಾಮಿ ಅಯ್ಯರಿಗೆ ಮರೆತು ಹೋಯಿತು. "ಅವನು ಏನು ಮಾಡಿ ಯಾನು, ಪಾಪ! ಆ ರಾಕ್ಷಸಿಯ ಕೈಯಲ್ಲಿ ಸಿಕ್ಕಿಕೊಂಡು ಹಾವಿನ ಬಾಯಲ್ಲಿ

ಸಿಕ್ಕಿಬಿದ್ದ ಕಪ್ಪೆಯಂತೆ ಪೇಚಾಡುತ್ತಿದ್ದಾನೆ. ಅವನ ಮೇಲೆ ಕೋಪಿಸಿ ಕೊಳ್ಳುವುದರಲ್ಲಿ ಪ್ರಯೋಜನವೇನು?" ಎಂದು ಅವರ ಭಾವನೆ. ತಾರು ಬಂದ ಆ ಸಂಜೆಯೇ ಮುತ್ತುಸ್ವಾಮಿ ಅಯ್ಯರ್ ತನ್ನ ತಮ್ಮನಿಗಾಗಿ ಒಂದು ಸೊಗಸಾದ ಬೆಲೆ ಬಾಳುವ ಕಾಶಿ ಪಟ್ಟನ್ನೂ, ಶಾರದಾ ಚಕ್ರವೊಂದನ್ನೂ ಇನ್ನೂ ಕೆಲವು ಚಿಲ್ಲರೆ ಸಾಮಾನುಗಳನ್ನು ಕೊಂಡು ತಂದಿದ್ದರು. ತಾರಿನ ಸಮಾಚಾರ ಕಿವಿಯಲ್ಲಿ ಬಿದ್ದ ಕೂಡಲೆ ಅವರು ಅವುಗಳನ್ನು ಬೀಸಿ ಎಸೆದು ಬಿಟ್ಟು, "ಅಯ್ಯೋ ! ನನ್ನನ್ನು ಹೀಗೆಲ್ಲ ಪರೀಕ್ಷಿಸಬೇಕೇ—ದೈವವೆ?" ಎಂದು ಬಹಳವಾಗಿ ದುಃಖಿಸಿದರು. ಕಮಲಾಂಬಾಳ್ ಮೊದಲಾದವರು ಅವರನ್ನು, "ದೇಹಸ್ಥಿತಿ ಅನುಕೂಲವಿಲ್ಲವೆಂದು ಮಾತ್ರ ತಾನೆ ಬರೆದಿದೆ?– ಅಮಂಗಳ ವಾಗಿ ಅಳಬೇಡಿ. ದೇವರು ನಮ್ಮನ್ನು ಇಷ್ಟು ಪರೀಕ್ಷಿಸಿದುದು ಸಾಲದೆ? ಏನೂ ಆಗಲಾರದು. ದುಃಖ ಪಡಬೇಡಿ." ಎಂದು ಸಮಾಧಾನ ಹೇಳುತ್ತ ಹೇಳುತ್ತ, ಅವರ ದುಃಖ ಹೆಚ್ಚುತ್ತಿತ್ತು. ಅನಂತರ ಅವರಾಗಿ ಬಳಲಿ ಮನಮುಟ್ಟಿ ದೇವರನ್ನು ಪ್ರಾರ್ಥಿಸಿಕೊಂಡು, "ಇದೇನು ದುಃಖ, ಅವಲ ಕ್ಷಣ" ಎಂದು ತಮ್ಮನ್ನು ತಾವೇ ಸಮಾಧಾನ ಮಾಡಿಕೊಂಡರು.

ಶಿರುಕುಳದಲ್ಲಿ ಒಂದು ದಿನ ಅರ್ಧ ರಾತ್ರಿಗೆ ಮೇಲೆ ಆಗಿತ್ತು. ಊರ ಲ್ಲೆಲ್ಲ ದೀಪಗಳನ್ನು ಆರಿಸಿ ಎಲ್ಲರೂ ನಿದ್ರಿಸುತ್ತಿದ್ದಾರೆ. ಅಮಾವಾಸ್ಯೆಯ ಕತ್ತಲು. ಊರಲ್ಲೆಲ್ಲ ಭಯಂಕರವಾದ ನಿಶ್ಶಬ್ದತೆ ತುಂಬಿತ್ತು. ಆಕಾಶ ದಲ್ಲಿ ಮೇಘಗಳು ದಟ್ಟವಾಗಿ ಕವಿದು ಗುಹೆಗಳಂತೆ ಅಲ್ಲಲ್ಲಿ ಬಾಯಿ ಬಿಟ್ಟು ಕೊಂಡು ಭಯಂಕರವಾಗಿಯೂ ವಿಕಾರವಾಗಿಯೂ ಇದ್ದುವು. ಮರಗಳೆ ಲ್ಲವೂ ಅಂಧಕಾರದಲ್ಲಿ ಮೌನವನ್ನು ತಾಳಿದ್ದುವು. ಸುಬ್ರಹ್ಮಣ್ಯ ಅಯ್ಯರ ಮನೆಯಲ್ಲಿ ಮಾತ್ರ ಪಡಸಾಲೆಯಲ್ಲಿ ಒಂದು ದೀಪ ಬೆಳಗುತ್ತಿದೆ. ಅದರ ಪಕ್ಕದಲ್ಲಿ ಸುಬ್ರಹ್ಮಣ್ಯ ಅಯ್ಯರ್ ಮಲಗಿಕೊಂಡಿದ್ದಾರೆ. ಅವರ ಕತ್ತಿನ ಮೇಲೆ ತಲೆ ನಿಲ್ಲುತ್ತಿರಲಿಲ್ಲ, ಹಾಸಿಗೆಯ ಮೇಲೆ ದೇಹ ನಿಲ್ಲುತ್ತಿರಲಿಲ್ಲ. ಮಾತಿಲ್ಲ. ತಲೆಯನ್ನು ಎಡೆಬಿಡದೆ ಒಂದು ಕಡೆಯಿಂದ ಮತ್ತೊಂದು ಕಡೆಗೆ ಅಲ್ಲಾಡಿಸುತ್ತ—ಕಣ್ಣುಗಳನ್ನು ಬಿಟ್ಟುಕೊಂಡು ನೋಡುತ್ತಲೂ, ಬಾಯಿ ಒದರುತ್ತಲೂ, ಗೊಣಗುತ್ತಲೂ, ಹುಚ್ಚು ಹುಚ್ಚಾಗಿ ಮಾತಾಡು

ತ್ರ್ತಲೂ, ಅವರು ಪಡಬಾರದ ಪಾಡನ್ನು ಪಡುತ್ತಿದ್ದರು. ಪಕ್ಕದಲ್ಲಿ ಪೊನ್ನಮ್ಮಾಳ್ ಮಾತ್ರ ಕುಳಿತಿದ್ದಾಳೆ. ಉಳಿದವರೆಲ್ಲರೂ ಗಾಢ ನಿದ್ರೆ ಮಾಡುತ್ತಿದ್ದರು.

ಅವರ ಪಕ್ಕದಲ್ಲಿ ಕುಳಿತಿದ್ದ ಪೊನ್ನಮ್ಮಾಳನ್ನು ಕೈಹಿಡಿದುಕೊಂಡು ಬಹಳ ಶ್ರಮದಿಂದ "ಪಾಪಿ! ಎಲೆ ಪಾಪಿ! ಸಂಸಾರವನ್ನು ಕೆಡಿಸಿದೆಯಲ್ಲೆ, ರಾಕ್ಷಸೀ! ಮೋಸ ಮಾಡಿದೆಯಲ್ಲೇ! ರಾಕ್ಷಸೀ! ಚಂಡಾಲಿ! ದ್ರೋಹಿ! ಕೊಂದು ಹಾಕಿದೆಯೆ! ಇದಕ್ಕಾಗಿಯೇ ನಾನು ನಿನಗೆ ತಾಳಿಯನ್ನು ಕಟ್ಟಿದೆನೆ? ಎಷ್ಟು ಮದ್ದು ಉಂಡೆಯಾಗಿ ಬಿದ್ದಿತು! ಮೈಯೆಲ್ಲಾ ಗಾಣದಲ್ಲಿ ಹಾಕಿ ತಿರುವಿದಂತೆ ನೋಯುತ್ತದೆಯಲ್ಲಾ! ಪಾಪಿ! ಸುಂದರನಿಗೆ ಮದುವೆ ಮಾಡಬೇಕು. ಹೆಣ್ಣುಗಳಿಗೆ ಶಾಂತಿಮುಹೂರ್ತವಾಗಬೇಕು. ಆಯ್ಯೋ! ಪ್ರಾಣ ಹೋಗುತ್ತಿದೆಯಲ್ಲಾ! ಮಾತಾಡಲು ಆಗುವುದಿಲ್ಲವಲ್ಲಾ" ಎಂದು ಅಳುತ್ತ ಹೇಳಿ, ಸ್ವಲ್ಪ ಹೊತ್ತು ಸುಮ್ಮನಿದ್ದು, ಅನಂತರ ಮತ್ತೆ ಪೊನ್ನಮ್ಮಾಳ ಎರಡು ಕೈಗಳನ್ನೂ ಗಟ್ಟಿಯಾಗಿ ಹಿಡಿದುಕೊಂಡು ತಠಾರನೆ ಎದ್ದು, ಹೆಣ ಕೈಕಾಲು ಚಾಚಿಕೊಂಡಿರುವಂತೆ ಚಾಚಿಕೊಂಡು ಕುಳಿತುಕೊಂಡರು. ಕಣ್ಣುಗಳ ಗುಡ್ಡು ಹೊರಬಂದಂತೆ ಇತ್ತು. ತಲೆ ಕೂದಲು ಬಿಚ್ಚಿಹೋಗಿ ಅಸ್ತವ್ಯಸ್ತವಾಗಿತ್ತು. ಹಲ್ಲನ್ನು ಕಟಕಟನೇ ಕಡಿಯುತ್ತಾರೆ. ಮುಖದಲ್ಲಿ ಘೋರವಾದ ಯಾತನೆಯನ್ನು ತೋರಿಸುತ್ತಾರೆ. ಪೊನ್ನಮ್ಮಾಳನ್ನು ಕೊಂದು ಹಾಕುವವರಂತೆ ನೋಡುತ್ತಾರೆ. ಸಮಯವೂ ಅರ್ಧರಾತ್ರಿ. ಅವಳಾದರೋ ಒಬ್ಬಂಟಿಗಳಾಗಿದ್ದಾಳೆ. ಸುಬ್ರಹ್ಮಣ್ಯ ಅಯ್ಯರ್ ಈ ರೀತಿಯಲ್ಲಿ ಹಠಾತ್ತನೆ ಎದ್ದು ಕುಳಿತುಕೊಂಡು, "ದ್ರೋಹೀ, ಚಂಡಾಳೀ, ಕೊಲೆ ಪಾತಕೀ" ಎಂದು ಹಲ್ಲನ್ನು ಕಡಿದುಕೊಂಡು ಗಟ್ಟಿಯಾಗಿ ಒದರಿ ಕೊಳ್ಳುತ್ತ ತನ್ನ ಕೈಯಿಂದ ಅವಳ ಮುಖದ ಮೇಲೆ ಬಹಳ ಬಲವಾಗಿ ಗುದ್ದಿದರು. ಅವರ ಮುಖ ಆ ಸಮಯದಲ್ಲಿ ಬಹು ಘೋರವಾಗಿಯೂ, ಭಯಂಕರವಾಗಿಯೂ ಇತ್ತು. ಪೊನ್ನಮ್ಮಾಳಿಗೆ ದೇಹವೆಲ್ಲವೂ ಗಡಗಡನೆ ನಡುಗಿತು. ಏನೋ ಹೇಳಲು ಬಾಯಿ ತೆಗೆದ ಸುಬ್ರಹ್ಮಣ್ಯ ಅಯ್ಯರ್ ಹೇಳಲಾಗದೆ ಮುಖವನ್ನು ವಕ್ರ ಮಾಡಿಕೊಂಡು ತಟಕ್ಕನೆ ಕೆಳಕ್ಕೆ ಬಿದ್ದರು. ಪೊನ್ನಮ್ಮಾಳಾದರೋ ಭಯ

ಂದ ಚಿತ್ತ ಸ್ವಾಧೀನವಿಲ್ಲದೆ ಕೂಗಿ ಕೊಂಡಳು. ತಾನು ಹಿಂದೆ ಮದ್ದು ೂಟ್ಟುದೇ ಇಷ್ಟಕ್ಕೆಲ್ಲ ಕಾರಣವೆಂದು ತಿಳಿದಳು. ಗಂಡನು ಇನ್ನು ಬದು ಲಾರನೆಂದು ಅವಳು ಚೆನ್ನಾಗಿ ಅರಿತಳು. ವಿಧವೆಯ ಮುಸುಕು ಅವಳ ಲೆಯ ಮೇಲೆ ಬಂದುದಾಗಿ ಅವಳಿಗೆ ತೋರಿತು. ಸುಬ್ರಹ್ಮಣ್ಯ ಅಯ್ಯರ್ ದ್ದು ಕುಳಿತುಕೊಂಡು ಅವಳ ಮುಖವನ್ನು ಗುದ್ದಿದುದು ಅವಳ ಮನ ನಲ್ಲಿ ಸಾಯುವವರೆಗೂ ಮರೆಯದಂತೆ ಆಳವಾಗಿ ನಿಂತಿತು. ತಾನು ತನ್ನ ಂಡನನ್ನು ವಶ ಮಾಡಿಕೊಳ್ಳಬೇಕೆಂದು ಕೊಟ್ಟ ಮದ್ದು ತನಗೆ ವಿಷವಾಗಿ ರಿಣಮಿಸಿದುದನ್ನು ಕುರಿತು ಮರುಗಿದಳು.

ಅಯ್ಯೋ ಪಾಪ! ಎಷ್ಟು ಸ್ತ್ರೀಯರು ತಮ್ಮ ಪತಿಗಳನ್ನು ವಶಮಾಡಿ ೂಳ್ಳಬೇಕೆಂಬ ದುರಾಸೆಯಿಂದ ಮದ್ದನ್ನು ಕೊಟ್ಟು ಕೊಂದಿದ್ದಾರೆ! ಎಷ್ಟು ಂಡಸರು ಈ ವಿಷದ ಮದ್ದಿನಿಂದ ಹುಚ್ಚು ಹಿಡಿದು ಅಲೆದಿದ್ದಾರೆ! 'ಬಾವಿ ಗೆಯಲು ಭೂತ ಹೊರಟಿತು' ಎಂಬಂತೆ ತಾವು ಒಂದೆಣಿಸಿ ಮದ್ದನ್ನು ೂಡುವುದು—ಅದು ಬೇರೊಂದನ್ನು ತಂದೊಡ್ಡುವುದು! ಮುಂದೆ ಬರುವ ೇಡನ್ನು ಎಣಿಸದೆ ಗಂಡನನ್ನು ವಶಮಾಡಿಕೊಳ್ಳಬೇಕೆಂದು ಪ್ರಯತ್ನಿಸುವ ಎಷ್ಟು ಮಹಿಳೆಯರ ಗತಿ ಪೊನ್ನಮ್ಮಾಳ ಗತಿಯಂತೆಯೇ ಆಗುವುದೆನ್ನುವು ಕ್ಕೆ ಅಡ್ಡಿಯೇ ಇಲ್ಲ.

ಕೆಳಗೆ ಬಿದ್ದ ಸುಬ್ರಹ್ಮಣ್ಯ ಅಯ್ಯರ್ ಹಾಗೆಯೇ ಬಿದ್ದು ಮೂರ್ಛಿತ ಾದರು. ಪೊನ್ನಮ್ಮಾಳ್ ಏಕಾಂಗಿಯಾಗಿ ಅಳುತ್ತ ಕುಳಿತಿದ್ದಳು. ಏನು ಾಡಬೇಕೆಂದು ತೋರಲಿಲ್ಲ. ಚಿತ್ತಭ್ರಮೆಯಿಂದ ಬುದ್ಧಿಗೆಟ್ಟಿರುವಳು. ುಬ್ರಹ್ಮಣ್ಯ ಅಯ್ಯರ್ ಎದ್ದು ಕುಳಿತುಕೊಂಡು, ಮುಖದಲ್ಲಿ ಗುದ್ದಿದುದು ವಳ ಜ್ಞಾಪಕದಿಂದ ಮರೆಯಾಗದೆ ಅವಳು ನಿದ್ದೆ ಮಾಡದಂತೆ ಅಡ್ಡಿ ಾಡಿತು. ಬೆಳಗಾಗುವುದಕ್ಕೆ ನಾಲ್ಕು ಘಳಿಗೆ ಇರುವಾಗ ಸುಬ್ರಹ್ಮಣ್ಯ ಯ್ಯರ್ ಎಚ್ಚರಗೊಂಡು ಪೊನ್ನಮ್ಮಾಳನ್ನು ನೋಡಿ: "ನಿನ್ನನ್ನು ನಾನು ್ರೀಯೆಂದು ಎಣಿಸಿದ್ದೆ. ನೀನು ನನಗೆ ಯಮ ಆದೆಯಲ್ಲೇ! ಯಮ ಆದೆ! ೀನು ನನಗೆ ಕೊಟ್ಟ ಸುಖಕ್ಕೆ ಈಗ ಬಡ್ಡಿ ಆಸಲು ಸಹಿತ ನನ್ನ ಪ್ರಾಣ ನ್ನೇ ಕಸಿದುಕೊಂಡೆ. [ಹಲ್ಲನ್ನು ಕಡಿಯುತ್ತ] ಆ ಪಾಪಕ್ಕೆ ನೀನು

ಹೋಗು ! ಈ ಜನ್ಮದೊಂದಿಗೆ ನಮ್ಮಿಬ್ಬರ ಋಣಾನುಬಂಧ ತೀರಿತು ! ನನ
ಅಣ್ಣನಿಗೂ ನನಗೂ ಆಗದಂತೆ ಮಾಡಿದೆಯಲ್ಲಾ ! ಅಯ್ಯೋ ! ಅವನನ್ನ
ನೋಡಬೇಕಲ್ಲ ! ಅಣ್ಣನನ್ನು ನೋಡಬೇಕೆ ? ನನ್ನ ಅಣ್ಣನನ್ನು ನೋ
ಬೇಕೆ ! ಅವನಿಗೆ ತಾರನ್ನಾದರೂ ಕೊಟ್ಟು ಬರಮಾಡಿಕೊಳ್ಳಬೇಕೆ !" ಎಂದ
ಹೇಳಿದರು. ಇಷ್ಟರಲ್ಲಿ ಅವರ ದೇಹಸ್ಥಿತಿಯನ್ನು ಕುರಿತು ವಿಚಾರಿ
ತತ್‌ಕ್ಷಣವೇ ಮದರಾಸಿಗೆ ಒಂದು ತಾರನ್ನು ಕಳುಹಿಸಿದರು.

ಸುಬ್ರಹ್ಮಣ್ಯ ಅಯ್ಯರ್, "ಅಣ್ಣನವರು ಯಾವಾಗ ಬರುತ್ತಾರೆ ?
ಎಂದು ಗಂಟೆಗೊಂದು ಸಲ ಕೇಳುತ್ತಿದ್ದರು. ಮರುದಿನ ಅವರಿಗೆ ದೇಹದ
ಬಾಧೆ ಹೆಚ್ಚಾಯಿತು. ಹೊಟ್ಟೆನೋವೂ, ಕೈಕಾಲು ಕಡಿತವೂ ಅವರು ಸಹಿ
ಲಾಗದಂತೆ ಅವರಿಗೆ ಹಿಂಸೆ ಕೊಟ್ಟಿತು. ಅವರು ಹಾಸಿಗೆಯಲ್ಲಿ ಹೊರಳಾಡುತ
ಯಾತನೆ ಪಡುತ್ತಿದ್ದಾರೆ. ಊರಿನವರೆಲ್ಲ ಸೇರಿದ್ದಾರೆ. ಕೆಲವರು ಕಾಲನ್ನ
ಒತ್ತುತ್ತಿದ್ದಾರೆ; ಕೆಲವರು ಮದ್ದನ್ನು ಸಿದ್ಧಮಾಡುತ್ತಿದ್ದಾರೆ; ಕೆಲವರ
ಬೀಸಣಿಗೆಯಿಂದ ಗಾಳಿ ಹಾಕುತ್ತಿದ್ದಾರೆ; ಕೆಲವರು ಅಳುತ್ತಿದ್ದಾರೆ; ಕೆಲವರ
ಪ್ರಲಾಪಿಸುತ್ತಿದ್ದಾರೆ; ಕೆಲವರು ಪೊನ್ನಮ್ಮಾಳೊಡನೆ ಅನುತಾಪ ಪಡುತ್ತಿ
ದ್ದಾರೆ. ಗ್ರಾಮಗಳಲ್ಲಿ ಈ ವಿಧ ಜನಗಳೆಲ್ಲರೂ ಒಬ್ಬರೊಂದಿಗೊಬ್ಬರ
ಸ್ಪರ್ಧಿಸಿ ಸಮಯಕ್ಕೆ ಸರಿಯಾಗಿ ನೆರವಾಗುವುದನ್ನು ಎಲ್ಲರೂ ನೋಡಿ
ಬಹುದು. ಒಂದೇ ಮನೆಯಲ್ಲಿಯೇ ಸಂಸಾರವಿರುವ ಎರಡು ಕುಟುಂಬಗಳಲ್ಲಿ
ಒಂದು ಕುಟುಂಬದಲ್ಲಿ ಯಾರಾದರೂ ಸತ್ತುಹೋದರೆ ಇಲ್ಲಿ ಅಳಬಾರದೆಂದ
ಮತ್ತೊಂದು ಕುಟುಂಬದವರೂ, ಮನೆಯಾತನೂ ಸೇರಿ ಹೇಳುವ ನಾಗರಿ
ಪಟ್ಟಣವಾಸದ ಪದ್ಧತಿ ಗ್ರಾಮವಾಸಿಗಳಿಗೆ ಗೊತ್ತಿಲ್ಲ.

ಸುಬ್ರಹ್ಮಣ್ಯ ಅಯ್ಯರಿಗೆ ಬರಬರುತ್ತ ಉಪದ್ರವ ಹೆಚ್ಚಾಯಿತು
"ಅಣ್ಣ ಬಂದರೆ ?" ಎಂದು ಪ್ರತಿ ನಿಮಿಷವೂ ಕೇಳುತ್ತಾರೆ. ಮುತ್ತುಸ್ವಾಮಿ
ಅಯ್ಯರ ಬರುವಿಕೆಗಾಗಿ ರೈಲಿನಿಂದ ಊರಿನವರೆಗೂ ಟಪಾಲ್ ಎತ್ತುಗಳ
ತಯಾರಾಗಿ ಇಡಲ್ಪಟ್ಟುವು. ಇನ್ನು ಬದುಕುವುದು ದುರ್ಲಭವೆಂದ
ಎಲ್ಲರಿಗೂ ಸ್ಪಷ್ಟವಾಯಿತು. ಮುತ್ತುಸ್ವಾಮಿ ಅಯ್ಯರ್ ಬಂದು ಸೇರಬೇಕಲ್ಲ
ಎಂದು ಎಲ್ಲರೂ ದಾರಿ ನೋಡುತ್ತಿದ್ದಾರೆ. ಸುಬ್ರಹ್ಮಣ್ಯ ಅಯ್ಯರಿಗೆ ಮಾತ

ತಲು ಸಹ ತ್ರಾಣವಿಲ್ಲ. ತುಂಬ ವ್ಯಥೆಪಡುತ್ತಿದ್ದಾರೆ. 'ಅಣ್ಣ ಬಂದರೆ ?' ಎಂದು ಕೇಳಲು ತಲೆಯನ್ನು ಎತ್ತುತ್ತಾರೆ. ಸುತ್ತುಮುತ್ತಲಿರುವವರು ಏನು ಹೇಳುವರು ? — 'ಬರುವ ವೇಳೆಯಾಯಿತು. ಶೀಘ್ರವೇ ಬಂದುಬಿಡು ವರು. ಲಾಂದ್ರವನ್ನು ಕಳುಹಿಸಲಾಗಿದೆ. ಇಗೋ ಬಂದುಬಿಡುವರು'— ಎಂದು ಧೈರ್ಯ ಹೇಳುತ್ತಿದ್ದಾರೆ. ಎತ್ತಿದ ತಲೆಯನ್ನು ಅವರು ಕೆಳಗಿಟ್ಟು ಕಳುತ್ತಿದ್ದಾರೆ. ಮತ್ತು ತಲೆ ಎತ್ತುತ್ತಾರೆ. ಮತ್ತೆ ಕೆಳಗೆ ಹಾಕುತ್ತಾರೆ.

ಈ ಸ್ಥಿತಿಯಲ್ಲಿರುವಾಗಲೆ ಮುತ್ತುಸ್ವಾಮಿ ಅಯ್ಯರ್ ಬಂದರೆಂಬ ಸಮಾಚಾರ ಗೊತ್ತಾಯಿತು. ಊರಿಗೆ ನಾಲ್ಕು ಮೈಲಿಗೆ ಆಚೆ ಅವರು ಇರುವಾಗಲೆ, ಅವರು ಬರುತ್ತಿರುವ ಸುದ್ದಿ ಇಲ್ಲಿಗೆ ತಲುಪಿತ್ತು. ಮುತ್ತುಸ್ವಾಮಿ ಅಯ್ಯರ್, 'ಒಂದುಕ್ಷಣದಲ್ಲಿ ಹೋಗಬೇಕು, ಬೇಗ ಓಡಿಸು' ಎಂದು ಈ ಬಗೆಯಲ್ಲಿ ಬಂಡಿಯುವನಿಗೆ ಪ್ರತಿ ನಿಮಿಷವೂ ತಾಕೀದು ಮಾಡು ತ್ತಿದ್ದರು. ಊರಿಗೆ ಒಂದು ಮೈಲಿ ಇರುವಾಗಲೆ ಬಂಡಿಯಿಂದಿಳಿದು ಟಪಾಲ್ ಎತ್ತುಗಳಿಗಿಂತಲೂ ವೇಗವಾಗಿ ಓಡಿಬಂದರು. ಇಗೋ ಬಂದುಬಿಟ್ಟರು - ಅಗೋ ಬಂದುಬಿಟ್ಟರು - ಎಂದು ಊರಲ್ಲೆಲ್ಲಾ ಸುದ್ದಿ ಹರಡಿತು. ಸಂತೆ ಪೇಟೆಗೆ ಬಂದುಬಿಟ್ಟರು – ಎರಡು ನಿಮಿಷವಾಯಿತು. – ಸಂತೆಯ ಮಾಳಕ್ಕೆ ಬಂದರು – ಒಂದೇ ನಿಮಿಷ ಇನ್ನು – ಮನೆಗೆ ಬಂದರು. ಬಂದುದೇ ತಡ, ಸುಬ್ರಹ್ಮಣ್ಯ ಅಯ್ಯರ್ ಬಳಿ ಅಬ್ಬರಿಸುತ್ತ ಹೋಗಿ,"ಅಪ್ಪಾ! ಸುಬ್ರಹ್ಮಣ್ಯಂ" ಎಂದು ಹೇಳುತ್ತ ಅವರನ್ನು ಕೈಯ್ಯಲ್ಲೆತ್ತಿ ತಬ್ಬಿಕೊಂಡರು. ಅದುವರೆಗೂ ಮಾತನಾಡದಿದ್ದ ಅವರು ಅಣ್ಣನನ್ನು ಗಟ್ಟಿಯಾಗಿ ತಬ್ಬಿಕೊಂಡು, "ಅಣ್ಣಾ ! ಬಂದೆಯಾ ? ಅಣ್ಣಾ ! ನಾನು ಸಾಯುತ್ತಿದ್ದೇನೆ. ನಿಮಗೆ ನಾನು ತುಂಬ ದುಷ್ಟನಾದೆ. ಎಲ್ಲವನ್ನೂ ಮರೆತು ಬಿಡಿ ! ಕ್ಷಮಿಸಿ ಅಣ್ಣಾ ! ಮಕ್ಕಳನ್ನು ನೋಡಿಕೊಳ್ಳಿ ! ಇನ್ನು ನನ್ನ ಭಾರ ಇಳಿಯಿತು. ಅಯ್ಯೋ ! ನಿಮ್ಮ ಮುಖವನ್ನು ನೋಡೋಣ, ಅಣ್ಣಾ ! [ಅವರ ಮುಖವನ್ನು ದೃಷ್ಟಿಸಿ ನೋಡಿ] ಅಯ್ಯೋ ! ಆ ಕಡುಪಾಪಿಯ ಮಾತನ್ನು ಕೇಳಿ ನಿನ್ನ ಹಗೆಯನ್ನು ಕಟ್ಟಿಕೊಂಡೆನೆ ? ಅದೆಲ್ಲವನ್ನೂ ಮರೆತುಬಿಡಣ್ಣಾ ! ನಿನ್ನನ್ನು ಬಿಟ್ಟು ನಾನು ಹೋಗುತ್ತೇನಲ್ಲಾ ! ಅಯ್ಯಯ್ಯೋ !" ಎಂದು ಅವರ ಬಳಿ

ಹೇಳಿಕೊಳ್ಳುತ್ತ ದೊಡ್ಡ ದನಿಯಲ್ಲಿ ಅತ್ತರು. ಮುತ್ತುಸ್ವಾಮಿ ಅಯ್ಯರ್ ಅದಕ್ಕೂ ಗಟ್ಟಿಯಾದ ರೋದನವನ್ನು ಮಾಡಿದರು. ಸುತ್ತುಮುತ್ತ ಲಿದ್ದವರೆಲ್ಲರೂ ಅತ್ತರು. ಯಾರಿಗೂ ಸಹಿಸಲು ಸಾಧ್ಯವಾಗಲಿಲ್ಲ.

ಮತ್ತೆ ಸುಬ್ರಹ್ಮಣ್ಯ ಅಯ್ಯರ್ ಮುತ್ತುಸ್ವಾಮಿ ಅಯ್ಯರನ್ನು ನೋ "ಅಯ್ಯೋ! ಅಣ್ಣಾ! ನನಗೆ ಅಪ್ಪ, ಅಮ್ಮ, ಅಣ್ಣ—ಎಲ್ಲವೂ ನೀನೆ ನಿನ್ನನ್ನು ಬಿಟ್ಟು ಹೋಗುತ್ತೇನೆಯೆ! ಹೇಗೆ ಹೋಗಲಿ, ಅಣ್ಣಾ! ಸಹಿ ಲಾರೆಯೇ ಅಣ್ಣಾ! ಒಬ್ಬ ತಮ್ಮ, ನಾನೂ ಹೋದರೆ, 'ಅಂಬಿ' 'ಅಂಬಿ ಎಂದು ಗೋಳಾಡುವೆಯಲ್ಲ! ಅಳಬೇಡ ಅಣ್ಣಾ!" ಎಂದು ಹೇಳಿ ಗೊಳೋ ಎಂದು ಅತ್ತರು. ಮುತ್ತುಸ್ವಾಮಿ ಅಯ್ಯರ್, "ಅಯ್ಯಯ್ಯೋ! ನನ್ನ ಸುಬ್ರಹ್ಮಣ್ಯಾ! ನಿನ್ನನ್ನು ನಾನು ಈ ಸ್ಥಿತಿಯಲ್ಲಿ ನೋಡಬೇಕೆ? ಇದಕ್ಕಾ ಗಿಯೇ ಬಂದನೇ? ಅಪ್ಪಾ! ದೈವವೆ! ಇದು ನಿನಗೆ ಧರ್ಮವೆ? ಅಯ್ಯೋ!" ಎಂದು ಬಾಯಿ ತೆಗೆದು ಗೋಳಿಟ್ಟರು. ಹೀಗೆ ಒಬ್ಬರನ್ನೊಬ್ಬರು ತಬ್ಬಿ ಕೊಂಡು ಅಳುತ್ತಿರಲು ಕಮಲಾಂಬಾಳ್, ಲಕ್ಷ್ಮಿ, ಶ್ರೀನಿವಾಸನ್-ಇನ್ನೂ ಅಲ್ಲಿದ್ದವರೆಲ್ಲರೂ ಮೂಲೆಗೊಬ್ಬರಾಗಿ ನಿಂತುಕೊಂಡು ಅಳುತ್ತಿದ್ದರು ಪೊನ್ನಮ್ಮಾಳ್ ಮಾತ್ರ ಅಳಲಿಲ್ಲ. ಅವಳಿಗೆ ಚಿತ್ತ ಸ್ವಾಧೀನವಿಲ್ಲದವಳಂತೆ ತೋರಿಕೊಂಡಳು. ಎಲ್ಲಿಯೋ ಬಟ್ಟಬಯಲನ್ನು ನೋಡುವಳು. "ಏನು ಕಣ್ಣು ಬಿಡುತ್ತಿದೆಯಮ್ಮ. ಕಣ್ಣನ್ನು ನೋಡು, ಭಯವಾಗಿದೆ. ಹೊಡೆ ಯಲು ಬರುತ್ತದೆಯಮ್ಮಾ" ಎಂದು ತನಗೆ ತಾನೆ ಹೇಳಿಕೊಳ್ಳುತ್ತಾಳೆ. ಯಾರಾದರೂ ಹೋಗಿ ಪೊನ್ನಮ್ಮಾಳನ್ನು "ಪಾಪಿ! ಹೀಗೆ ಆಯಿತಲ್ಲೆ!" ಎಂದು ಹೇಳಿದರೆ ಸ್ವಲ್ಪ ಹೊತ್ತು ಅವರು ಹೇಳುವ ಮಾತು ಅವಳ ಕಿವಿಗೆ ಬೀಳುವುದಿಲ್ಲ. ಅನಂತರ "ಏನು ಹೇಳಿದೆ?—ಏನೋ—ಯಾರು ಯಾರು ಎಷ್ಟು ಎಷ್ಟು ಪೂಜೆ ಮಾಡಿದ್ದಾರೆಯೊ, ಅಷ್ಟೇ ಅಲ್ಲವೆ ಸಿಗೋದು" ಎಂದು ಹೇಳಿ ಅಳುವಳು. ಅವಳು ಯಾವುದೊ ಒಂದು ಬಗೆಯಲ್ಲಿ ಇರುವಳೆಂದು ಮಾತ್ರ ಎಲ್ಲರಿಗೂ ತೋರಿತು. ಆದರೆ ಅದು ಇಂತಹುದೆಂದು ಒಬ್ಬರಿಗೂ ತಿಳಿಯಲಿಲ್ಲ, ಸುಬ್ರಹ್ಮಣ್ಯ ಅಯ್ಯರ್ ಅಳುತ್ತಿದ್ದ ಹಾಗೆಯೆ ಪ್ರಾಣವನ್ನು ಬಿಟ್ಟರು. ಮುತ್ತುಸ್ವಾಮಿ ಅಯ್ಯರ್ ಮೂರ್ಛಿತರಾಗಿ ಬಿದ್ದರು. ಊರೆಲ್ಲ

ಒಂದೇ ಗುಂಪಾಗಿ ರೋದಿಸಿತು. ಮುತ್ತುಸ್ವಾಮಿ ಅಯ್ಯರ್ ಪ್ರಜ್ಞೆ ಬಂದು ಎದ್ದಮೇಲೆ, ಮಾಡಬೇಕಾದ ಕಾರ್ಯಗಳೆಲ್ಲವನ್ನೂ ತಮ್ಮ ವಿಧಿಪ್ರಕಾರ ನಡೆಯಿಸಲಾಯಿತು.

## ೨೩. ದ್ರವ್ಯನಷ್ಟವೂ ಅಗಲಿಕೆಯೂ

ಈ ವಿಧದಲ್ಲಿ ಮುಗಿಯಿತು ಸುಬ್ರಹ್ಮಣ್ಯ ಅಯ್ಯರ್ ಚರಿತ್ರೆ. ಅವರು ಏತಕ್ಕೆ ಹೀಗೆ ಸತ್ತಿರಬೇಕೆಂದು ಕೆಲವರು ಕೇಳಬಹುದು. ಚರಿತ್ರೆಯನ್ನು ನಾವು ನಡೆದಂತೆ ಬರೆಯಬೇಕೇ ಹೊರತು, ಬದಲಾಯಿಸುವುದಕ್ಕೆ ನಮಗೆ ಅಧಿಕಾರ ಎಲ್ಲಿಯದು? ನಮ್ಮ ತೃಪ್ತಿಗಾಗಿ ಈ ಪ್ರಪಂಚ ಸೃಷ್ಟಿಯಾಗಿರುವಂತೆ ಕಾಣುವುದಿಲ್ಲ. ಪ್ರಪಂಚ ನಮ್ಮ ಆಜ್ಞೆಗೆ ಒಳ ಪಡುವುದಾದರೆ ಸಣ್ಣವರು ಸಾಯಲೇಕೆ? ವಿಧವೆಯವರು ಹೆಚ್ಚಾಗಬೇಕೇ? ಮನೆಗಳಲ್ಲಿ ವ್ಯಾಧಿಗಳು ಹೊಕ್ಕು-ಗಿಡಗಳಿಂದ ಹೂ, ಹೀಚು, ಕಾಯಿ, ಹಣ್ಣುಗಳು ಉದುರುವಂತೆ ಜನ ಸಾಯಬೇಕೆ? ಬೆಳೆದು ನಿಂತ ದೊಡ್ಡ ವೃಕ್ಷದಲ್ಲಿ ಎಲೆಗಳೊಂದಿಗೆ ಎಲೆಯಾಗಿ ಹೊಂದಿಕೊಂಡ ಹಸರು ಹಾವಿನಂತೆ ಪಾಪ ಪುಣ್ಯಗಳು ಈ ಪ್ರಪಂಚದಲ್ಲಿ ಹೆಣೆದು ಕೊಂಡಿವೆ. ಅದರಲ್ಲಿ ಭೇದಾಭೇದವನ್ನು ಕಾಣುವುದು ಮಹಾ ಕಷ್ಟ. ಈ ಹಾಳು ಪ್ರಪಂಚದ ಅಲ್ಪ ಸಂತೋಷಗಳನ್ನು ಅಲ್ಪವೆಂದು ಭಾವಿಸದೆ ಅವುಗಳಲ್ಲಿ ಆಸಕ್ತಿಗೊಂಡು ಒಬ್ಬ ನಾಶಗಾರಳ ಹಾಡನ್ನು ಕೇಳಿ ಹಂದಿಗಳಾಗಿ ಮಾರ್ಪಟ್ಟ ಮನುಷ್ಯ, ಆ ಹಂದಿಗಳಂತೆ ಆಹಾರ, ವಿಹಾರ ವಿಚಾರಗಳನ್ನು ಮಾಡಿ, ಮನುಷ್ಯ ರೂಪ ತಾಳಿದ್ದರೂ ಬುದ್ಧಿಹೀನರಾಗಿ ನಮಗಿರುವ ಅರ್ಧಕ್ಷಣದಲ್ಲಿ ಮಾಡುವ ಪಾಪಗಳೆಷ್ಟು? ಆಡುವ ಕೆಟ್ಟ ಮಾತುಗಳಾದರೂ ಎಷ್ಟು? ಈ ವಿಧದಲ್ಲಿ ಮಾಡಬಾರದ ಕೆಲಸಗಳನ್ನು ಮಾಡಿ ಈ ಪಾಪ ಸಂಚಯದ ಫಲವನ್ನು ಅನುಭವಿಸಲೆಂದು ಹೊಕ್ಕಿರುವ ಸೆರೆಮನೆಯಂತಿದ್ದ ಈ ಪ್ರಪಂಚದಲ್ಲೂ ಕೆಲವು ಸಮಯಗಳಲ್ಲಿ ಜಿಂಕೆಗಳು ದಾರಿ ತಪ್ಪಿ ಜನರ ಮಧ್ಯೆ ಬರುವಂತೆ ತನ್ನ ಸ್ಥಳವನ್ನು ಬಿಟ್ಟು

ಯಥಾರ್ಥವಾದ ಪ್ರೀತಿ ಬಂದು ಬಿಡುತ್ತದೆ. ಆ ರೀತಿ ಬಂದುದನ್ನು ಮನುಷ್ಯ ನಾಗಲಿ, ವಿಧಿಯಾಗಲಿ ಬೇಟೆಯಾಡಕೂಡದು—ಅದು ಹೋಗುವುದಿಲ್ಲ.

ಸುಬ್ರಹ್ಮಣ್ಯ ಅಯ್ಯರಿಗೂ ಮುತ್ತುಸ್ವಾಮಿ ಅಯ್ಯರಿಗೂ ಇದ್ದ ಸಹೋದರ ವಾತ್ಸಲ್ಯ ಬಹಳ ಕಾಲ ಯಾವ ಲೋಪವೂ ಇಲ್ಲದೆ ಮುಂದುವರಿಸಲು ಭಗವಂತನಿಗೆ ಸಮ್ಮತವಿಲ್ಲದೆ ಹೋಯಿತೇನೋ! ಮೊದಲೇ ವಿರಕ್ತಿ ಹೊಂದಿದ್ದ ಮುತ್ತುಸ್ವಾಮಿ ಅಯ್ಯರಿಗೆ ಮನುಷ್ಯನ ಕಾಠಿನ್ಯಕ್ಕಿಂತಲೂ ಅವರಲ್ಲಿರುವ ಒಳ್ಳೆಯತನವೇ ಸ್ಥಿರವೆಂದು ಅವರು ಕೆಲವು ಸಮಯಗಳಲ್ಲಿ ತಮ್ಮಷ್ಟಕ್ಕೆ ತಾವೇ ಹೇಳಿಕೊಳ್ಳುವರು. ಆದರೆ ಈ ಬಗೆಯ ಕಷ್ಟಗಳು ಒಟ್ಟಾಗಿ ಬಂದಾಗ ಅವು ಈ ಪ್ರಪಂಚ ಸುಖದ ಮೇಲೆ ತಾವು ಇಟ್ಟಿರುವ ಆಸೆಯನ್ನು ತೊರೆಯುವುದಕ್ಕಾಗಿ ದೇವರು ಅನುಗ್ರಹಿಸಿದ ವರವೆಂದೇ ಕೆಲವು ವೇಳೆ ಅವರಿಗೆ ತೋರುವುದು. "ನಮಗೆ ಮಕ್ಕಳಾರು? ಮರಿಗಳಾರು? ತಮ್ಮನಾರು? ಹೆಂಡತಿಯಾರು? ಏನೋ ಸಮುದ್ರದಲ್ಲಿ ಗಾಳಿಯಿಂದ ದೂಡಲ್ಪಟ್ಟ ಎರಡು ಜೊಂಡುಗಳು ಸ್ವಲ್ಪ ಹೊತ್ತು ಒಂದೆಡೆಗೆ ಸೇರಿದ ಹಾಗೆ ಪ್ರಪಂಚದಲ್ಲಿ ಜೀವಿಸಿರುವವರೆಗೆ ಬಂಧುಗಳು, ಮಿತ್ರರು. ಇದೆಲ್ಲ ಇಂದ್ರಜಾಲ, ಮಾಯೆ, ಅಜ್ಞಾನ." ಎಂದು ಅವರು ತಮ್ಮನ್ನೇ ತಾವು ಖಂಡಿಸಿಕೊಳ್ಳುವರು. ಈ ಜೀವಿಗೆ ತಾಯಂದಿರೆಷ್ಟೊ? ತಂದೆಗಳೆಷ್ಟೊ? ಎಷ್ಟು ಜನ ಹೆಂಡಂದಿರೊ? ಮಕ್ಕಳೆಷ್ಟೊ? ಹುಟ್ಟುತ್ತವೆ, ಸಾಯುತ್ತವೆ." ಎಂದು ಅವರು ತಮಗೆ ತಾವೇ ಸಮಾಧಾನ ಮಾಡಿಕೊಳ್ಳುವರು. ಆದರೆ ಪ್ರಪಂಚದ ವ್ಯವಹಾರಗಳು ಅವರನ್ನು ಪೂರ್ತಿಯಾಗಿ ಬಿಟ್ಟ ಪಾಡಿಲ್ಲ. ಸುಬ್ರಹ್ಮಣ್ಯ ಅಯ್ಯರ್ ಸಾಯುವ ಸಮಯದಲ್ಲಿ ತನ್ನ ಮಕ್ಕಳನ್ನು ಅಣ್ಣನಿಗೆ ಒಪ್ಪಿಸಿ ಹೋದರಲ್ಲವೆ? ಮುತ್ತುಸ್ವಾಮಿ ಅಯ್ಯರ್ ತನ್ನ ತಮ್ಮನ ಇಚ್ಛೆಗೆ ಅನುಸಾರವಾಗಿ 'ಸುಂದರಂ' 'ಸುಂದರಂ' ಎಂದು ಹಿಂದಿಗಿಂತಲೂ ಹತ್ತರಷ್ಟು ವಾತ್ಸಲ್ಯದಿಂದ ಅವನನ್ನು ನೋಡಿಕೊಳ್ಳುತ್ತ ಓದು ಮೊದಲಾದ ವಿಷಯಗಳಲ್ಲಿ ವಿಚಾರಿಸುವುದು, ತಮ್ಮನ ಮನೆಗೆ ಬೇಕಾದ ಇತರ ಕಾರ್ಯಗಳನ್ನು ನೋಡಿಕೊಳ್ಳುವುದು—ಹೀಗೆ ಈ ಕೆಲಸಗಳಲ್ಲಿ ಮಗ್ನರಾದರು.

ಪೊನ್ನಮ್ಮಾಳಿಗೆ ಒಬ್ಬ ತಾಯಿ ಇದ್ದಳು. ಪೊನ್ನಮ್ಮಾಳಿಗಿಂತಲೂ
ಣವತಿ. ಶಂಕರಿಯೆಂದು ಹೆಸರು. ಅವಳು ಹಿಡಿದ ಕಾರ್ಯವಾವುದೂ
ಾಗದು. ಮುಂದಕ್ಕೆ ಹೀಗೇ ಆಗುವುದೆಂದು ತಿಳಿದೇ ಈಕೆಗೆ ಶಂಕರೀಸಂಹ
ಸುವವಳು, ಎಂಬ ಹೆಸರನ್ನಿಟ್ಟರೊ ಏನೊ, ನಮಗೆ ಗೊತ್ತಿಲ್ಲ. ತನ್ನ
ಳಿಯು ತೀರಿಹೋದ ಸುದ್ದಿಯನ್ನು ಕೇಳಿದ ಕೂಡಲೆ ಮಗಳ ನೆರವಿಗೆ
ಂದು ಸೇರಿದಳು. ಬಂದ ಕೆಲವು ದಿನಗಳಿಗೆಲ್ಲ ಸುಬ್ರಹ್ಮಣ್ಯ ಅಯ್ಯರವರ
ೇರಳವಾಗಿದ್ದ ಸ್ವತ್ತಿಗೆ ಅವಳು ತನ್ನನ್ನೇ ಪಾರುಪತ್ಯಕ್ಕೆ ನೇಮಿಸಿಕೊಂಡು
ಲ್ಲ ಕೆಲಸಗಳನ್ನು ಮಾಡಲು ಉದ್ಯುಕ್ತಳಾದಳು. ಅವಳ ಸುತ್ತ ಮುತ್ತಲು
ದ್ದವರಿಗೆ ಅಂದಿನಿಂದ ಯಾವ ಕೊರತೆಯೂ ಇರಲಿಲ್ಲ. ಒಬ್ಬರ ಹಿಂದೊ
ಬ್ಬರು ಕುಟುಂಬ ಸಹಿತರಾಗಿ ಮೂರು ತಿಂಗಳು, ನಾಲ್ಕು ತಿಂಗಳು---ಎಂದು
ೀಗೆ ಶಿರುಕುಳದಲ್ಲಿ ಬಂದು ಬಿಡಾರವನ್ನು ಸ್ಥಾಪಿಸಿಕೊಳ್ಳುತ್ತಿದ್ದರು.
ುತ್ತುಸ್ವಾಮಿ ಅಯ್ಯರ್‌ಗೆ ಈ ಆಸ್ತಿ ಹೀಗೆ ವ್ಯಯವಾಗುತ್ತಿರುವುದು ಸರಿ
ಹೋಗಲಿಲ್ಲ! ಮಕ್ಕಳಿಲ್ಲದ ಆಸ್ತಿಯೇ? ಎಂದು ಖಂಡಿಸಲು ಯತ್ನಿಸಿದರು.
ೀವಿಶಂಕರಿ ಅವರಿಗೆ ಎದುರಾಗಿ ಯುದ್ಧಕ್ಕೆ ಸಿದ್ಧಳಾದಳು. ಹೀಗೆ ಆ
ಾಟಕಿ ಯುದ್ಧವನ್ನು ಆರಂಭಿಸಿದಕೂಡಲೆ ಅವರು ಸ್ವಲ್ಪ ಹಿಮ್ಮೆಟ್ಟಿದರು.
ದನ್ನು ಕಂಡು ಆ ರಾಕ್ಷಸಿ ಮತ್ತಷ್ಟು ಧೈರ್ಯಗೊಂಡು ಅವರಿಂದ
ುಬ್ರಹ್ಮಣ್ಯ ಅಯ್ಯರ್ ಮನೆಯ ವಿಷಯವಾಗಿ ಕೊಡಲ್ಪಟ್ಟ ಆಜ್ಞೆಯನ್ನೂ
ನ್ನ ಕಚೇರಿಯಲ್ಲಿ ಬದಲಾಯಿಸಿದಳು. ಮುತ್ತುಸ್ವಾಮಿ ಅಯ್ಯರ್ ಸುಂದ
ನ ವಿಷಯದಲ್ಲಿ ಬಹಳ ಪ್ರೀತಿಯನ್ನಿಟ್ಟಿದ್ದರೆಂದು ನಮಗೆ ಗೊತ್ತಿದೆ.
ದು ಮಧ್ಯೆ ಸ್ವಲ್ಪ ಮಂಕಾಗಿದ್ದಿತು. ಆದರೂ ಈಗ ಹಿಂದಿಗಿಂತಲೂ
ತ್ತರಷ್ಟು ಅಧಿಕವಾಗಿತ್ತು. ಅದನ್ನು ಕಂಡ ಶಂಕರಿ ಸುಂದರನನ್ನು
ನ್ನ ದೊಡ್ಡಪ್ಪನ ಬಳಿ ಹೋಗಲೇ ಕೂಡದೆಂದು ಖಂಡಿತವಾಗಿ ಹೇಳಿ,
ಂಡಿಸಿ, ನಿಲ್ಲಿಸಿದಳು. ಮುತ್ತುಸ್ವಾಮಿ ಅಯ್ಯರಿಗೆ ಇಲ್ಲಿದ್ದ ಅಲ್ಪತನವನ್ನೂ,
ಕ್ಷಪತನವನ್ನೂ, ಕಷ್ಟವನ್ನೂ ನೋಡಿ ವ್ಯಥೆ ಪಡುವುದಕ್ಕಿಂತಲೂ ಪ್ರಾಣ
ನ್ನು ಬಿಡುವುದು—ಅಥವಾ ಹಿಮವತ್ಪರ್ವತಕ್ಕೆ ತೆರಳಿ ಕಾಷಾಯ ಧರಿಸಿ
ಮಕುವುದು ಲೇಸೆಂದು ತೋರಿತು.

ಅವರಿಗೆ ಉಂಟಾದ ವಿರಕ್ತಿ ವೈರಾಗ್ಯದಲ್ಲಿ ಕಮಲಾಂಬಾಳ್ ವಿಷಯ ದಲ್ಲಿ ಕೂಡ ಅಸೂಯೆ ಉಂಟಾಯಿತು. ಅವಳು ತನ್ನ ಪತಿಯ ಶುಶ್ರೂ ಯಲ್ಲಿ ಮಗುವನ್ನು ಕಳೆದುಕೊಂಡ ದುಃಖವನ್ನು ಸಹ ಮರೆತಿದ್ದಳು. ಈ ಅವಳು ಏನು ಉಪಚಾರ ಮಾಡಿದರೂ ಅವರು ಅವಳ ವಿಷಯದಲ್ಲಿ ಉದಾಸಿ ನತೆಯನ್ನು ತೋರಿಸುತ್ತ ಬಂದರು. ಅವಳಿಗೆ ತನ್ನ ಪತಿಯ ಪ್ರೇಮವ ಆಧಾರವಾಗಿತ್ತು. ಅದಕ್ಕೂ ಈಗ ಲೋಪವುಂಟಾಯಿತು. ಮುತ್ತುಸ್ವಾಮಿ ಅಯ್ಯರ್ ಸಂನ್ಯಾಸದಲ್ಲಿ ವಿಶೇಷವಾದ ಚಾಪಲ್ಯವನ್ನು ತೋರಿಸಲ ಮೊದಲು ಮಾಡಿದರು. ಆದರೆ ಕಮಲಾಂಬಾಳನ್ನು ಒಂಟಿಯಾಗಿ ಬಿಟ್ಟು ಹೋಗಲು ಅವರಿಗೆ ಒಪ್ಪದೆ ಇದ್ದುದರಿಂದ ಆ ಸತ್ಕಾರ್ಯಕ್ಕೆ ಅವಳೇ ತಡ ಯಾಗಿ ಇರುವಳೆಂದು ಅವರ ಬುದ್ಧಿಗೆ ತೋರಿತು. ಅದಕ್ಕೂ ಮೊದಲು ಅವರ ಅವಳೊಡನೆ ಎಂದೂ ಇಲ್ಲದ ರೀತಿಯಲ್ಲಿ ಕಠಿನವಾಗಿ ವರ್ತಿಸಲು ಆರಂಭಿ ಸಿದರು. ಇವರ ವರ್ತನೆ ಬದಲಾಯಿಸಿದುದನ್ನು ಕಂಡ ಕಮಲಾಂಬಾಳ್ ಅದನ್ನು ಸರಿಪಡಿಸಲು ತನ್ನಿಂದ ಸಾಧ್ಯವಾದ ಮಟ್ಟಿಗೂ ಪ್ರಯತ್ನಿಸಿದಳು ಆದರೂ ಸಾಧ್ಯವಾಗಲಿಲ್ಲ. ತನ್ನೊಳಗೇ ದುಃಖಗೊಂಡು ಕೊರಗಿದಳು ಅವಳು ಹೀಗೆ ತಮ್ಮಿಂದ ದೂರವಾಗಿ ತನ್ನೊಳಗೇ ದುಃಖಪಡುತ್ತಿದ್ದುದನ್ನು ಗಮನಿಸಿದ ಮುತ್ತುಸ್ವಾಮಿ ಅಯ್ಯರ್ "ಪ್ರೇಮವಂತೆ, ಮಣ್ಣು. ಈ ಪ್ರಪಂಚದಲ್ಲಿಯೇ ? ನೋಡು. ನಮ್ಮ ಬಳಿ ಆಗಾಗ್ಗೆ ಓಡೋಡಿ ಬರುತ್ತಿದ್ದ ಕತ್ತೆ ಈಗ ಏನೆಂದೂ ಸಹ ವಿಚಾರಿಸುವುದಿಲ್ಲ. ಹಾಗೇ ಆಗಲಿ, ನಮಗೆ ಒಳ್ಳೆ ಯದೇ. ಸನ್ಯಾಸವನ್ನು ಸ್ವೀಕರಿಸಿ ಹೊರಟುಬಿಡಬಹುದು." ಎಂದು ತಮ್ಮ ಮನಸ್ಸಿನಲ್ಲಿ ಪದೇ ಪದೇ ಹೇಳಿಕೊಳ್ಳುತ್ತಿದ್ದರು.

ಹೀಗಿರಲು ಒಂದುದಿನ ಬೊಂಬಾಯಿಯಿಂದ ಅವರಿಗೆ ಒಂದು ಪತ್ರ ಬಂದಿತು. ಅವರು ಮದರಾಸಿಗೆ ಹೋಗಿದ್ದಾಗ ಒಂದು ದೊಡ್ಡ ವ್ಯಾಪಾರ ದಲ್ಲಿ ಪ್ರವೇಶ ಮಾಡಿದ್ದರು. ಅದು ಆರಂಭದಲ್ಲಿ ಬಹಳ ಲಾಭದಾಯಕವಾ ಗಿದ್ದುದರಿಂದ ತಮ್ಮ ಗದ್ದೆಗಳನ್ನೆಲ್ಲ ಮಾರಿ ಆ ವ್ಯಾಪಾರದಲ್ಲಿಯೇ ತಮ್ಮ ಆಸ್ತಿಎಲ್ಲವನ್ನೂ ಹಾಕಿದ್ದರು. ಆ ವ್ಯಾಪಾರಕ್ಕೆ ಮೂಲಸ್ಥಾನ ಬೊಂಬಾಯಿ. ಅಂದು ಬಂದ ಪತ್ರದಲ್ಲಿ ಆ ವ್ಯಾಪಾರ ಕ್ಷೀಣಿಸಿತೆಂದೂ, ಅವರು ನಂಬಿದ್ದ

ವ್ಯಾಪಾರ ಸಂಘಕ್ಕೆ ಅಪಾಯ ಬರುವಂತಿತ್ತೆಂದೂ, ಅವರು ಕೂಡಲೆ ಹೊರಟು ಬರಬೇಕೆಂದೂ ಬರೆದಿತ್ತು. ಆ ಪತ್ರವನ್ನು ಓದಿದ ಕೂಡಲೆ ಅವರು "ಬರುವುದೆಲ್ಲಾ ಬರಲಿ, ನಾವು ಮಾಡುವ ಅನ್ಯಾಯಗಳಲ್ಲಿ ಎಲ್ಲವೂ ಆಗಬೇಕು. ಅಷ್ಟು ಹಣ ಹೋಯಿತೇ? ಒಳ್ಳೆಯದೇ ಆಯಿತು. ಹೋದುದೆಲ್ಲವೂ ಹೋಗಲಿ." ಎಂದು ಹೇಳಿಕೊಳ್ಳುತ್ತ ಕಮಲಾಂಬಾಳನ್ನು ನೋಡಿ "ಎಲೇ! ಇನ್ನುಮುಂದೆ ಎಲ್ಲಿಯಾದರೂ ಅವಲಕ್ಕಿಯನ್ನಾದರೂ ಕುಟ್ಟಿ ಬದುಕು. ನಾನು ಹೋಗುತ್ತೇನೆ." ಎನ್ನಲು ಕಮಲಾಂಬಾಳ್ ದಿಕ್ಕುಗೆಟ್ಟು ದಿಗ್ಭ್ರಾಂತಳಾಗಿ ನಿಂತಳು. "ನಿನಗೂ ನನಗೂ ಇರುವ ಋಣಾನುಬಂಧ ತೀರಿತು." ಎಂದು ಪತ್ರವನ್ನು ಬೀಸಿ ಎಸೆದು ಪಂಚೆ,ಬಟ್ಟೆ ಮೊದಲಾದುವನ್ನು ತೆಗೆದುಕೊಂಡು ಜೋಪಾನವಾಗಿ ಗಂಟು ಕಟ್ಟಲು ತೊಡಗಿದರು.

ಕಮಲಾಂಬಾಳ್ ಆ ಪತ್ರವನ್ನು ಎತ್ತಿ ನೋಡಿ, ಅವರ ಕೈಯ್ಯನ್ನು ಹಿಡಿದುಕೊಂಡು ಅತ್ತಳು. ಅವರು ಅವಳನ್ನು ಝಾಡಿಸಿ ತಳ್ಳಿಬಿಟ್ಟು, "ಹಣ ಹೋಯಿತೆಂದು ಅಳುತ್ತೀಯಲ್ಲವೆ? ಅಳು. ಇನ್ನುಮುಂದೆ ನಿನಗೂ ನನಗೂ ಏನು ಸಂಬಂಧ? ನಾನು ಬಡವ. ನೀನು ಎಲ್ಲಿ ಬೇಕಾದರೂ ಹೋಗಬಹುದು. ತುಪ್ಪದ ಪಾತ್ರೆಯ ಇರುವೆಗಳು! ಹಣವಿದ್ದರೆ ಹೆಂಡತಿ ಮಕ್ಕಳುಂಟು. ಏನೂ ಇಲ್ಲದವನು, ಮನೆಯಾಕೆಗೂ ಬೇಡ. ಹೆತ್ತ ತಾಯಿಗೂ ಬೇಡ." ಎನ್ನಲು ಅವಳು ಅವರ ಕಾಲನ್ನು ಗಟ್ಟಿಯಾಗಿ ಹಿಡಿದುಕೊಂಡು ಕಣ್ಣುಗಳಲ್ಲಿ ಪ್ರವಾಹವಾಗಿ ನೀರು ಹರಿಯಲು "ಅಯ್ಯೋ! ನಾನು ಏನು ತಪ್ಪನ್ನು ಮಾಡಿದ್ದೇನೆ. ನಿಮ್ಮನ್ನು ಬಿಟ್ಟರೆ ನನಗೆ ಯಾವ ಗತಿ ಇದೆ. ನನಗೆ ತಂದೆಯೂ ನೀವೇ; ಪತಿಯೂ ನೀವೇ; ಅಣ್ಣ, ತಮ್ಮ ಎಲ್ಲವೂ ನೀವೇ. ನನಗೆ ನೀವೇ ದೈವ! ನನಗೆ ಯಾವ ಶಿಕ್ಷೆ ಕೊಡಲು ತಾನೆ ನಿಮಗೆ ಸ್ವಾತಂತ್ರ್ಯವಿಲ್ಲ? ಕತ್ತಿಯನ್ನೆತ್ತಿ ನನ್ನ ಕತ್ತನ್ನು ಕುಯ್ಯಿರಿ. ನಿಮ್ಮ ಕೈಯಿಂದ ಸಾಯುವುದೇ ಮೋಕ್ಷ—ಎಂದು ನಾನು ಸಂತೋಷವಾಗಿ ಪ್ರಾಣ ಬಿಡುತ್ತೇನೆ. ನೀವು ಒಂದು ದಿನವಾದರೂ ನನ್ನ ವಿಷಯದಲ್ಲಿ ಹೀಗಿದ್ದುದಿಲ್ಲವಲ್ಲ! ಮಗು ಹೋದುದು—ಹೋದಂತೆ ನನಗೆ ತೋರಲಿಲ್ಲ. ನಿಮ್ಮ ಸಂತೋಷದ ಮುಖವನ್ನು ನೋಡುತ್ತ ನಾನು ಅದನ್ನೂ ಮರೆತಿದ್ದೇನೆ.

ನನ್ನನ್ನು ನೀವೂ ಓಡಿಸಿಬಿಟ್ಟರೆ ನಾನು ಏನು ಮಾಡಲಿ? ಆಸ್ತಿ ಎಲ್ಲವೂ ಹೋದರೆ ಹೋಗಲಿ, ನಮಗೇನಾಗಬೇಕು ? ಮಕ್ಕಳೇ, ಮರಿಯೇ ? ಆಸ್ತಿ ಏತಕ್ಕೆ? ನಾನು ನೀರು ಹೊತ್ತು, ಅವಲಕ್ಕಿ ಕುಟ್ಟಿ ಸಂಪಾದಿಸಿ ತರುತ್ತೇನೆ. ನಿಮ್ಮ ಸದ್ಯದ ಸೌಕರ್ಯಕ್ಕೆ ಯಾವ ಕೊರತೆಯೂ ಇಲ್ಲದಂತೆ ನಾನು ನೋಡಿಕೊಳುತ್ತೇನೆ. ನನಗೇತಕ್ಕೆ ಕಾಸು—ಹಣ? ನಿಮ್ಮ ಪ್ರೀತಿ ಒಂದು ಸಾಲದೆ ? ಅದಕ್ಕಿಂತಲೂ ನನಗೆ ಯಾವ ಸ್ವತ್ತು ದೊಡ್ಡದು ? ಅಯ್ಯೋ! ನನ್ನನ್ನು ಹೀಗೆ ಝಾಡಿಸಿತಳ್ಳುವುದು ನಿಮಗೆ ಧರ್ಮವೆ? ನಾನು ಬಡವಿ, ಭಿಕಾರಿ, ಅನಾಥೆ. ನಿಮ್ಮನ್ನು ಸೇರಿದ್ದೇನೆ, ಕಾಪಾಡಬೇಕು." ಎಂದು ಹೇಳುತ್ತ ಅವರ ಕಾಲನ್ನು ಗಟ್ಟಿಯಾಗಿ ಹಿಡಿದುಕೊಂಡು ತನ್ನ ಕಣ್ಣೀರಿನಿಂದ ತೊಳೆಯಲು ಅವರು, "ಇದೇನು, ಗಟ್ಟಿಯಾಗಿ ಕಾಲು ಹಿಡಿದುಕೊಂಡಿದೆ ಶನಿ!" ಎಂದು ಹೇಳಿ ಅವಳನ್ನು ಕೈಯಿಂದ ಎತ್ತಿ "ಏನು ಮಾಡಬೇಕೆನ್ನುತ್ತೀಯಾ ?" ಎಂದು ಗದರಿಸಲು ಆ ಉತ್ತಮಳು ಅವರ ಎದೆಯ ಮೇಲೆ ವಾಲಿಕೊಂಡು ಧಾರೆಧಾರೆಯಾಗಿ ಅತ್ತಳು. ಅವರೂ ಕರಗಿ ಅವಳನ್ನು ತಬ್ಬಿಕೊಂಡು ತಾವೂ ಅಳತೊಡಗಿದರು. ಹೀಗೆ ಇಬ್ಬರೂ ಒಬ್ಬರನ್ನೊಬ್ಬರು ಸಮಾಧಾನ ಮಾಡಿಕೊಂಡರು.

ಬಾಡಿದ್ದ ಕಮಲಾಂಬಾಳ್ ದೇಹ ಅಂದು ಸಂತೋಷದಿಂದ ಹಿಗ್ಗಿತು. ಅಳುವೆಲ್ಲವೂ ಮುಗಿದ ನಂತರ ಕಮಲಾಂಬಾಳ್, "ಆಸ್ತಿ ಹೋದರೆ ಶನಿ ತೊಲಗಿತು. ನೀವು ಇಲ್ಲಿಯೇ ಇರಿ. ನಾನು ದುಡಿದು ತರುತ್ತೇನೆ. ಇಲ್ಲವಾದರೆ ಇಬ್ಬರೂ ಸೇರಿ ಎಲ್ಲಿಯಾದರು ಹೋಗಿ ಬದುಕಲು ದಾರಿ ಹುಡುಕೋಣ" ಎಂದು ಹೇಳಿದಳು. ಮುತ್ತುಸ್ವಾಮಿ ಅಯ್ಯರ್, "ಆಸ್ತಿ ಹೋದಂತೆ ಇಲ್ಲ. ನಾನು ಹಾಕಿದ ಮೂಲ ಧನವನ್ನಾದರು ಉಳಿಸಿಕೊಂಡು ಬರುತ್ತೇನೆ. ನಮಗೆ ಹಣ ಬೇಡವೆಂದರೂ ಲಕ್ಷಗಟ್ಟಲೆ ರೂಪಾಯಿಯನ್ನು ಕಳೆದುಕೊಳ್ಳುವುದಕ್ಕೆ ಮನಸ್ಸು ಬರುವುದಿಲ್ಲ. ನಾನು ಹೋಗಿ ಏನು ಸಾಧ್ಯವೋ ಅದನ್ನು ಮಾಡಿಬರುತ್ತೇನೆ. ಅದುವರೆಗೂ ನೀನು ಇಲ್ಲಿಯೇ ಹಲ್ಲನ್ನು ಕಚ್ಚಿಕೊಂಡಿರು. ನಾನು ಹೋಗಿ ಆದಷ್ಟು ಬೇಗ ಓಡಿ ಬರುತ್ತೇನೆ" ಎಂದರು. ಕಮಲಾಂಬಾಳ್ ಅವರನ್ನು ಬಿಟ್ಟು ಅಗಲುವುದಿಲ್ಲವೆಂದು ಹಟ ಹಿಡಿದೂ

ಅವಳನ್ನು ಜೊತೆಯಲ್ಲಿ ಕರೆದುಕೊಂಡು ಹೋಗುವುದಕ್ಕೆ ಅನುಕೂಲ ವಿಲ್ಲ ದುದರಿಂದ ಅವಳು ಊರಿನಲ್ಲಿಯೇ ಉಳಿಯಬೇಕಾಯಿತು. ಮುತ್ತುಸ್ವಾಮಿ ಅಯ್ಯರ್ ಮಾತ್ರ ಬೊಂಬಾಯಿಗೆ ಹೊರಟರು. ಆಗಾಗ್ಗೆ ಪತ್ರ ಬರೆಯುವು ದಾಗಿ ಮಾತು ಕೊಟ್ಟು ಹೋದರು. ಬೊಂಬಾಯಿಯಿಂದ ಬಂದ ಸಮಾ ಚಾರ ಯಾರಿಗೂ ತಿಳಿಯಬಾರದೆಂದು ಖಂಡಿತವಾಗಿ ಆಜ್ಞೆಮಾಡಿ ಹೋದರು.

## ೨೪. ದುಷ್ಟಲಕ್ಷಣ ಮೂರು ಬಗೆ

ಅವರು ಹೋದ ಕೆಲವು ದಿನಗಳಾದ ಮೇಲೆ, ಹರಟೆಮಲ್ಲಿಗಳ ಮಹಾ ಸಭೆಯ ಅಧ್ಯಕ್ಷಿಣಿಯರಾದ ಸುಬ್ಬಮ್ಮಾಳ್,ಪೊನ್ನಮ್ಮಾಳ್, ಪೊನ್ನಮ್ಮಾಳ್ ತಾಯಿ ಶಂಕರಿಯಮ್ಮಾಳ್—ಈ ಮೂವರೂ ಸುಬ್ರಹ್ಮಣ್ಯ ಅಯ್ಯರ್ ಮನೆಯ ಪಡಸಾಲೆಯಲ್ಲಿ ಯಾವುದೋ ರಹಸ್ಯ ಮಾತನ್ನು ಆಡುತ್ತಿದ್ದರು.

ಸುಬ್ಬಮ್ಮಾ:- "ಯಾಯು ಹಾಗೆ ಹೇಳಿದಯು? ನಾನಾ? ಅವಯು ಹೇಳಿದಯೂಂದೆ?"

ಶಂಕರಿ:- "ಹೇಳುವುದನ್ನು ಸರಿಯಾಗಿ ಹೇಳು. ನೀನು ಹೇಳುವುದು ನನಗರ್ಥವಾಗುವುದಿಲ್ಲ. ಏನು ಹೀಗೆ ಹೇಳ್ತಾಳೆಂತ ಕೋಪಿಸಿ ಕೊಳ್ಳಬೇಡ."

ಸುಬ್ಬಮ್ಮಾ :- " ಕೋಪವೇನು ? ಸಯಿಯಾಗಿಯೇ ಹೇಳ್ತೇನೆ. ಯಾಯೋ—ಅವಯೋ ಹೇಳಿದಯೋ ಎಂದೇ—" ಹೀಗೆ ಹಿಂದಿಗಿಂತಲೂ ಶುದ್ಧವಾದ ರೀತಿಯಲ್ಲಿ ಆರಂಭಿಸಿದಳು. ಅನಂತರ ಶಂಕರಿ ಇವಳ ಭಾಷೆಯ ಸೂಕ್ಷ್ಮವನ್ನು ಗ್ರಹಿಸಿಕೊಂಡಳು. ಅಕ್ಷರ ಮಾಲೆಯ 'ಯ' ಕಾರ ಇವಳಿಗೆ ಹೆಣ್ಣುಮಗಳ ಮೊಮ್ಮಗಳೆಂತಲೂ, 'ರ' ಕಾರಕ್ಕೂ ಇವಳಿಗೂ ಸವತಿ ಪ್ರೇಮ ವೆಂತಲೂ ಅವಳು ತಿಳಿದುಕೊಂಡಳು. ಸುಬ್ಬಮ್ಮಾಳ್ ಹೀಗೆ 'ಯರಯೋ ರಭೇದಃ' ಎಂಬುವ ಸೂತ್ರದ ನಿಯಮದಂತೆ ಕ್ರಮವಾಗಿ ಹೇಳಿ ಮುಗಿಸಿದುದು ಏನೆಂದರೆ ಪೊನ್ನಾಮ್ಮಾಳ್ ಮದ್ದನ್ನಿಟ್ಟು ತನ್ನ ಗಂಡನನ್ನು ಕೊಂದಳೆಂದು ಕಮಲಾಂಬಾಳ್ ತನ್ನ ಬಳಿ ಹೇಳಿದಳಂತೆ. ಪೊನ್ನಮ್ಮಾಳ್ ಔಷಧವೇ ಸುಬ್ರಹ್ಮಣ್ಯ ಅಯ್ಯರ್ ಮರಣಕ್ಕೆ ಕಾರಣವೆಂದು ಊರಿನಲ್ಲಿ ಎಲ್ಲರಿಗೂ

ಶಂಕೆ ಇತ್ತು. ಆದರೆ ಕಮಲಾಂಬಾಳ್ ಅದನ್ನು ಕುರಿತು ಒಂದು ಮಾತನ್ನಾ ದರೂ ಆಡಿರಲಿಲ್ಲ. ಶಂಕರಿಅಮ್ಮಾಳ್ ಕೈಗೆ ಬಂದಂತೆ ಹಣವನ್ನು ಖರ್ಚು ಮಾಡುವುದನ್ನು ಕಂಡ ಸುಬ್ಬಮ್ಮ ತನಗೂ ಅದರಲ್ಲಿ ಏನಾದರೂ ಸಿಗ ಬೇಕೆಂದು ಆಸೆ. ಕಮಲಾಂಬಾಳ್ ಮೇಲೆ ಆರೋಪಣೆ ಮಾಡಿ ಶಂಕರಿ ಅಮ್ಮಾಳ್ ಬಳಿ ಮೇಲೆ ಹೇಳಿದಂತೆ ಹೇಳಲು ಶಂಕರಿ ಅಮ್ಮಾಳ್, "ಆ ಮೂದೇವಿ ಹಾಗೆ ಹೇಳಿದಳೆ? ನಾಲಗೆಯನ್ನು ಎಳೆದು ಹಿಡಿದು ಕತ್ತರಿಸಿದರೆ ತಾನೆ ಏನು? ಏತಕ್ಕೆ ನನ್ನ ಮಗಳು ಮಾತ್ರ ತಾಳಿ ಕಳೆದು ಕೊಳ್ಳಬೇಕು? ಅವಳು ಮಾತ್ರ ಬಾಳಬೇಕೆ? ಹೇಳುತ್ತೇನೆ ದಾರಿಯನ್ನು ಆ ಪಟಿಂಗಳಿಗೆ" ಎಂದು ಕೋಪಿಸಿಕೊಂಡು ಸುಬ್ಬಮ್ಮಾಳಿಗೆ ಒಂದು ದೊಡ್ಡ ಕುಂಬಳ ಕಾಯನ್ನು ಎತ್ತಿಕೊಟ್ಟು ಮರುದಿನವೂ ಬರುವಂತೆ ಹೇಳಿ ಕಳುಹಿಸಿ ಕೊಟ್ಟಳು.

ಕೆಲವು ದಿನಗಳ ನಂತರ ಮುತ್ತುಸ್ವಾಮಿ ಅಯ್ಯರ್ ಆದ್ರಾ ದರ್ಶನ ಕ್ಕಾಗಿ ಚಿದಂಬರದಲ್ಲಿ ಇಳಿದು ಶೀಘ್ರವೇ ಊರಿಗೆ ಬರುವುದಾಗಿ ಕಮಲಾಂಬಾಳ್‌ಗೆ ಬರೆದರು. ಅವಳು ತನ್ನ ಗಂಡ ಬರುವ ಸಂತೋಷವನ್ನು ಮನೆಗೆ ಬಂದು ಹೋದವರೆಲ್ಲರಿಗೂ ಹೇಳಿಕೊಂಡು ಸಂತೋಷಿಸಿದಳು. ಈ ಪತ್ರ ಬಂದ ದಿನ ಪೊನ್ನಮ್ಮಾಳ್ ಮನೆಯಲ್ಲಿ ಶಂಕರಿ, ಸುಬ್ಬಮ್ಮ, ಈಶ್ವರ ದೀಕ್ಷಿತ್—ಈ ಮೂರು ಜನರೂ ಸೇರಿ ಮಾತಾಡುತ್ತಿದ್ದರು. ಅವರು ಬಹಳ ಮೆತ್ತಗೆ ಮಾತಾಡುತ್ತಿದ್ದುದರಿಂದ ಏನು ಮಾತಾಡಿಕೊಳ್ಳುತ್ತಿದ್ದರೆಂದು ನನಗೆ ಚೆನ್ನಾಗಿ ತಿಳಿಯದು. ಆದರೆ'ಕಮಲಾಂಬಾಳ್' ಎಂಬ ಹೆಸರು ಮಾತ್ರ ಮಾತು ಮಾತಿಗೂ ಕೇಳಿ ಬರುತ್ತಿತ್ತು. ಎಲ್ಲವೂ ಮುಗಿದ ಮೇಲೆ ಶಂಕರಿ ಅಮ್ಮಾಳ್ ಖರ್ಚಿನಲ್ಲಿ ಈಶ್ವರ ದೀಕ್ಷಿತರೂ, ಸುಬ್ಬುವೂ ಚಿದಂಬರಕ್ಕೆ ಹೋಗುವುದಾಗಿ ತೀರ್ಮಾನಿಸಿದರು." ಬಂದ ಬ್ರಾಹ್ಮಣನನ್ನು ಹಾಗೆಯೇ ತಿರುಗಿ ಹೋಗುವಂತೆ ಮಾಡಲು ನಾನಿದ್ದೇನೆ" ಎಂದರು ದೀಕ್ಷಿತರು. "ಇನ್ನು ಅವಳು ಬಾಳುವುದನ್ನು ನೋಡಿ ಬಿಡುತ್ತೇನೆ" ಎಂದು ಶಪಥ ಮಾಡಿದಳು ಸುಬ್ಬಮ್ಮ.

ಮುತ್ತುಸ್ವಾಮಿ ಅಯ್ಯರ್ ಹೋದ ಕೆಲಸವೆಲ್ಲವೂ ಪ್ರತಿಕೂಲವಾಗಿ ಮುಗಿಯಿತು. ಇವರು ಸೇರಿದ್ದ ವ್ಯಾಪಾರ ಸಂಘದಲ್ಲಿ ಮುಖ್ಯ ಉದ್ಯೋಗಸ್ಥರಾಗಿದ್ದ ಇಬ್ಬರು ಹಣವೆಲ್ಲವನ್ನೂ ತಸ್ಕರ ಮಾಡಿಕೊಂಡು ಎಲ್ಲಿಯೋ ಮಾಯವಾದರು. ಹೋದ ಸ್ಥಳ ಗೊತ್ತಿಲ್ಲ. ಪಾಪ! ಮುತ್ತುಸ್ವಾಮಿ ಅಯ್ಯರವರ ಸ್ವತ್ತೆಲ್ಲವೂ ಒಂದೇ ಏಟಿಗೆ ನಷ್ಟವಾಯಿತು. ಬಹುದಿನಗಳಿಂದ ಶೇಖರಿಸಿದ ಅಪಾರ ದ್ರವ್ಯ ಇದ್ದಕ್ಕಿದ್ದಂತೆ ಕಳೆದು ಹೋದರೆ ಯಾರಿಗೆವ್ಯಥೆ ಆಗಲಾರದು! ಆದರೆ ಮುತ್ತುಸ್ವಾಮಿ ಅಯ್ಯರವರು ತಮ್ಮ ವ್ಯಸನವನ್ನು ವಿರಕ್ತಿಯಿಂದ ದೂರ ಮಾಡಿಕೊಂಡು, ಕಾಷಾಯ ಸ್ವೀಕರಿಸಿ, ಅನ್ಯಾಯ ತುಂಬಿದ ಈ ಪ್ರಪಂಚವನ್ನು ತೊರೆದುಬಿಡಬೇಕೆಂದು ತೀರ್ಮಾನಿಸಿಕೊಂಡರು. ತಾವು ಸನ್ಯಾಸಿಯಾಗುವುದಕ್ಕೆ ದೇವರು ತಮಗೆ ಈ ಕಷ್ಟಗಳನ್ನು ಕೊಟ್ಟು ಪ್ರೇರೇಪಿಸಿದ್ದಾನೆಂದು ಅವರಿಗೆ ತೋರಿತು. ಊರಿಗೆ ಬಂದು ಕಮಲಾಂಬಾಳ್‌ಗೆ ಯಾವುದಾದರೊಂದು ದಾರಿ ಮಾಡಿಕೊಟ್ಟು, ಸನ್ಯಾಸಾಶ್ರಮ ತೆಗೆದುಕೊಳ್ಳುವಂತೆ ನಿಶ್ಚಯ ಮಾಡಿಕೊಂಡು ಬರುವ ಮಾರ್ಗದಲ್ಲಿ ಆದ್ರಾ ದರ್ಶನವು ಸಂಭವಿಸಿದುದರಿಂದ ಚಿದಂಬರದಲ್ಲಿ ಇಳಿದು ರುದ್ರನಾಥ ಲೋಕನಾಥನು ಪ್ರಳಯ ಸ್ಮಶಾನದಲ್ಲಿ ತಾಂಡವ ಮಾಡುವುದನ್ನು ದರ್ಶನ ಮಾಡಿ, ತಾನೂ ತನ್ನ ದುಃಖಗಳನ್ನು ಕಳೆದುಕೊಂಡು, ಅವುಗಳ ಮೇಲೆ ಆನಂದ ತಾಂಡವ ಮಾಡಲು ಬಯಸಿ ವಿರಕ್ತಿ ವೈರಾಗ್ಯಗಳನ್ನು ಬಲಪಡಿಸಿಕೊಂಡು ಹೋಗೋಣವೆಂದು ಚಿದಂಬರ ಕ್ಷೇತ್ರಕ್ಕೆ ಬಂದು ಸೇರಿದರು. ಅಪರಿಮಿತವಾದ ಗುಂಪಿನ ಮಧ್ಯದಲ್ಲಿ ದೇವರು ಮೆರವಣಿಗೆಯಿಂದ ಬರುವುದನ್ನು ಕಂಡು ಭ್ರಾಂತರಾಗಿ ಮೈಮರೆತು ನಿಂತು ಮಗು ನಟರಾಜನ ನೆನಪನ್ನು ಸಂತೋಷದಲ್ಲಿ ಲಯಗೊಳಿಸಿ, ಭಗವಂತನ ತಾಂಡವ ಸ್ವರೂಪದಲ್ಲಿ ಮಗ್ನರಾಗಿ ಬ್ರಹ್ಮಾನಂದದಲ್ಲಿ ಮುಳುಗಿ, "ನನ್ನ ಮಗುವನ್ನು ತಮ್ಮ ಪಾದಾರವಿಂದದಲ್ಲಿ ಸೇರಿಸಿಕೊಂಡಂತೆ ನನ್ನನ್ನೂ ಸೇರಿಸಿಕೊಂಡು ಅನುಗ್ರಹಿಸು ದೇವಾ!" ಎಂದು ಅಂತರಂಗ ಭಕ್ತಿಯಿಂದ ಈಶ್ವರನನ್ನು ಧ್ಯಾನ ಮಾಡಿದರು.

ಆಗ "ಯಾರು ? ಮುತ್ತುಸ್ವಾಮಿಯೇ? ಯಾವಾಗ ಬಂದೆ? ಬಾ, ಬಾ ಈಗಲೆ ಬಂದೆಯಾ ?" ಎಂದು ಒಂದು ಧ್ವನಿ ಕೇಳಿಸಿತು. ತಿರುಗಿ ನೋಡಿದರು ಶಿರುಕುಳದ ಈಶ್ವರ ದೀಕ್ಷಿತರು. ಅವರನ್ನು "ಯಾವಾಗ ಬಂದಿ ?" ಎಂದು ವಿಚಾರಿಸಿ, ಭಗವದ್ ಧ್ಯಾನದಲ್ಲಿ ಮತ್ತೆ ಲೀನವಾದರು. ಈಶ್ವರ್ ದೀಕ್ಷಿತರು ಅಷ್ಟಕ್ಕೇ ಅವರನ್ನು ಬಿಡಲಿಲ್ಲ. "ಮುತ್ತುಸ್ವಾಮಿ ! ಕ್ಷೇಮ ತಾನೆ ದೇಹಸ್ಥಿತಿ ಬಡವಾದಂತೆ ಇದೆಯಲ್ಲ ! ಎಲ್ಲಿಗೆ ಬೊಂಬಾಯಿಗೆ ಅಲ್ಲ ಹೋಗಿದ್ದುದು ?" — ಹೀಗೆ ಮಾತಾಡುತ್ತಲೇ ಆ ಗುಂಪಿನಿಂದ ಅವರನ್ನು ಬೇರ್ಪಡಿಸಿಕೊಂಡು, ಏಕಾಂತಕ್ಕೆ ಕರೆದುಕೊಂಡು ಹೋಗಿ, ಕ್ಷೇಮ ಲಾಭ ಗಳನ್ನು ಪ್ರೀತಿಯಿಂದ ವಿಚಾರಿಸುವವರಂತೆ ವಿಚಾರಿಸಿದ ಮೇಲೆ ಬಹಳ ಅಪ್ತ ಯಿಂದ ಮೆತ್ತನೆಯ ಸ್ವರದಲ್ಲಿ "ಅನ್ಯಾಯವಾಗಿ ಹೋಯಿತು ! ಅಚಾತುರ್ಯ ವಾಯಿತು ! ಆಗಿಹೋದುದಕ್ಕೆ ವ್ಯಸನ ಪಡಬೇಡ. ನಿನಗೆ ಈ ವೇಳೆ ಸಮಾಚಾರ ತಿಳಿದಿರಬೇಕಲ್ಲ !" ಎನ್ನಲು ಮುತ್ತುಸ್ವಾಮಿ ಅಯ್ಯರ್ "ಏನು ವಿಶೇಷ ? ನನಗೆ ಏನೂ ತಿಳಿಯದಲ್ಲ !" ಎಂದರು. ದೀಕ್ಷಿತರು "ಹಾಗೆ ಏನೂ ಇಲ್ಲ ! ಏನೂ ಇಲ್ಲ ! ನಿನಗೆ ತಿಳಿದಿರುವುದೆಂದುಕೊಂಡಿದ್ದೆ ಇಲ್ಲವಾದರೆ ನಾನು ಪ್ರಸ್ತಾಪವನ್ನೇ ಮಾಡಿರಲಾರೆ." ಎಂದು ಹೇಳಿದರು ಮುತ್ತುಸ್ವಾಮಿ ಅಯ್ಯರ್, "ಏನು ಸಮಾಚಾರ ? ಸುಮ್ಮನೆ ಹೇಳಿ !" ಎಂದು ಬಲವಂತ ಮಾಡಲು ದೀಕ್ಷಿತರು, "ಸ್ವಾಮಿ ದರ್ಶನವನ್ನು ಮಾಡೋಣ. ಈ ಹಾಳು ಮಾತು ಈಗ ಏತಕ್ಕೆ ? ಬೊಂಬಾಯಿಯಲ್ಲಿ ಬಹ ಜನರು ಶ್ರೀಮಂತರಂತೆ ?" ಎಂದು ಕೇಳಿದರು.

ಮುತ್ತುಸ್ವಾಮಿ ಅಯ್ಯರ್:- " ಅದಿರಲಿ. ಸಮಾಚಾರವೇನು ? ಅದನ್ನು ಹೇಳಿ.

ದೀಕ್ಷಿತರು: "ಅದೇನೂ ಇಲ್ಲ ಎನ್ನುತ್ತೇನಲ್ಲ ! ಕಾಶಿಗೂ ಬೊಂಬಾ ಯಿಗೂ ಬಹಳ ಸಮೀಪವಂತೆ—ಮೂವತ್ತು ನಲವತ್ತು ಇರಬಹುದೆ ?"

ಮುತ್ತುಸ್ವಾಮಿ ಅಯ್ಯರ್:- "ನಾನೇನು ಕೇಳುತ್ತೇನೆ — ನೀವೇನು ಹೇಳುತ್ತೀರಿ ? 'ಚಿದಂಬರಕ್ಕೆ ದಾರಿ ಯಾವುದೆಂದರೆ ಕೆಂಪು ಎತ್ತು ಮೂವತ್ತು ಹೊನ್ನು.' ಎನ್ನುವ ಕಥೆಯಂತಿದೆ. ದಯೆಮಾಡಿ ಅದೇನು ಹೇಳಿ."

ದೀಕ್ಷಿತರು:– "ಒಳ್ಳೆಯ ವಿಷಯವಾಗಿದ್ದರೆ ಆಗಲೆ ಹೇಳಲಾರೆನೆ? ಏನೋ ಕತ್ತೆ! ಹೆಣ್ಣುಗಳ ಸ್ವಭಾವವೇ ಹೀಗೆ. ಹೇಳುತ್ತಾರೆ ಗೀತೆಯಲ್ಲಿ...

ಮುತ್ತುಸ್ವಾಮಿ ಅಯ್ಯರ್:– "ಅದಿರಲಿ. ಹೆಣ್ಣುಗಳೆ? ಯಾರು? ಏನು ಸಮಾಚಾರ?"

ದೀಕ್ಷಿತರು:– "ನಾಳೆಗೆ ಊರಿಗೆ ಹೋಗುತ್ತೀಯ. ತಾನಾಗಿಯೇ ತಿಳಿಯುತ್ತೆ. ಅದಕ್ಕೇನು ಈಗ ಅವಸರ? ಏನೂ ಇಲ್ಲ. ವ್ಯಸನ ಪಡಬೇಡ. ಭಗವಂತನೊಬ್ಬನಿದ್ದಾನೆ. ಅವನು ಸೂತ್ರಧಾರ. ನಾವು ಸೂತ್ರದ ಗೊಂಬೆಗಳು. ಅವನು ಆಡಿಸುತ್ತಾನೆ, ನಾವು ಆಡುತ್ತೇವೆ. ಪುರುಷ ಸೂಕ್ತದಲ್ಲಿ ಹೇಳಿದೆ..."

ಮುತ್ತುಸ್ವಾಮಿ ಅಯ್ಯರ್: ಅದಿರಲಿ, ಸಂಗತಿಯನ್ನು ಹೇಳಿ. ಅದೇನು ಕೆಟ್ಟ ವಿಷಯವಾಗಿದ್ದರೂ ಸರಿ—ಹೇಳಿ. ನಡೆದುದು ನಡೆದು ಹೋಯಿತು. ಇನ್ನು ನೀವು ಹೇಳುವುದರಲ್ಲಿ ಏನು ತಪ್ಪು? ಸುಮ್ಮನೆ ಹೇಳಿ."

ದೀಕ್ಷಿತರು:- "ಸ್ತ್ರೀಯರೇ ಮಾಯಾವಿಗಳು. ಅವರನ್ನು ನಂಬಲೇ ಬಾರದು. ಕಲಿ ಪುರುಷಲೋಕದಲ್ಲಿ ಬಂದು ನರ್ತನ ಮಾಡುತ್ತಿದ್ದಾನೆ. ಆದರಲ್ಲಿ ವರ್ಜಾವರ್ಜವಿಲ್ಲ. ಪಿತನಿಲ್ಲ, ಭರ್ತನಿಲ್ಲ, ಬಂಧುವಿಲ್ಲ—ಹಾಳಾಯಿತು ಕಾಲ. ಈ ಕಾಲಕ್ಕೆ ಚಿದಂಬರ ಒಳ್ಳೆ ದಿವ್ಯವಾದ ಕ್ಷೇತ್ರ. ಇಂದಿಗೂ ಅದು ಹಾಗೆಯೇ ಇದೆ ಅಲ್ಲವೆ?"

ಮುತ್ತುಸ್ವಾಮಿ ಅಯ್ಯರ್:– ನೀವು ಹೀಗೆ ಮಾಡುವದು ಚೆನ್ನಾಗಿದೆಯೆ? ಮೂವತ್ತು ಸಲ ಕೇಳಿ ಆಯಿತು. ಬಳಸಿ ಬಳಸಿ ಮಾತಾಡುತ್ತೀರೇ ಹೊರತು ವಿಷಯವನ್ನು ಹೇಳೋದಿಲ್ಲವಲ್ಲ, ಹೇಳಿ ಬೇಗ.

ದೀಕ್ಷಿತರು: ನಾನು ಹೇಳಲೇ ಬೇಕು. ತೊಂದರೆ ಮಾಡುತ್ತೀಯಲ್ಲ! ಹಾಗೊಂದು ಅತಿಶಯವಾದುದೇನೂ ಇಲ್ಲ. ಪ್ರಪಂಚದಲ್ಲಿ ನಡೆಯದೆ ಇರುವ ವಿಷಯವೇನೂ ಇಲ್ಲ—ಇದ್ದರೂ—ಬೆಕ್ಕು ಈ ಹಾಲನ್ನು ಕುಡಿಯುವುದೆ ಎನ್ನುವಂತೆ ಕಮಲಾಂಬಾಳೂ ಹೀಗೆ ಮಾಡುವಳೇ ಎನ್ನುವುದೇ ಆಶ್ಚರ್ಯ. ಏನೊ ಕಾಲ ವಿಶೇಷ. ಪೂರ್ವಜನ್ಮ ಕರ್ಮವಾಸನೆ. ಬಿಟ್ಟು ತಳ್ಳು ಕತ್ತೆಯನ್ನು, ಹೋದರೆ ಹೋಗುತ್ತೆ.

ಮುತ್ತುಸ್ವಾಮಿ ಅಯ್ಯರ್:- ಯಾರು ? ಏನು ಸಮಾಚಾರವಂತೆ ? ಏನು ವಿಷಯ? ಏನದು? (ಕಾತರದಿಂದ ನಡುಗುತ್ತ) ಸರಿಯಾಗಿ ಹೇಳಿ.

ದೀಕ್ಷಿತರು:- ಏನನ್ನು ಹೇಳೋದು? ಏನೋ—ಯಾರೊಂದಿಗೋ—ಏನೋ ಅಂತೆ, ಕಂಡರಂತೆ—ಊರಲ್ಲೆಲ್ಲ ಗುಲ್ಲಂದು ಈ ಮಾತೇ ಅಂತೆ—ಏನೋ—ನಿನಗೆ ತಿಳಿದಿರಬಹುದೆಂದೇ ಈ ಪ್ರಸ್ತಾಪವನ್ನು ತೆಗೆದೆ. ಬಿದ್ದಿರುತ್ತಾಳೆ ಕತ್ತೆ. ಅದಕ್ಕಾಗಿ ಏನೂ ವ್ಯಸನ ಪಡಬೇಡ—ಭಗವಂತನೂ ಸಹ ಹೇಳುತ್ತಾನೆ........."ಇಂದ್ರಿಯಸ್ಯೇಂದ್ರಿಯಸ್ಯ ಸರ್ವ ಕರ್ಮಾಣಿ"

ಮುತ್ತುಸ್ವಾಮಿ ಅಯ್ಯರ್:- ನಿಜವೆ? ಯಾರು? ನನ್ನ ಹೆಂಡತಿಯೆ? ಯಾವಾಗ? ನಿಜವಾಗಿಯೆ?

ದೀಕ್ಷಿತರು: "ಸುಳ್ಳಾಗಿರಬೇಕೆಂಬುದೇ ನನ್ನ ಪ್ರಾರ್ಥನೆ. ಅಪ್ಪಾ, ಊರಿನ ವದಂತಿಯನ್ನು ನಾನು ಹೇಳಿದೆ. ಏನೋ, ಕಳ್ಳವರ್ತನೆ ಪ್ರತ್ಯಕ್ಷವಾಗಿ ಸಿಕ್ಕಿಬಿತ್ತೆಂದು ಎಲ್ಲೆಲ್ಲಿಯೂ ಹೇಳಿಕೊಳ್ಳುತ್ತಿದ್ದರು. ನಮಗೇನು ಬೇಕಾಗಿದೆ... 'ರೂಪಂ ಮಹತ್ತೇ'..."

ಮುತ್ತುಸ್ವಾಮಿ ಅಯ್ಯರ್: "ಯಾವನೊಂದಿಗೆ ಇಷ್ಟೆಲ್ಲ ಆದುದು ? ಆಂ !"

ದೀಕ್ಷಿತರು:- "ಅದೆಲ್ಲವನ್ನು ಏತಕ್ಕೆ ವಿಚಾರಿಸುತ್ತೀಯ ? ಒದೆದು ತಳ್ಳು ಕತ್ತೆಯನ್ನು. ಅದನ್ನು ಹೇಳುವ ನಾಲಿಗೆಗೆ ಕೂಡ ದೋಷವೆಂದು ಹೇಳುತ್ತಾರೆ ಸ್ಮೃತಿಕಾರರು. ಹೋದರೆ ಹೋಗುತ್ತದೆ. ಮಕ್ಕಳನ್ನು ಕಸಿದುಕೊಂಡು ಹೋಗಬಹುದು. ಹೆಂಡತಿಯನ್ನು ಕಸಿದುಕೊಂಡು ಹೋಗಬಹುದು. ಆದರೆ ಭಗವಂತನನ್ನು ಕಸಿದುಕೊಂಡು ಹೋಗಲಾದೀತೆ ? ಎಲ್ಲೆಲ್ಲಿಯೂ ವ್ಯಾಪಿಸಿದವನಾಗಿ, ಎಲ್ಲರಿಗೂ ಸಮಾನನಾಗಿ..." ಎಂದು ಹೇಳಿಕೊಳ್ಳುತ್ತಿರುವಾಗ ದೇವಿ ಸುಬ್ಬಮ್ಮ ಅವರಿದ್ದೆಡೆಗೆ ಬಂದು ಸೇರಿದಳು.

ದೀಕ್ಷಿತರೂ ಅವಳೂ ಕಲೆತು ಮಾತಾಡಿಕೊಂಡಿದ್ದಂತೆ ಅವರ ಮಾತು ಮುಗಿದ ಕೂಡಲೆ ಅದುವರೆಗೂ ಮರೆಯಲ್ಲಿದ್ದು ಗಮನಿಸುತ್ತಿದ್ದ ಅವಳು ಬಂದು ಸೇರಿದಳು. ಬಂದಕೂಡಲೆ, "ಮುತ್ತುಸ್ವಾಮಿ, ಏನಪ್ಪಾ ! ಮಗು ಹೋಯಿತು. ತಮ್ಮ ಹೋದ. ಇಷ್ಟು ಸಾಲದೆ ! ಆ ಪಾಪಿ ! ಮಹಾದೇವಿ

ಹಾಗೆ ಮಾಡಬೇಕೆ ? ಏನು ಹಣೇಬರಹ ! ಒಂದು ಮಗು ಹುಟ್ಟಿ ಹೀಗೆಲ್ಲ ಅವಸ್ಥೆ ಪಡಬೇಕೆಂದು ವರ ಕೇಳಿ ಬಂದೆ—" ಎಂದು ವಿಸ್ತಾರವಾಗಿ ಪ್ರಲಾಪಿಸಲು ತೊಡಗಿದಳು. ಮುತ್ತುಸ್ವಾಮಿ ಅಯ್ಯರ್‌ಗೆ ಅರೆಕೊರೆಯಾಗಿದ್ದ ಅಪನಂಬಿಕೆಯೂ ಈಗ ತೊಲಗಿತು. "ಹಾಗೆ ಮಾಡಿದಳೆ ! ಎಲೆ ಚಂಡಾಳಿ ! ಪಾಪಿ ! ಏನು ಮೋಸ ? ಯಾವ ಪೋಕರಿಯೊಂದಿಗೆ ಇಷ್ಟು ಅತ್ಯಾಚಾರ ಮಾಡೋದು ಈ ದುಷ್ಟ ಹೆಂಗಸು ?" ಎಂದು ಕೇಳಿದರು. ದೀಕ್ಷಿತರು : 'ಆ ಹೊಟ್ಟೆಯುರಿಯ ವಿಷಯ ಏತಕ್ಕೆ ಕೇಳುತ್ತೀಯ ! ಆ ಪೋಲಿ ಹುಡುಗ ನಾರಾಯಣಸ್ವಾಮಿ ಇದಾನೊ, ಇಲ್ಲವೋ—ಪೋಕರಿ, ನಾಟಕದ ಹುಡುಗ— ಅವನೊಂದಿಗೇ - ಶಿವ! ಶಿವ! ಎಷ್ಟು ದಿನದ ಬಳಕೆಯೋ! ಅವರಿಬ್ಬರಿಗೂ! ಏನು ಹಾಳೊ ! ಅಂದೇನೋ ಕೆಟ್ಟಕಾಲ, ಕಂಡು ಹಿಡಿದು ಬಿಟ್ಟರು. ಊರೆಲ್ಲ ಗುಲ್ಲಾಗಿ ಹೋಯಿತು ! ಪಾಪ ! ಪಾಪ !" ಎನ್ನಲು, ಸುಬ್ಬಮ್ಮ "ಅವನ ಜೊತೆಯಲ್ಲಿ ಇಷ್ಟುದಿನ ಊಯು (ರು) ಬಿಟ್ಟು ಓಡಿ ಹೋಗಿದ್ದಾಳೆ. ನಾನು ಬಯು (ರು) ವಾಗಲೇ ತಿಳಿದೇ ಹೋಗಿತ್ತು. ಎಲ್ಲಿಯಾದಯ್ಯೂ (ರೂ) ಇಬ್ಬಯೂ(ರೂ) ಓಡಿಹೋಗಿಯ(ರ)ಬೇಕೆಂದು ಹೇಳುತ್ತಿದ್ದಯು(ರು). ಈ ಬ್ರಾಹ್ಮಣಯು(ರು) ನನಗೆ ಮೊದಲೇ ಬಂದು ಬಿಟ್ಟಯು(ರು). ಅವಯು(ರು) ಬಂದು ಹತ್ತುದಿನಗಳಾಯ್ತು." ಎಂದು ಹೇಳಿ ಮುಗಿಸಲು ದೀಕ್ಷಿತರು, 'ಏನು, ಹತ್ತುದಿನಗಳೂಂತೀರಾ? ಭಾನುವಾರಕ್ಕೆ ಭಾನುವಾರ ಎಂಟು, ಒಂಬತ್ತು, ಹತ್ತು - ಇಂದಿಗೆ ಸರಿಯಾಗಿ ಹನ್ನೆರಡು ದಿನಗಳಾಯ್ತು. ನೊನ್ನೆ ತಾನೇ ನೀವು ಬಂದದ್ದು. ಸರಿ, ಹೊತ್ತಾಯಿತು. ದೇವರ ಜೊತೆಗೆ ಹೋಗಬೇಕು. ನೀನೂ ಬರ್‍ತೀಯಾ ?" ಎನ್ನಲು ಮುತ್ತುಸ್ವಾಮಿ ಅಯ್ಯರ್, "ಇಲ್ಲ — ನೀವು ಹೋಗಿ ಬನ್ನಿ." ಎಂದರು. ಅವರನ್ನು ಬಿಟ್ಟು ದೀಕ್ಷಿತರೂ ಸುಬ್ಬಮ್ಮನೂ ಹೊರಟರು.

ಆಗ ಮುತ್ತುಸ್ವಾಮಿ ಅಯ್ಯರ್ ಸ್ಥಿತಿ ಯಾವ ರೀತಿ ಇತ್ತೆಂದು ಹೇಳಲು ಸಾಧ್ಯವಿಲ್ಲ. "ಅಯ್ಯೋ! ಭಗವಂತನೆ! ನೀನು ಏತಕ್ಕೆ ನನ್ನನ್ನು ಹೀಗೆ ಪರೀಕ್ಷೆ ಮಾಡುತ್ತೀಯ! ಭಗವಂತನೆಂದು ನೀನೊಬ್ಬನು ಇರುವೆಯೊ ಅಥವಾ ಅದೂ ಸುಳ್ಳೊ? ಮಗುವನ್ನು ಕಳೆದುಕೊಂಡೆ, ಸಹೋದರನನ್ನು ಕಳೆದು

ಕೊಂಡೆ—ಆಸ್ತಿ ಎಲ್ಲವನ್ನೂ ಕಳೆದುಕೊಂಡೆ—ಅಷ್ಟು ಸಾಲದೆಂದು ನನ್ನ ಹೆಸರನ್ನೂ ನನ್ನ ಹೆಂಡತಿಯನ್ನೂ ಸಹ ಕಳೆದು ಕೊಳ್ಳಬೇಕೆ? ಅಯ್ಯೋ ರಾಕ್ಷಸಿ! ನನಗೆ ಯಮನಂತೆ ಬಂದೆಯಾ? ಇತ್ತೀಚೆಗೆ ನೀನು ಮಾತಾಡ ಇದ್ದಾಗ ನನಗೆ ಶಂಕೆ ಇತ್ತು! ಸಾಹಸಿ! ನನ್ನ ಕಾಲನ್ನು ಹಿಡಿದು ಕಟ್ಟಿ ಕೊಂಡು ಅತ್ತೆಯಲ್ಲ! ಚಂಡಾಳಿ! ಮುಖವನ್ನು ನೋಡು—ಮೂತಿಯನ್ನು ಗುದ್ದು! ಈ ಧೂರ್ತತನದ ಕಣ್ಣಿಗೆ ಚೆಲುವೇನು ಬೇಕಾಗಿದೆ? ಕೆನ್ನೆಯ ಮೇಲೆ ಹೊಡೆದು ಸಾಲಾಗಿರುವ ಆ ಹಲ್ಲುಗಳನ್ನು ಮುರಿಯಬೇಕು! ಶಿವ ಶಿವ! ನಾನು ಇವಳೊಂದಿಗೆ ಬಾಳಬೇಕೆ? ನಾನು ಅಲ್ಲಿದ್ದಿದ್ದರೆ ಒಂದು ಕೊಲೆ ಆಗುತ್ತಿತ್ತು. ನಿನ್ನನ್ನು ಏತಕ್ಕೆ ಕೊಲ್ಲಬೇಕು? ನಾನು ಸಾಯುತ್ತೇನೆ ನಿನಗೆ ಊರೆಲ್ಲ ಗಂಡಂದಿರು. ಸುಖವಾಗಿ ದೀರ್ಘ ಸುಮಂಗಲಿಯಾಗಿ, ಶಾಶ್ವತ ವಾಗಿ ಬಾಳು! ನೀನೇತಕ್ಕೆ ಸಾಯುವೆ?............ಅಯ್ಯೋ! ನಿನಗೂ ನನಗೂ.........ಹೀಗೆ ಕೊನೆಗಾಣಬೇಕೆ! ಬೂಟಾಟಿಕೆ! ಚಂಡಾಳಿ! ಪಾತಕಿ! ರಾಕ್ಷಸಿ!............ ಒಂದು ವೇಳೆ, ಸುಬ್ಬು ಹೇಳಿದುದು ಸುಳ್ಳಾಗಿರ ಬಹುದೇ! .........ದೀಕ್ಷಿತರು ಸುಳ್ಳು ಹೇಳಲಾರರಲ್ಲಾ! ಒಂದು ವೇಳೆ ಇಬ್ಬರೂ ಕಲೆತು ಮಾತಾಡಿ ಕೊಂಡಿರುವರೆಂದರೆ, ಅದರಿಂದ ಅವರಿಗೇನು ಲಾಭ? ನನಗೆ ಅವರು ವಿರೋಧಿಗಳೂ ಅಲ್ಲವಲ್ಲಾ! ಅವರು ಸುಳ್ಳು ಹೇಳೋದೂ ಅಂದರೇನು? ನಮ್ಮ ಅದೃಷ್ಟಕ್ಕೆ ಯಾವುದೂ ಅಸಾಧ್ಯವಲ್ಲ.'

ಹೀಗೆ ಅವರು ಯೋಚನೆ ಮಾಡುತ್ತಿದ್ದಾಗ ಶಿರುಕುಳದವರಾದ ನಾರಾಯಣ ಅಯ್ಯರ್ ಮುತ್ತುಸ್ವಾಮಿ ಅಯ್ಯರನ್ನು ಕಂಡಕೂಡಲೆ ದುಃಖದ ಧ್ವನಿಯಿಂದ ಯೋಗಕ್ಷೇಮಗಳನ್ನು ವಿಚಾರಿಸಲಾರಂಭಿಸಿದರು. ಮುತ್ತುಸ್ವಾಮಿ ಅಯ್ಯರ್‌ಗೆ ಇದ್ದ ಸಂದೇಹ ಪೂರ್ತಿಯಾಗಿ ನಿವೃತ್ತಿ ಆಯಿತು. ಈ ಪ್ರಪಂಚ ದಲ್ಲಿ ದೇವರು ಯಾವುದು—ದೈವ ಯಾವುದು? ಒಳ್ಳೆಯವರಿಗೆ ಕಾಲವಿಲ್ಲ. ಕೊಲೆ, ವ್ಯಭಿಚಾರ, ಕಳ್ಳತನ—ಇವೇ ಈ ಪ್ರಪಂಚಕ್ಕೆ ಯೋಗ್ಯವಾದ ಕಸು ಬುಗಳು. ಯಾವ ಪಾಪವನ್ನೂ ಅರಿಯದ ನನಗೆ ಹೀಗೆ ಆಪತ್ತಿನ ಮೇಲೆ ಆಪತ್ತು ಬರಬೇಕೆ? ದೇವರಿಗೆ ಕಣ್ಣು ಹಿಂಗಿ ಹೋಯಿತೇ! ಅಯ್ಯೋ! ದೈವವೇ! ದೇವರಿಲ್ಲವೆಂಬುದು ಖಚಿತವಾಯಿತು. ಇನ್ನು ಮುಂದೇನು? ಇದ್ದ

ೇನು, ಹೋದರೇನು? ಕತ್ತಲಾದ ಕೂಡಲೆ ನಾಲಿಗೆಯನ್ನು ಕಿತ್ತು ಪ್ರಾಣ ನ್ನು ಬಿಡುತ್ತೇನೆ. ಇರುವುದು ಒಬ್ಬ ಹುಡುಗಿ— ಆ ಕತ್ತೆಯನ್ನು ನ್ನೊಂದು ಹುಡುಗನಿಗೆ ತೊಲಗಿಸಿದ್ದಾಯಿತು. ತಾಯಿಯಂತೆ ಮಗಳು. ್ರೀನಿವಾಸ! ಜಾಗ್ರತೆ! ನನ್ನಂತೆ ಮೋಸ ಹೋಗಬೇಡ. ಚೆನ್ನಾಗಿ ಬೆಳಗಾ ಯಿತು. ಈ ಹೊತ್ತು! ಹೋಗಲಿ! ನನ್ನ ಆಯುಷ್ಯದ ಕಡೆಯ ದಿನವಾಗಿ ಯಲ್ಲವೆ? ಒಳ್ಳೆಯ ದಿನವೇ ಇದು! ಸನ್ಯಾಸವಾಯಿತು, ಕತ್ತೆ ಆಯಿತು! ಲೆ ಬೋಳಿಸಿಕೊಂಡು ಹಾಗಾದರೂ ಯಾರನ್ನು ಕಾಪಾಡಬೇಕು? ಗುಡಿ ರೇನು—ಕೊಳವೇನು? ಎಲ್ಲವನ್ನೂ ಬೆಂಕಿ ಹಾಕಿ ಸುಡು! ಕತ್ತೆಯನ್ನು. ಣ್ಣುತುಂಬ ಇರುವ ಆಕಾಶವೆ! ನಿನಗೂ ಕಣ್ಣು ಕಾಣಲಿಲ್ಲವೆ! ನಿನ್ನ ಸಿಡಿಲು ಳು ಎಲ್ಲಿ ಮರೆಯಾಗಿರುವುವು? ಈ ಕೆಲಸಕ್ಕೆ ಬಾರದ ಹುಳುಗಳನ್ನು ಒಂದು ಡಿಲು ಬಿದ್ದು ಧ್ವಂಸ ಮಾಡಬಾರದೆ?" ಎಂದು ತನ್ನೊಳಗೇ ಹೇಳಿಕೊಳ್ಳುತ್ತ ಾರಿ ಹಿಡಿದು ಸಾಗಿದರು.

ಅಂದು ಅವರು ಊಟ ಮಾಡಲಿಲ್ಲ. "ಈ ನಾಚಿಕೆಗೆಟ್ಟ ಕಾಷ್ಟಕ್ಕೆ ನ್ನಬೇಕೆ? ಆ ಕತ್ತೆರಂಡೆಯನ್ನು ಮುಟ್ಟಿದ ಈ ಕಾಷ್ಟವನ್ನು ಎಲ್ಲಿ ಕೊಂಡು ೋಗಿ ಸುಟ್ಟರೂ ಪಾಪ ಹೋಗಲಾರದಲ್ಲ! ಈ ಹೆಣಕ್ಕೆ ಪಿಂಡ ಬೇರೆ ಾಕಬೇಕೆ?" ಎಂದು ಹೇಳುತ್ತ ಹಗಲೆಲ್ಲವೂ ಒಂದು ತೋಪಿನಲ್ಲಿ ಬಿದ್ದು ೊಂಡಿದ್ದರು. ಹಸಿವು, ಒಳ್ಳೆಯ ಹಸಿವು. "ಆಗಬೇಕು—ಈ ಕಷ್ಟಕ್ಕೆ ೀರು ಕೂಡ ಕೊಡಲಾರೆ" ಎಂದು ವೈರಾಗ್ಯದಿಂದ ನೀರನ್ನೂ ಸಹ ಕುಡಿ ಯದೆ ಇದ್ದರು. ಆ ತೋಪಿನಲ್ಲಿ ತಣ್ಣನೆ ಗಾಳಿ ಬೀಸಿತು. "ಛಿ! ಕತ್ತೆ! ಈ ಗಾಳಿ ಯಾರಿಗೆ ಬೇಕಾಗಿದೆ? ಈ ಪ್ರಪಂಚದ ಪೋಕರಿ ಹುಳುಗಳಿಗೆ ಂಪಾದ ಗಾಳಿಬೇರೆ ಬೇಕೆ?" ಎಂದು ಹೇಳಿ ಆ ಸ್ಥಳವನ್ನು ಬಿಟ್ಟು ಗಾಳಿ ೀಸದ ಉಷ್ಣವಾದ ಒಂದು ಜಾಗಕ್ಕೆ ಹೋಗಿ ಕುಳಿತರು. ಅಲ್ಲಿ ಕೆಲವು ಳಿಗಳು ಸರಸ ಸಲ್ಲಾಪಗಳನ್ನು ಮಾಡಲು ಬಂದುವು. ಅವರು ಛೀ! ದರಿದ್ರ ೆಣಗಳೆ! ಊರೆಲ್ಲ ವ್ಯಭಿಚಾರ ನಡಿದಿದೆ! ನಿಮಗೇನು ಬೇಕಾಗಿದೆ. ಈ ಸರಸ ಲ್ಲಾಪ? ಈ ವಿನೋದ" ಎಂದು ಒಂದು ಕಲ್ಲನ್ನು ಎತ್ತಿ ಬೀಸಲು ಅವು ಹಾರಿ ೋದವು. "ಮನುಷ್ಯನಿಗೆ ಈ ಪ್ರಪಂಚವೇ ಸರಿಯಾದ ಜಾಗ. ಎಲ್ಲಾ

ಜನರೂ ವ್ಯಭಿಚಾರ ಮಾಡಿರೊ! ಮದುವೆ ಯಾಕೆ ಮಣ್ಣು ಯಾಕೆ? ಎಲ್ಲಾ ಮೂದೇವಿಗಳೂ ತಟವಾಣಿತನ ಮಾಡಿಕೊಳ್ಳಲಿ! ಕಳ್ಳತನ, ತಿವಿಯೋದು ಕೊಲ್ಲುವುದು—ಎಲ್ಲವೂ ವಿನೋದಗಳೆ! ಈ ಪ್ರಪಂಚಕ್ಕೆ ಅದೇ ಸರಿ" ಎಂದ ಹೀಗೆ ತಮ್ಮಲ್ಲಿಯೇ ಬೊಗಳುತ್ತ ಹಗಲೆಲ್ಲ ಕಳೆದರು.

ಕಮಲಾಬಾಂಳ್ ಒಂದೊಂದು ನಡವಳಿಕೆಯನ್ನೂ ನೆನಪಿಗೆ ತಂದುಕೊಂಡ "ನಗುವನ್ನು ನೋಡು—ನಗುವನ್ನು! ಮುಖ ಗುಲಾಬಿ ಹೂವಿನಂತೆ ಇದ ಯಂತೆ—ಹಾಗೆ ಜ್ಞಾಪಕ—ನಾರಾಯಣ ಸ್ವಾಮಿ ಮುದ್ದಿಡಲು ನನ್ನನ್ನು ಮುದ್ದಿಟ್ಟು ಪಳಗಿಸಿಕೊಂಡು ನೋಡುತ್ತೀಯಾ? ಛೀ! ನಾಯಿ! ಮೇಲ ಕೈಯ್ಯನ್ನು ಹಾಕಬೇಡ! ನಾಚಿಕೆ ಇಲ್ಲದ ಕತ್ತೆ! ಅಳುತ್ತೀಯ, ಅಳು ಒಬ್ಬ ಗಂಡನ ಕೈಕೆಳಗೆ ಇರಬೇಕಲ್ಲಾ ಎಂತ ಅಳುತ್ತೀಯಾ? ಅಳು!"— ಹೀಗೆ ಒಂದೊಂದು ಸಂದರ್ಭವನ್ನು ಅವಳಿಗೆ ವಿರೋಧವಾಗಿ ವ್ಯಾಖ್ಯಾನಮಾಡಿ ಮನಸ್ಸಿನಲ್ಲಿ ತೋರಿದಂತೆಲ್ಲ ಅವಳನ್ನೂ ಬೈದರು. ಅನಂತರ ಅಸ್ತಮಿಸಿದ ಕೂಡಲೆ ಎದ್ದು, "ಹಾಡುವ ಹಕ್ಕಿಗಳೇ, ಬೀಸುವ ಗಾಳಿಯೇ, ಅರಳುವ ಹೂಗಳೇ ಚಿಗುರುವ ಮರಗಳೇ, ನೀವೇ ಈ ಪ್ರಪಂಚದಲ್ಲಿ ಒಳ್ಳೆಯವರು. ನಿಮ್ಮನ್ನು ಎಷ್ಟು ಕ್ರಿಮಿಗಳು ಹಿಂಸಿಸುತ್ತವೆ? (ಒಂದು ಬಾಡಿ ಹೋದ ಹೂವನ್ನು ತೆಗೆದುಕೊಂಡು) ಈ ಹೂ ಯಾರನ್ನು ಏನು ಮಾಡಿತು? ಇದಕ್ಕೆ ಆಗಿರುವ ಗತಿ ನೋಡು! ಹೀಗೆಯೇ ನೀವೆಲ್ಲರೂ ಶೀಘ್ರದಲ್ಲಿಯೇ ನಾಶವಾಗಲೇ ಬೇಕು ನಾನು ತೊಲಗಿ ಹೋಗುತ್ತೇನೆ. ನಿಮಗೆ ಅನೇಕ ವಂದನೆಗಳು. ಶೀಘ್ರವಾಗ ಈ ಹಾಳು ಪ್ರಪಂಚವನ್ನು ಬಿಟ್ಟು ದೂರ ಸರಿಯಿರಿ." ಎಂದು ಒಂದೊಂದು ಮರಕ್ಕೂ ಬುದ್ಧಿವಾದ ಹೇಳಿ ಅದನ್ನು ಬಿಟ್ಟು ಹೊರಟು ಊರಿನ ಮಧ್ಯ ಬರಲು, "ಕೊಲೆಗಾರರ ಕೂಟ—ತಟವಾಣಿಯರ ಗುಂಪು" ಎಂದು, ಓಲಗದ ಧ್ವನಿಯನ್ನು ಕೇಳಿದ ಕೂಡಲೆ ಕಿವಿಯನ್ನು ಮುಚ್ಚಿಕೊಂಡು, ಸ್ತ್ರೀಯರು ಎದುರಿಗೆ ಬಂದರೆ ಕಣ್ಣನ್ನು ಮುಚ್ಚಿಕೊಂಡು, ನರಕಲೋಕದ ಮಧ್ಯ ಹೋಗುತ್ತಿದ್ದವನಂತೆ ಭರಭರನೆ ನಡೆಯುತ್ತ, "ನಿಮಗೂ ನಮಗೂ ಇರುವ ಋಣಾನುಬಂಧ ಇಂದಿಗೆ ಹರಿಯಿತು. ನಾಳೆ ನೀವೆಲ್ಲಿಯೊ—ನಾನೆಲ್ಲಿಯೊ? ನಿಮ್ಮನ್ನು ಬಿಟ್ಟು ಅಗಲುವುದರಲ್ಲಿ ಒಂದು ತೊಟ್ಟು ಕಣ್ಣೀರನ್ನೂ ಸಹ

ನಾನು ಬಿಡಲಾರೆ. ಚಿದಂಬರವಂತೆ ! ಚಿದಂಬರ ! ಬರಿ ಬಯಲೆಂದು ಅರ್ಥ ! ಏನೂ ಇಲ್ಲ ! ದೇವರೂ ಇಲ್ಲ ! ಅದೇ ಚಿದಂಬರ ! ಈ ಹಾಳು ಪ್ರಪಂಚ ವನ್ನು ಬಿಟ್ಟು ಹೋಗುತ್ತೇನೆ. ನಮ್ಮ ಭಾಗ್ಯವಾದರೂ ಎಂತಹುದು ? ಆಮೇಲೆ ಕೆಟ್ಟುಹೋಗಲು ಹೆಂಡತಿಯೂ ಇಲ್ಲ. ಕಳೆದುಕೊಳ್ಳಲು ಮಕ್ಕಳೂ ಇಲ್ಲ. ನಮ್ಮ ಭಾಗ್ಯವೇ ಭಾಗ್ಯ !" ಎಂದು ಸಂತೋಷ ಪಡುತ್ತ ಗುಡಿಯ ಪಕ್ಕದಲ್ಲಿದ್ದ ಒಂದು ಪಾಳು ಮಂಟಪಕ್ಕೆ ಹೋದರು.

ಅಲ್ಲಿ ಹಾವುಗಳಿರುವವೆಂದು ಜನಗಳು ಅದರ ಹತ್ತಿರ ಸುಳಿಯುತ್ತಿರಲಿಲ್ಲ. ಕತ್ತಲೆಯಾದ ಕೂಡಲೆ ಆ ಮಂಟಪದೊಳಗೆ ಹೋಗಿ ಮಲಗಿಕೊಂಡು, "ಮರ್ಯಾದೆಯಿಂದ ನನ್ನನ್ನು ಹಾವು ಕಡಿದರೆ ಕಡಿಯಲಿ-ಇಲ್ಲವೆ ಕೈ ಇದೆ, ಕತ್ತು ಇದೆ - ನೋಡಿಕೊಳ್ಳುತ್ತೇನೆ." ಎಂದು ಹೇಳುತ್ತ ಮಲಗಿದರು. "ಬೇಗ ಕತ್ತಲೆಯಾಗುವುದಿಲ್ಲವಲ್ಲಾ — ಈ ಹಾಳು ಬೆಳಕು ಯಾರಿಗೆ ಬೇಕಾಗಿದೆ ?" ಎಂದು ಹೇಳಿ ಮಲಗಿದ್ದು, ಸ್ವಲ್ಪ ಹೊತ್ತಾದ ಮೇಲೆ ಬೇಕಾ ದಷ್ಟು ಕತ್ತಲೆ ಆಗಿದ್ದರಿಂದ ಎದ್ದು ಗೋಡೆಯಲ್ಲಿ ಮೊಳೆ ಹೊಡೆದು ಒಂದು ಹಗ್ಗವನ್ನು ಅದಕ್ಕೆ ಕಟ್ಟಿ ತನ್ನ ಕತ್ತಿನಲ್ಲಿ ಸುರುಳಿ ಹಾಕಿಕೊಂಡು "ದರಿದ್ರ ಲೋಕವೇ ! ನಾನು ಹೋಗಿ ಬರುತ್ತೇನೆ ! ಎಲೆ ಮಗು ಕಲ್ಯಾಣೀ ! ನಿಮ್ಮ ಅಮ್ಮ ಮುತ್ತುಸ್ವಾಮಿಯನ್ನು ಎಚ್ಚರಿಸಿದಂತೆ ನೀನೂ ಶ್ರೀನಿವಾಸನನ್ನು ಎಚ್ಚರಿಸು ! 'ಮುತ್ತುಸ್ವಾಮಿ' ಎಂಬ ಹೆಸರು ಇಂದಿಗೆ ಮುಗಿದು ಹೋಯಿತು." ಎಂದು ಹೇಳಿ ತೂಗಾಡಲು ಪ್ರಾರಂಭಿಸಿದರು. ಆಗ ತಕಾರನೆ "ಮುತ್ತುಸ್ವಾಮಿಾ ! ಮುತ್ತುಸ್ವಾಮಿಾ ! ಮುತ್ತುಸ್ವಾಮಿಾ !" ಎಂದು ಮೂರು ಸಲ ಒಂದು ಧ್ವನಿ ಕೇಳಿಸಿತು. "ಎಲ್ಲಿಂದ ಬಂತು ಧ್ವನಿ ? ಆ ವೇಳೆ ಯಲ್ಲಿ ತನ್ನನ್ನು ಬಲ್ಲವರು ಯಾರಿರಬಹುದು ?" ಎಂದು ಸುತ್ತುಮುತ್ತಲೂ ನೋಡಿದರು. ಏನೂ ಕಾಣಿಸಲಿಲ್ಲ. ಶಬ್ದವೂ ಇಲ್ಲ—ಏನೂ ಇಲ್ಲ "ನಮ್ಮ ಮನಸ್ಸು ನಮ್ಮನ್ನೇ ಭ್ರಾಂತಿಗೊಳಿಸುತ್ತದೆ." ಎಂದು ಹೇಳಿ ಮತ್ತೆ ಕತ್ತಿ ನಲ್ಲಿದ್ದ ಸುರಳಿಯನ್ನು ಮತ್ತಷ್ಟು ಬಿಗಿಮಾಡಲು ಯತ್ನಿಸಿದರು. ಮತ್ತೊಮ್ಮೆ "ಮುತ್ತುಸ್ವಾಮಿ ! ಮುತ್ತುಸ್ವಾಮಿ ! ಹುಚ್ಚಾ !" ಎಂದು ಮೂರು

ಶಬ್ದಗಳು ಸ್ಫುಟವಾಗಿ, ಸಂದೇಹಕ್ಕೆ ಸ್ವಲ್ಪವೂ ಅವಕಾಶವಿಲ್ಲದಂತೆ ಕೇಳಿಸಿದುವು.

## ೨೫. ವಿಶ್ವರೂಪ ದರ್ಶನ

ಮುತ್ತುಸ್ವಾಮಿ ಅಯ್ಯರ್ ಸುತ್ತು ಮುತ್ತು ನೋಡಿದರು. ಯಾವ ಕಾರಣವೂ ಗೋಚರವಾಗಲಿಲ್ಲ. ಇದ್ದಕ್ಕಿದ್ದಂತೆ ಆ ವೇಳೆಯಲ್ಲಿ ಈ ಶಬ್ದ ಕೇಳಿದ ಕೂಡಲೆ ಅವರಿಗೆ ಬಹಳ ಭಯವಾಯಿತು. ಕತ್ತಿನಲ್ಲಿದ್ದ ಸುರಳಿಯನ್ನು ಜಾರಿಸಿಕೊಂಡರು. ಕೈಕಾಲುಗಳು ನಡುಗಿದವು. ಎದೆ ಡಬ ಡಬ ಹೊಡೆದು ಕೊಂಡಿತು. ಮೈಯಲ್ಲೆಲ್ಲ ರೋಮಾಂಚವಾಯಿತು. ತನ್ನ ಅರಿವಿಲ್ಲದೆಯೇ ಕೈಯನ್ನು ತಟ್ಟಿ ಹೊರಗೆ ಓಡಲು ಯತ್ನಿಸಿದರು. ಅಷ್ಟರಲ್ಲಿ ಮತ್ತೆ "ಮುತ್ತುಸ್ವಾಮಿ! ಭಯಪಡಬೇಡ. ಹುಚ್ಚಾ! ಹೀಗೆ ಭಯ ಬೀಳುವರೆ?" ಎಂದು ಬಹು ಹಿತವಾದ ಒಂದು ಧ್ವನಿ ಕೇಳಿಸಿದುದು ಮಾತ್ರವಲ್ಲದೆ—ಆ ಮಂಟಪವೆಲ್ಲವೂ ಹೊಂಬೆಳಕಿನಿಂದ ಕೂಡಿದಂತೆ ಕಂಡಿತು. ಆ ಪ್ರಕಾಶದ ಮಧ್ಯೆ ಒಂದು ಎತ್ತರವಾದ ಶಿಲಾ ವಿಮಾನದ ಮೇಲೆ ಯಾರೋ ದಿವ್ಯ ಮಂಗಳ ಸ್ವರೂಪವನ್ನು ತಾಳಿದ ಮಹಾ ಪುರುಷರೊಬ್ಬರು, ತನ್ನ ಒಂದು ಪುಣ್ಯ ಹಸ್ತದಿಂದ, ಕೆಂಪು ಆಕಾಶದಂತೆ ಸುಂದರವೂ,ಮನೋಹರವೂ, ಆದ ಜಟಾಭಾರವುಳ್ಳ ತನ್ನ ಉತ್ತಮಾಂಗವನ್ನು ಎತ್ತಿ ಧಾರಣೆ ಮಾಡಿಕೊಂಡು ಮತ್ತೊಂದು ಹಸ್ತವನ್ನು ಮೊಳಕಾಲಿನವರೆಗೆ ದೀರ್ಘವಾಗಿ ನೀಡಿ ಕ್ಷೀರಾಬ್ಧಿಯಲ್ಲಿ ಆದಿ ಅಂತವಿಲ್ಲದೆ ಜಗನ್ನಿವಾಸನಾದ ಸಾಕ್ಷಾತ್ ಭಗವಂತನು ಲಕ್ಷ್ಮೀ ಸಮೇತನಾಗಿ ಅನಂತಶಯನನಾಗಿ ಯೋಗನಿದ್ರೆಯಲ್ಲಿ ಪವಡಿಸುವಂತೆ ಬಹು ಗಂಭೀರವಾಗಿ ಮಂಡಿಸಿದ್ದರು.

ಪ್ರೇಮಮಯವಾಗಿ ಬೆಳಗುವ ಅವರ ಮುಖ, ತಂಪಾದ ಮೃದು ಕಾಂತಿಯೊಡನೆ, ಎಳೆಯ ಚಂದ್ರನಂತೆ ಎಲ್ಲರಲ್ಲಿಯೂ ಪ್ರೀತಿಯನ್ನು ಪ್ರಚೋದಿಸತಕ್ಕ ಅದ್ಭುತ ವಶೀಕರಣ ಶಕ್ತಿ ಅವರಲ್ಲಿದ್ದಂತಿತ್ತು. ಪರಿಶುದ್ಧವಾದ ಜಲದಲ್ಲಿ ಜನ್ಮತಾಳಿ, ಕ್ರಿಮಿ ಕೀಟಾದಿಗಳ ಹಿಂಸೆಗೆ ಗುರಿಯಾಗದೆ ವೇದಾಂತ

ಉಪಮಾನಗಳಿಗೆ ಅವಕಾಶ ಕೊಡದಂತೆ, ತಂಪಾಗಿ ಹರಡಿಕೊಂಡು, ಅರಳಿ, ನಿರ್ಲಿಪ್ತವಾಗಿ, ಭ್ರಾಂತಿರಹಿತವಾಗಿ, ಅನುಭವಿಸುವ ಎಲೆಗಳ ಮಧ್ಯೆ ಉತ್ತಮ ಬಾಳ್ವೆಯ ಲಕ್ಷಣವನ್ನು ಸೂಸುತ್ತ ಗಂಭೀರವಾದ ಗಂಡು ಗುಣಗಳಿಂದ* ಕೂಡಿ, ಮೇಲೆ ಮುಖಮಾಡಿ, ವಿಕಸಿತವಾಗಿ, ಮಂದವಾದ ಗಮನದ ಸುಂದರವಾದ ತಾವರೆ ಹೂವಿನಂತೆ ನಿರ್ವಿಚಾರವೂ, ಪರಿಶುದ್ಧವೂ, ಗೌರವವೂ, ಮೃದುತ್ವವೂ, ಸೌಂದರ್ಯವೂ, ಶ್ರೇಷ್ಠತ್ವವೂ, ಉತ್ಸಾಹವೂ,—ಎಲ್ಲವೂ ಸೇರಿಕೊಂಡು ನಲಿಯುತ್ತ ನಗುತ್ತ ಪೂರ್ತಿಯಾಗಿ ಅರಳಿ ಪ್ರಕಾಶಮಾನವಾಗಿ ನಿಂತಿತ್ತು. ಅವರ ಎತ್ತರವಾದ ಶಿರಸ್ಸೂ, ವಿಶಾಲವಾದ ಹಣೆಯೂ, ಅವರ ನಿಕಟವಾಗಿದ್ದ ಹುಬ್ಬುಗಳೂ, ಸ್ವಲ್ಪ ಬಾಗಿದ ಕಪೋಲವೂ ಜ್ಞಾನವನ್ನೂ ಅದರಿಂದುಂಟಾಗುವ ಶಾಂತಿಯನ್ನೂ ವ್ಯಕ್ತಪಡಿಸುತ್ತಿದ್ದವು. ಅವರ ಕೆಂದಾವರೆಯನ್ನು ಹೋಲುವ ತುಟಿಗಳು ಸದಾ ಮುಗುಳ್ನಗೆಯಿಂದ ಶೋಭಿಸುತ್ತ ಅವರ ಆನಂದವನ್ನು ಬೆಳಗುತ್ತಿತ್ತು. ಅವರ ಕಣ್ಣುಗಳಾದರೊ ವಟವೃಕ್ಷದ ನೆರಳಿನಂತೆ ತಮ್ಮ ಆಶ್ರಯವನ್ನು ಬಯಸಿ ಬಂದವರಿಗೆಲ್ಲರಿಗೂ ಅದ್ಭುತವಾದ ತಂಪನ್ನೀಯುವ ಅಲೆಗಳಿಂದ ಕೂಡಿದ ಕರುಣಾಸಮುದ್ರವಾಗಿತ್ತು.

ಮುತ್ತುಸ್ವಾಮಿ ಅಯ್ಯರ್‌ಗೆ ಉಂಟಾಗಿದ್ದ ಭಯವೆಲ್ಲ ಈ ದೃಶ್ಯವನ್ನು’ ಕಂಡು ಸೂರ್ಯನನ್ನು ಕಂಡ ಕತ್ತಲೆಯಂತೆ ಹಾರಿಹೋಯಿತು. ಸಾಕ್ಷಾತ್

---

ಪುಷ್ಪಗಳಲ್ಲಿ ತಾವರೆ ಅರಸು. ಗುಲಾಬಿಯೂ, ಕನ್ನೈದಿಲೆಯೂ ರಾಣಿಗಳು. ಗುಲಾಬಿಯ ಹೊಳಪು ತಾವರೆಗೆ ಇಲ್ಲ. ತಾವರೆಯ ಗಾಂಭೀರ್ಯ ಗುಲಾಬಿಗೆ ಇಲ್ಲ. ತಾವರೆಯ ಸೌಂದರ್ಯ ಗಂಡಸರ ಸೌಂದರ್ಯ. ಗುಲಾಬಿಯ ಸೌಂದರ್ಯ ಸ್ತ್ರೀಯರ ಸೌಂದರ್ಯ. ತಾವರೆ ಪೂಜೆಗೆ ಯೋಗ್ಯವಾದುದು. ಗುಲಾಬಿ ಭೂಷಣಕ್ಕೆ ಯೋಗ್ಯವಾದುದು. ಆನೆ, ಗರುಡ, ತಾವರೆ—ಒಂದು ವರ್ಗ. ತಾವರೆಯ ಗುಣ ಕಲ್ಯಾಣ ಗುಣ. ಗುಲಾಬಿಯ ಗುಣ ನಾಯಕ ನಾಯಿಕೆಯರ ಸರಸ ಸಲ್ಲಾಪ ಗುಣ. ಪರಿಶುದ್ಧತೆ ತಾವರೆಯ ವಿಶೇಷ: ಸೌಂದರ್ಯ ಗುಲಾಬಿಯ ವಿಶೇಷ: ತಾವರೆಯ ವಾಸನೆ ಗಂಡಸರ ವಾಚಾಲತ್ವದಂತೆ—ಗುಲಾಬಿಯ ವಾಸನೆ ಸ್ತ್ರೀಯರ ವಾಚಾಲತ್ವದಂತೆ. ಗುಲಾಬಿಯೂ, ಕನ್ನೈದಿಲೆಯೂ, ಉತ್ತಾನಪಾದ ಪತ್ನಿಯರಾದ ಸುನೀತಿ, ಸುರುಚಿಯರಂತೆ.

ಪರಶಿವನೇ ಪೂರ್ವದಲ್ಲಿ ಸುಂದರಮೂರ್ತಿ ಸ್ವಾಮಿಗಳನ್ನು ಬಲವಂತವಾಗಿ ತಡೆದಂತೆ, ತನ್ನನ್ನು ತಡೆಯಲು ಈ ವಿಧವಾದ ಮಧುರ ಸ್ವರೂಪದಿಂದ ಅನುಗ್ರಹಿಸಿದಂತೆ ಅವರಿಗೆ ತೋರಿತು. ಅವರು ಆನಂದ ಪರವಶರಾಗಿ ತಲೆಯ ಮೇಲೆ ಕೈಗಳನ್ನು ಜೋಡಿಸಿ "ದೇವಾ! ನಾನು ಮಾಡಿದುದು ಅಪರಾಧ! ಕ್ಷಮಿಸಬೇಕು, ದೇವಾ! ದಾಸನಿಗೆ ಏನೂ ತಿಳಿಯಲಿಲ್ಲ. ಚಿತ್ತಭ್ರಮಣೆ ಯಾಗಿ ಹಾಗೆ ಮಾಡಿದುದು ಅಪರಾಧ! ಕ್ಷಮಿಸಬೇಕು." ಎಂದು ತೊದಲ್ನುಡಿ ಯಿಂದ ಹೇಳಿ ಸಾಷ್ಟಾಂಗ ನಮಸ್ಕಾರ ಮಾಡಿದರು. ಭಗವಂತನು ಮುತ್ತುಸ್ವಾಮಿ ಅಯ್ಯರನ್ನು ತನ್ನ ಸಮೀಪಕ್ಕೆ ಬರಹೇಳಿ, ಚೆನ್ನಾಗಿ ಆಶೀರ್ವದಿಸಿ ತನ್ನ ಬಲದ ಶುಭಹಸ್ತದಿಂದ ಅವರನ್ನು ತಡವಿ "ಹುಚ್ಚಾ! ಮಗು! ಏನೂ ತಿಳಿಯಲಿಲ್ಲವೇ! ಆತುರ ಪಡಬಹುದೇನಪ್ಪಾ! ತಾಳ್ಮೆ ತಂದುಕೊ! ಅದಕ್ಕಿಂತಲೂ ಮೇಲಾದ್ದು, ನಾವು ಈ ಲೋಕದಲ್ಲಿ ಮಾಡ ಬಹುದಾದುದು ಏನೂ ಇಲ್ಲವೆ? ಉಂಟು ಎಂದು ಹೇಳುವುದಕ್ಕೂ ನಮಗೆ ಅಧಿಕಾರ ಇಲ್ಲವಪ್ಪಾ! ಸಂಜೆ ಸಂಧ್ಯಾವಂದನೆ ಮಾಡಿದೆಯೊ, ಮುತ್ತುಸ್ವಾಮಿ?" ಎಂದು ಬಹು ಮೃದುವಾಗಿ ಕೇಳಲು, ಮುತ್ತುಸ್ವಾಮಿ ಅಯ್ಯರ್ ಬಹಳ ನಾಚಿಕೊಂಡು ತಲೆಯನ್ನು ತಗ್ಗಿಸಿ ಮೌನವಾಗಿ ನಿಲ್ಲಲು, ಭಗವಂತನು, "ಗುಡಿಯಲ್ಲಿ ತಾವರೆ ಕೊಳವಿದೆ. ಅಲ್ಲಿಗೆ ಹೋಗಿ ಸಂಧ್ಯಾವಂದನೆ ಮಾಡಿ, ಜಪವನ್ನು ಮಾಡಿಕೊಂಡು ಬಾ! ಧೈರ್ಯವಾಗಿರು. ಭಯ ಪಡಬೇಡ!" ಎಂದು ಹೇಳಿದರು.

ಮುತ್ತುಸ್ವಾಮಿ ಅಯ್ಯರ್ ಹಾಗೆಯೇ ಎದ್ದು ಮತ್ತೆ ನಮಸ್ಕರಿಸಿ ತಿರುಗಿ ಬರುವುದರೊಳಗೆ ಎಲ್ಲಿ ಮರೆಯಾಗುವರೊ, ನಾವು ಅವರನ್ನು ಚೆನ್ನಾಗಿ ಇನ್ನೂ ಅರಿಯಲಿಲ್ಲವಲ್ಲ ಎಂಬ ಸಂದೇಹವನ್ನು ಮನಸ್ಸಿನಲ್ಲಿ ತಾಳಿ ಭಗವಂತನ ದಿವ್ಯಮಂಗಳ ಸ್ವರೂಪದಲ್ಲಿ ಮಗ್ನರಾಗಿ, ಆ ಪರಿಶುದ್ಧವಾದ ದೃಶ್ಯದಿಂದ ಕಣ್ಣುಗಳನ್ನು ಬೇರೆ ಕಡೆ ಎಳೆಯಲಾರದೆ ಭ್ರಮಿಸುತ್ತ ನಿಲ್ಲಲು ಭಗವಂತನು, "ಏನೂ ಯೋಚಿಸಬೇಡ! ಹೋಗು! ಹೋಗಿ ಬೇಗ ಬಾ! ಬೇರೆ ಎಲ್ಲಿಯೂ ನಿಲ್ಲಬೇಡ" ಎಂದು ಆಜ್ಞೆ ಮಾಡಲು ಮುತ್ತುಸ್ವಾಮಿ ಅಯ್ಯರ್ ತಿರುಗಿ ತಿರುಗಿ ನೋಡುತ್ತ ತಾವರೆ ಕೊಳಕ್ಕೆ ಹೋಗಿ ನೀರನ್ನು

ನೋಡಿದರು. ಅದು ಬಹು ತಿಳಿಯಾಗಿತ್ತು. ಅದರಲ್ಲಿ ನಕ್ಷತ್ರಗಳು ಕಂಡವು. ತಿಳಿಯಾದ ಮನಸ್ಸಿಗೆ ದೇವರೂ ಹೀಗೆಯೇ ಕಾಣುವನೊ ?"—ಎಂದು ಹೇಳಿ ತಲೆ ಎತ್ತಲು ಪ್ರಾಪಂಚಿಕ ಚಿಂತೆಗಳು ಯಾವುದೂ ಇಲ್ಲದವರಾಗಿ ನಕ್ಷತ್ರಗಳನ್ನು ನೋಡಿದರು. "ಎಲೆ ಗೋಳೇ ! ನಿಮ್ಮ ಮೌನವಾದರೂ ಎಂತಹ ಮೌನ ! ಮನುಷ್ಯನು ಇಲ್ಲಿ ಬಿದ್ದು ಸಾಯಲೂ ಆರದೆ ಬದುಕಲೂ ಆರದೆ ಪೇಚಾಡುತ್ತಾನೆ. ಏನು ನಿರ್ವಿಚಾರ ನಿಮಗೆ !" ಎಂದು ಹೇಳಿ–"ಸಾಯಲೂ ಕೂಡ ನಮಗೆ ಅನುಕೂಲವಾಗಲಿಲ್ಲವೆ ? ಪ್ರಾಣವನ್ನು ಬಿಟ್ಟು ಓಡಿಹೋಗುತ್ತೇನೆಂದರೆ ಅದಕ್ಕೂ ತಡೆಯೆ ? ನಮಗೆ ಇನ್ನು ಏನು ಅನರ್ಥಗಳು ಉಳಿದಿವೆಯೊ ? ಇನ್ನು ನೋಡೋಣ, ಈ ಮಹಾಪುರುಷರು. ಅವರು ಯಾರು, ನಾವು ಯಾರು ? ಹೇಗೆ ಬಂದು ಹೋಯಿತು ! ದೇವರಿಲ್ಲವೆಂದು ಹೇಳಲು ಸಾಧ್ಯವೆ ? ನಾವು ಪಾಪ ಮಾಡಿ, ಕಷ್ಟಪಟ್ಟರೆ, ಅದಕ್ಕೆ ದೇವರೇ ಹೊಣೆಯೇ ! ಹಗಲೆಲ್ಲವೂ ಏನು ಅನ್ಯಾಯವಾದ ಮಾತುಗಳನ್ನು ಹೇಳಿ ಅಪಚಾರ ಮಾಡಿದೆ ? ದೇವಾ ! ನೀನಿಲ್ಲವೆಂದು ಹೇಳಲು ಅರ್ಹನೇ ನಾನು ? ನಿನ್ನ ಗುಡಿಯಲ್ಲಿ ಸಿಡಿಲು ಬೀಳಲಿ ಎಂದು ಬೈದವನೂ ನಾನೆ ! ನಿನ್ನ ಮಾಯೆ ಅರ್ಥವಾಗಲಿಲ್ಲವೆಂದು ಹೊಗಳುವವನೂ ನಾನೆ ! ನನಗೇನೂ ತಿಳಿಯಲಿಲ್ಲ. ನಿನ್ನ ವ್ಯಾಪಾರ ವಿಚಿತ್ರವಾಗಿದೆ. ದೇವಾ ! ನೀನೇ ಕಾಪಾಡಬೇಕು" ಎಂದು ಪ್ರಾರ್ಥನೆ ಮಾಡಿ ಭಗವಂತನನ್ನು ಹಲವು ರೂಪಗಳಲ್ಲಿ ತನ್ನ ಮನಸ್ಸಿನಲ್ಲಿ ಆವಾಹನೆ ಮಾಡಿಕೊಂಡು ಸಂಧ್ಯಾವಂದನೆಯನ್ನು ಭಕ್ತಿ ವೈರಾಗ್ಯಗಳೊಡನೆ, ಅಕ್ಷರ ಅಕ್ಷರವಾಗಿ ಉಚ್ಚರಿಸಿ, ಅರ್ಘ್ಯಾದಿಗಳನ್ನು ನಿಯಮದಂತೆ ಕೊಟ್ಟು, 'ಅಯ್ಯೊ ! ನಿನ್ನ ಸ್ವರೂಪವಾದರೂ ಎಂತಹ ಸ್ವರೂಪ ! ನಿನ್ನ ಮಹಿಮೆಯಾದರೂ ಎಂತಹುದು !! ಈ ಮೇಘಗಳು, ಈ ನಕ್ಷತ್ರಗಳು, ಮರಗಳು, ಮನುಷ್ಯರು—ಎಲ್ಲರಿಗೂ ನೀನೇ ಅಧಿಪತಿ. ಎಲ್ಲರೂ ನಿನ್ನ ದಾಸರೇ—ಎಲ್ಲರೂ ನಿನ್ನ ಅಧೀನರೆ ! ಎಲ್ಲೆಲ್ಲಿಯೂ ವ್ಯಾಪಿಸಿ, ನೀನೆಂದು ಚಿಂತನೆ ಮಾಡಿ, ಯಾರು ನಿನ್ನ ಮಹಿಮೆಯನ್ನು ಪೂಜಿಸಲು ಸಾಧ್ಯ ? ಎಲ್ಲೆಲ್ಲಿಯೂ ತುಂಬಿರುವ ನಿನ್ನನ್ನು ನಾನು ಹೇಗೆ ಅರ್ಚಿಸಲಿ ?" ಎಂದು ದೇವರನ್ನು ಬಗೆ ಬಗೆಯಲ್ಲಿ ಸ್ತುತಿಸಿದರು.

ಗಾಯತ್ರಿ ಜಪಕ್ಕೆ ಆರಂಭಿಸುವ ತರುಣದಲ್ಲಿ ಘಣೀರೆಂದು ಗುಡಿಯ ಅರ್ಧಜಾವದ ಘಂಟೆ ಬಾರಿಸಿತು. ನಿಶ್ಯಬ್ದವಾದ ರಾತ್ರಿಯ ಸಮಯದಲ್ಲಿ ಸಮುದ್ರ ಘೋಷದಂತಿದ್ದ ಗಂಭೀರವಾದ ಆ ಘಂಟೆ ಮೊಳಗಿದ್ದು ಕಿವಿಯಲ್ಲಿ ಬಿದ್ದ ಕೂಡಲೆ ಮುತ್ತುಸ್ವಾಮಿ ಅಯ್ಯರ್, ರೋಮಾಂಚ ಹೊಂದಿ ಪುಲಕಿತರಾಗಿ "ಅಯ್ಯೋ! ನಿನ್ನ ಮಹಿಮೆಯಾದರು ಎಂತಹುದು" ಎಂದು ಹೇಳಲಾಗದವರಾಗಿ— ಹೇಳಿ— ಆನಂದಿಸಿ "ನಿನ್ನ ಪಾದ ನನಗಿಲ್ಲವೆ? ನಾನು ಯಾವಾಗ ನಿನ್ನ ಕರುಣೆಗೆ ಪಾತ್ರನಾಗುವೆನೊ ? ನನ್ನ ಮನಃಕ್ಲೇಶವನ್ನು ದೂರ ಮಾಡುವುದು ನಿನಗೆ ಆಗದ ವಿಷಯವೆ?" ಎಂದು ಈ ಪ್ರಪಂಚದ ನೆನಪನ್ನು ಮರೆತು, ಕರಗಿ, ಮೈಮರೆತು, ಸೊರಗಿ, ಕೊರಗಿ, ದೀನರಾಗಿ, ಸಾಸಿವೆಯನ್ನು ಕೊರೆದು ಕಡಲನ್ನು ಅದರಲ್ಲಿ ತೂರಿಸುವಂತೆ ಸರ್ವೋತ್ಕೃಷ್ಟವಾದ ಸಕಲ ವೇದಾಂತ ತತ್ವಗಳನ್ನು ಸಮೀಕರಿಸಿ, ಉಂಡೆಮಾಡಿ, ಕೂಡಿಸಿ ಸಾರ ಸಂಗ್ರಹವಾಗಿ ಮಾಡಲ್ಪಟ್ಟ 'ಓಂ' ಎಂಬ ಮೂಲ ಪ್ರಣವ ಮಂತ್ರವನ್ನು ಉಚ್ಚಾರಣೆ ಮಾಡುವಾಗ ಅವರ ಭ್ರಾಂತಿಯೋ ಅಥವಾ ಗುರು ದರ್ಶನವೊ ಅರಿಯೆನು—ತಠಾರನೆ ಭೂಮಿಯಿಂದ ಆಕಾಶದವರೆಗೂ ಬೆಳದಿಂಗಳಿಗಿಂತಲೂ ಹಿತವಾಗಿ, ಬಿಸಿಲಿಗಿಂತಲೂ ಕಾಂತಿಯುತವಾಗಿ ತೆಂಗಾಳಿ ರೂಪವನ್ನು ತಾಳಿ ಬಂದಂತೆ 'ಜಿಲ್' 'ಜಿಲ್' 'ಜಿಲ್'ಎಂದು ತಂಪಾಗಿ, ಮಂದ ಗತಿಯಿಂದ ಓಲಾಡುತ್ತ ಬಂದ ದಿವ್ಯ ತೇಜಸ್ಸು ಹೊರಗೂ ಒಳಗೂ ಎನ್ನುವ ಭೇದವಿಲ್ಲದೆ ಎಲ್ಲೆಲ್ಲಿಯೂ ವ್ಯಾಪಿಸಿರುವಂತೆ ಅವರಿಗೆ ತೋರಿತು. ಈ ಬಗೆಯಲ್ಲಿ * ತೋರಿದ ಆ ತೇಜೋ ಮಹಿಮೆಯಲ್ಲಿ ಎಲ್ಲ ಕಿರುನದಿಗಳೂ

* ಅಂದು ಹಗಲೆಲ್ಲ ದೇವರನ್ನು ನಿಂದಿಸುತ್ತಿದ್ದ ಅವರಿಗೆ ಅಷ್ಟು ಭಕ್ತಿ ಹೇಗೆ ಉಂಟಾದೀತು ಎಂದು ಕೆಲವರು ಶಂಕಿಸಬಹುದು. ಆದರೆ ಸ್ವಭಾವದಲ್ಲಿ ಅವರು ಬಹಳ ಭಕ್ತಿಯುತರೆಂದು ಈ ಮೊದಲೇ ಹಲವು ಬಾರಿ ಹೇಳಲಾಗಿದೆ. ಅಂದು ಬಂದ ನಾಸ್ತಿಕ್ಯ ಬೇಸರಿಕೆ ಮಧ್ಯದಲ್ಲಿ, ಸಂಭವಿಸುವ ಜ್ವರದಂತೆ, ರಾಮನೂ ಸಹ ಸೀತೆಯಿಂದ ಅಗಲಿದ ಕಾಲದಲ್ಲಿ "ಧರ್ಮದಿಂದ ಇನ್ನೇನು ಪ್ರಯೋಜನ?" ಎಂದು ಹಲವು ಬಾರಿ ಹಲುಬಲಿಲ್ಲವೆ?

ಗಂಗಾ ನದಿಯ ಗೌರವವನ್ನು ಪಡೆದು, ಭಗವಂತನ ನಾಮ ಕೀರ್ತನೆಯನ್ನು ಮಾಡುತ್ತ ಸಾಗಿದುವು. ಸಮುದ್ರವಾದರೊ ತನ್ನ ಶೋಕದ ಧ್ವನಿಯನ್ನು ಮರೆತು ಸಾಕ್ಷಾತ್ ಭಗವಂತನ ಶಯನ ಸ್ಥಾನವಾದ ಕ್ಷೀರಾಬ್ಧಿಯಂತೆ ಬೆಳಗಿ ಆ ಭಗವಂತನ ಗುಣಗಳನ್ನು ಪ್ರಸರಿಸಲು ಗಂಭೀರವಾದ ತನ್ನ ಧ್ವನಿಯನ್ನು ಸಹ ಕಾಣದೆ, ಪ್ರೇಮವೆಂಬ ಮದ್ಯಪಾನವನ್ನು ಮಾಡಿ—ಮದ್ಯಪಾನ ಮಾಡಿದ ಮೂಕನು ಮಾತಾಡಲು ತೊಡಗುವಂತೆ, ಕೈಗಳನ್ನು ಚಾಚಿಕೊಂಡು, ಮಾತಿಲ್ಲದಮಾತಿನಿಂದ ನುಡಿಯುವಂತೆ ಆನಂದಿಸಿತು. ಬೆಟ್ಟಗಳೆಲ್ಲವೂ ಸಾಕ್ಷಾತ್ ಕೈಲಾಸ ಪರ್ವತದಂತೆ ಗಾಂಭೀರ್ಯವನ್ನು ತಾಳಿ ದೇವರ ಆಲಯಗಗಳಂತೆ ನಿಂತುವು. ಮರಗಳೆಲ್ಲವೂ ನೂತನವಾದ ಹಸರು ಎಲೆಗಳ ಬಟ್ಟೆಯುಟ್ಟು ಜೇನನ್ನು ಚಿಮುಕಿಸಿ, ಪರಾಗವನ್ನು ತೂರುತ್ತ ವಸಂತ ಕಾಲದ ಓಕುಳಿಯನ್ನಾಡಿದುವು. ಹೂಗಳಾದರೊ ಭಗವದಾರಾಧನ ಮಹೋತ್ಸವವನ್ನು ಕೊಂಡಾಡಿ ದೇವಲೋಕದ ರಂಭಾದಿಗಳ ಹಾಗೆ ನೃತ್ಯವನ್ನು ಮಾಡಿದವು. ಪಕ್ಷಿಗಳೆಲ್ಲವೂ ಲೋಕವನ್ನು ಧಿಕ್ಕರಿಸಿ, ಮೇಲಕ್ಕೆ ಹಾರಿ ವಿದ್ಯಾಧರರ ಗುಂಪೋ ಎಂಬಂತೆ ಗಗನದಲ್ಲಿ ನಿಂತು ಭಗವಂತನ ಗುಣಗಾನ ಮಾಡುತ್ತಿದ್ದವು. ಗಾಳಿ ಗಂಧದ ಹುಡಿ ತೂರುತ್ತ, ಗಾನದಿಂದ ಲೋಕವನ್ನು ತುಂಬಿಸಿ, ಎಲ್ಲೆಲ್ಲಿಯೂ ವ್ಯಾಪಿಸಿ, ಸಕಲರನ್ನು ತೃಪ್ತಿಗೊಳಿಸಿ ಭಗವದಾರಾಧನ ಮಂಗಳ ಕಾರ್ಯದಲ್ಲಿ ಶೋಭಿಸುತ್ತಿತ್ತು. ಮೃಗಗಳು ತಮ್ಮ ವೈಷಮ್ಯಗಳನ್ನು ಮರೆತು, ಬಾಲವನ್ನು ಎತ್ತಿ ನಾಲ್ಕು ಕಾಲುಗಳಿಂದಲೂ ನೆಗೆದು ಕುಣಿದಾಡುತ್ತ ಓಡಿದುವು. ಕೇವಲ ಮನುಷ್ಯರೂ ಕೂಡ ಭೂಮಿಯನ್ನೆ ಮೂಸಿನೋಡುತ್ತ ಭೂಮಿಯನ್ನೇ ನೋಡುವ ಹಂದಿಯ ನೋಟವನ್ನು ಬಿಟ್ಟು ಮೇಲೆ ನೋಡಿ, ಮುಗ್ಧರಾಗಿ ಸ್ತುತಿ ಮಾಡುತ್ತಿದ್ದರು.

ಭೂಲೋಕದ ಪೂಜಾ ರೀತಿ ಈ ಬಗೆಯಾಗಿರಲು ಆಕಾಶದಲ್ಲಿಯೋ ಆದಿತ್ಯರು ವಸುಗಳು ಮರುತ್ತುಗಳು, ದಿಕ್ಪಾಲಕರು ಮೊದಲಾದ ದೇವತೆಗಳೂ ಆಗಸ್ತ್ಯ, ದಧೀಚಿ, ಭೃಗು, ಮಾರ್ಕಂಡೇಯ, ವಸಿಷ್ಠ, ಭಾರದ್ವಾಜ, ಮೊದಲಾದ ಮುನಿವರ್ಯರು ಯಕ್ಷ, ಗಂಧರ್ವ, ವಿದ್ಯಾಧರ, ಕಿನ್ನರ ಕಿಂಪುರುಷ ಮೊದಲಾದ ಗಣಗಳೂ ಮಿಂಚಿನಬಳ್ಳಿಯಂತೆಯೂ ಇಂದ್ರ ಧನುಸ್ಸಿ

ನಂತೆಯೂ, ಥಳ ಥಳನೆ ಪ್ರಕಾಶಿಸುತ್ತ, ಗುಂಪು ಗುಂಪಾಗಿ ನಿಲ್ಲಲು; ತುಂಬು
ನಾರದಾದಿಗಳು, ವೀಣೆ, ತಂಬೂರಿ ಮೊದಲಾದ ವಾದ್ಯಗಳ ಮೂಲಕ 'ಓಂ
'ಓಂ' ಎಂಬ ದೇವಗಾನವನ್ನು ಮಾಡಲು, ಸೂರ್ಯ ಚಂದ್ರ ನಕ್ಷತ್ರಗಳನ್ನೊ
ಗೊಂಡ ಅಖಿಲಾಂಡ ಕೋಟಿಗಳೂ ತಮ್ಮ ಬೃಹದ್ರೂಪಗಳೊಡನೆ ವ್ಯವಸ್ಥೆ
ಯಿಂದ ಒಂದನ್ನೊಂದು ಅನುಸರಿಸಿಕೊಂಡು ಕಣ್ಣು ಕಾಣಿಸುವವರೆಗೂ
ವಜ್ರ, ವೈಡೂರ್ಯ, ಮರಕತ, ಮಾಣಿಕ್ಯ, ಪಚ್ಚೆ, ಗೋಮೇಧಕ, ನೀಲ
ಹವಳ ಮೊದಲಾದ ಹಲವು ಬಗೆಯ ವರ್ಣಗಳಿಂದ ಕೂಡಿ ಪ್ರಕಾಶಿಸಿ
ಭಗವಂತನನ್ನುದ್ದೇಶಿಸಿ, ಅಮೃತಮಯನಾದ ಗಾನವನ್ನು ಮಾಡಿ, ಒಂದು
ಭಯಂಕರವಾದ ಸೊಬಗಿನಿಂದ ಬಹು ಗಂಭೀರವಾಗಿ ತಿರುಗುತ್ತಿರಲು ಇವೆ
ಲ್ಲಕ್ಕೂ ಮೇಲೆ ಸಮಸ್ತ ಲೋಕಗಳಿಗೂ ಕಾರಣನಾಗಿ ಸಮಸ್ತ ಲೋಕಗ
ಳಿಗೂ ನಾಯಕನಾಗಿ ಸರ್ವಲೋಕ ಶರಣ್ಯನಾಗಿ ನಿತ್ಯನಾಗಿ ನಿರ್ಮಲನಾಗಿ
ಮಹತೋಮಹೀಮನಾಗಿ, ಅಣೋರಣೀಯನಾಗಿ, ಅನೇಕ ಕೋಟಿ ಸೂರ್ಯರು
ಏಕ ಕಾಲದಲ್ಲಿ ಉದಯಿಸಿದಂತೆ, ನೋಡಲು ಹತ್ತು ಸಾವಿರ ಕಣ್ಣುಗಳು
ಸಹ ಸಾಲದಂತೆ ಅಪರಿಮಿತವಾದ ಜ್ಯೋತಿಯೊಂದು ಕಂಡುದನ್ನು
ಮುತ್ತುಸ್ವಾಮಿ ಅಯ್ಯರ್ ಕಂಡರು. ತನ್ನ ಕಣ್ಣುಗಳಿಂದ ಕಂಡು ಪಾದಾದಿ
ಕೇಶದವರಿಗೂ ರೋಮಾಂಚಗೊಂಡು ಪುಲಕಿತರಾಗಿ 'ಆ' ಎಂದು ತೆರೆದ
ಬಾಯಿಯಿಂದ, ಎವೆಯಿಕ್ಕದ ಕಣ್ಣುಗಳುಳ್ಳವರಾಗಿ, ಆನಂದಸಾಗರದಲ್ಲಿ
ಮುಳುಗಿ, ಮೈಮರೆತು, ಪರವಶವಾಗಿ ಭ್ರಮೆಹೊಂದಿ ಸ್ತಂಭಿಸಿ ನಿಲ್ಲಲು; ಕಂಡು
ಮರೆಯಾಗುವ ಮಿಂಚಿನಂತೆ ಒಂದು ಕ್ಷಣದಲ್ಲಿ ಮರೆಯಾಯಿತು ಅನಂತವಾದ
ಆ ದೃಶ್ಯ.ಮರೆಯಾಗಿಯೂ ಬಹಳ ಹೊತ್ತು ಮುತ್ತುಸ್ವಾಮಿ ಅಯ್ಯರ್‌ಗೆ
ಪ್ರಜ್ಞೆ ಬರಲಿಲ್ಲ. ಪ್ರಜ್ಞೆ ಬಂದ ಕೂಡಲೆ, "ಕಂಡೆನು—ಕಂಡೆನು—ಕಾಣ
ದುದನ್ನು ಕಂಡೆನು" ಎಂದು ಆನಂದದಿಂದ ಹಿಗ್ಗಿದರು.

ಆನಂದಪರವಶರಾಗಿ ಬಾಯಲ್ಲಿ ಬಂದಂತೆ ಹಾಡಿ, ಮಂಟಪವನ್ನು ಸೇರಿ,
ಸ್ವಾಮಿಗಳಿಗೆ ಸಾಷ್ಟಾಂಗ ನಮಸ್ಕಾರಮಾಡಿ, ಅವರ ಪಾದ ಪದ್ಮಗಳನ್ನು
ಗಟ್ಟಿಯಾಗಿ ಹಿಡಿದುಕೊಂಡು ಸ್ತುತಿಸಿ ಎದ್ದು ತಾನು ಕಂಡುದನ್ನು ವರ್ಣನೆ
ಮಾಡಿ "ಸ್ವಾಮೀ—ತಾವು ಯಾರೋ ಅರಿಯೆ—ತಮ್ಮ ದರ್ಶನವಿಶೇಷ

ದಿಂದ ದೇವತೆಗಳೂ ಮುನಿಗಳೂ ಕಾಣದುದನ್ನು ಕಂಡೆನು. ಕಂಡೆನು ನನ್ನ ಈ ಬಡ ಕಣ್ಣುಗಳಿಂದ ಕಂಡೆ. ವೇದವೇದ್ಯರು, ವಿರಿಂಚಿ ಮೊದಲಾದವರು ತಿಳಿಯಬಹುದಾದ ಆದಿ ದೇವನನ್ನು ನಾನು ಅರಿತೆ. ತಮ್ಮ ದರ್ಶನ ಮಾಡಿದ ಫಲವನ್ನು ಕಂಡೆ. ನನ್ನನ್ನು ದುರ್ಮರಣದಿಂದ ರಕ್ಷಿಸಿದ ತಾವೇ ಅಜ್ಞಾನದಿಂದ ಕಾಪಾಡಬೇಕು. ಶರಣು—ಶರಣು" ಎಂದು ಹೇಳುತ್ತ ಅವರ ಪಾದದಲ್ಲಿ ನಮಸ್ಕಾರ ಮಾಡಿದರು.

ಅವರು ಅವರನ್ನೆಬ್ಬಿಸಿ ಪಕ್ಕದಲ್ಲಿ ಕೂಡಿಸಿಕೊಂಡು: "ಇದೇನು ಭ್ರಾಂತಿ! ಸ್ವಲ್ಪ ಹಿಂದೆ, ನೀನೇ ಅಲ್ಲವೆ ದೇವರು ಯಾವುದು, ದೆವ್ವ ಯಾವುದು?" ಎಂದು ಹೇಳಿದೆ—" ಎನ್ನಲು ಮುತ್ತುಸ್ವಾಮಿ ಅಯ್ಯರವರು "ನಾನು ಮಾಡಿದ ದೊಡ್ಡ ಅಪರಾಧವನ್ನು ಕ್ಷಮಿಸಬೇಕು. ನಾನು ಮಾಡಿದುದು ಪಾಪ. ತಿಳಿಯದೆ ಮಾಡಿದೆ. ನಾನು ಯಾವ ತಪ್ಪು ಮಾಡಿದರೂ, ಭಗವಂತನ ಕೃಪೆ ನನ್ನ ಪಾಲಿಗೆ ತಪ್ಪಲಿಲ್ಲ. ತಮ್ಮನ್ನು ದರ್ಶಿಸಿದ ನನಗೆ ಹೆಂಡತಿ ಮಕ್ಕಳು, ತಮ್ಮ—ಎಲ್ಲರನ್ನು ಕಳೆದು ಕೊಂಡುದು ಏನು ನಷ್ಟ? ನನ್ನ ಜನ್ಮ ಬಂಧನವನ್ನು ತೊಲಗಿಸಬೇಕೆಂದೇ ಭಗವಂತನು ನನಗೆ ವಿಶೇಷವಾಗಿ ಅನುಗ್ರಹಮಾಡಿದ್ದಾನೆ. ಪ್ರಪಂಚದಲ್ಲಿ ವಿರಕ್ತಿಯನ್ನುಂಟು ಮಾಡಿದುದು ಮಾತ್ರವಲ್ಲದೆ ತಮ್ಮನ್ನೂ ನನಗೆ ಗುರುಮೂರ್ತಿಯಾಗಿ ಕಳುಹಿಸಿ ಕೊಟ್ಟಿದ್ದಾನೆ. ತಾವೇ ಕಾಪಾಡಬೇಕು." ಎಂದು ಹೇಳಿ ಪ್ರಾರ್ಥಿಸಲು, ಸ್ವಾಮಿಗಳು "ಭಯಪಡಬೇಡ! ಒಳ್ಳೆಯ ಉತ್ತಮವಾದ ಪೂಜೆಗಳನ್ನು ಮಾಡಿರುವೆ. ಭಗವಂತನು ನಿನ್ನ ವಿಷಯದಲ್ಲಿ ವಿಶೇಷ ಕೃಪೆಯನ್ನು ತೋರಿಸುವನು. ನೀನು ಇನ್ನು ಭಗವಂತನ ವಿಷಯದಲ್ಲಿ ಸ್ವಲ್ಪ ಭಕ್ತಿಯಿಂದ ಕೂಡಿದವನಾಗಿ ಇರುವೆಯಾದರೆ ನಿನಗೆ ಇಂದು ದೊರೆತ ಆನಂದ ದರ್ಶನ ಎಲ್ಲ ಕಾಲದಲ್ಲಿಯೂ ದೊರಕುವುದು. ನೀನು ಈಗಲೂ ಬಹಿರಂಗ ರೀತಿಯಲ್ಲಿ ಕಂಡ ದೃಶ್ಯವನ್ನು ನಿನ್ನೊಳಗೇ ಎಡೆಬಿಡದೆ ನೀನು ದರ್ಶನಮಾಡಿ ಅನುಭವಿಸಬಹುದು. ನಿನ್ನನ್ನು ಕರೆದುಕೊಂಡು ಹೋಗಲೋಸುಗವೇ ನನ್ನನ್ನು ಪರಮಾತ್ಮನು ಇಲ್ಲಿಗೆ ಕಳುಹಿಸಿದಂತೆ ಕಾಣುತ್ತದೆ. ನಮಗೆ ಇನ್ನು ಇಲ್ಲಿ ಕೆಲಸವಿಲ್ಲ. ಹೋಗೋಣ, ಬಾ" ಎಂದು ಆಜ್ಞೆಯಿತ್ತು,

ಎದ್ದು, ಮಂಟಪದಿಂದ ಹೊರಕ್ಕೆ ಬಂದು ಮುಂದೆ ಸಾಗಲು, ಮುತ್ತುಸ್ವಾಮಿ ಅಯ್ಯರ್ "ಇದೂ ಒಂದು ಆಶ್ಚರ್ಯವೆ! ನಾವು ಒಂದನ್ನು ಎಣಿಸಿದರೆ, ದೈವವು ಒಂದು ರೀತಿಯಲ್ಲಿ ಮುಗಿಸುತ್ತದೆ. ನಮಗೆ ಇನ್ನು ಎಲ್ಲಿ ಹೋದರೇನು?—ಕಮಲಾಂಬಾಳ್—ಅಯ್ಯೋ! ಹೀಗೆಯೇ ಮೋಸ ಮಾಡಿದಳು. ಶಿರುಕುಳಂ ನಾವು ಹುಟ್ಟಿದುದೂ, ಬೆಳೆದುದೂ—ಹೋಗಲಿ—ನನ್ನಂತಹ ಭಾಗ್ಯಶಾಲಿಗಳು ಪ್ರಪಂಚದಲ್ಲಿಲ್ಲ. ಎಲೆ ಮೂದೇವಿ! ನಾನಾದರೊ ಸನ್ಯಾಸಾಶ್ರಮವನ್ನು ಸ್ವೀಕರಿಸಲಿದ್ದೇನೆ—ಎಂದು ತಿಳಿಯುವುದಲ್ಲ. ಅಷ್ಟರಲ್ಲಿ ಅವಸರವೇ! ಛೀ—ಈ ಹಾಳು ನೆನಪುಗಳು ಈಗ ಏತಕ್ಕೆ ಬರುತ್ತವೆ? ಅಯ್ಯೋ—ನಾನು ಇಂದು ಕಂಡ ದೃಶ್ಯ—ಅಯ್ಯೋ! ಅದಲ್ಲವೇ ಸುಖ—ಮಹದಾನಂದವೆಂದು, ಸರಿಯಾಗಿ ಹೆಸರಿಟ್ಟರು. ಆ ಭಾಗ್ಯವನ್ನು ನಾವು ನಿತ್ಯವಾಗಿ ಅನುಭವಿಸುವವಾದರೆ ಎಂತಹ ಆನಂದ." ಹೀಗೆ ಬಹು ಉತ್ಸಾಹದಿಂದ ಹೇಳುತ್ತ ಹಾಡುತ್ತ ಆ ಮೂರ್ತಿಯ ಹಿಂದೆ ಹೋಗಲು, ರಾತ್ರಿ ಎಂಬ ಭಯ ಸ್ವಲ್ಪವೂ ಇಲ್ಲದೆ ಈರ್ವರೂ ಕಾಡಿನ ಮಾರ್ಗದಲ್ಲಿ ಪ್ರಯಾಣ ಮಾಡಿದರು.

## ೨೬. ಬೂರುಗದ ಕಾಯನ್ನು ಕಾದ ಗಿಳಿ

ಇಲ್ಲಿ ಮುತ್ತುಸ್ವಾಮಿ ಅಯ್ಯರ್ ಪರಿಸ್ಥಿತಿ ಹೀಗಿರಲು, ಶಿರುಕುಳದಲ್ಲಿ ಆದರೊ, ಕಮಲಾಂಬಾಳ್ "ಅವರು ಯಾವಾಗ ಬರುವರೊ, ಯಾವಾಗ ನನ್ನ ಕಷ್ಟ ಕಳೆಯುವುದೋ!" ಎಂದು ಚಿಂತಿಸುತ್ತ ಅವರ ಬರುವಿಕೆಯನ್ನೇ ಎದಿರು ನೋಡುತ್ತಿದ್ದಳು. ಆರ್ದ್ರಾ ದರ್ಶನಕ್ಕೆ ಚಿದಂಬರದಲ್ಲಿದ್ದು ಅನಂತರ ಬರುವುದಾಗಿ ಬರೆದಿದ್ದರು. ಆದುದರಿಂದ ಆರ್ದ್ರಾ ದರ್ಶನವು ಎಂದು ಮುಗಿಯುವುದು? ನಾನು ಎಂದು ಅವರ ಮುಖವನ್ನು ಕಂಡು ನಲಿದೇನು?"—ಎಂದಿತ್ತು ಅವಳಿಗೆ. ಒಂದು ದಿನ ಕಳೆಯುವುದು ಒಂದು ಯುಗ ಕಳೆದಂತಾಗಿತ್ತು. ದೇಹವು ಸೊರಗಿ, ಯಾವ ಕಾರ್ಯಕ್ಕೂ ಲವಲವಿಕೆ ಇಲ್ಲದೆ, ಆಕಳಿಸುತ್ತ ದಿನಗಳನ್ನು ಕಳೆದಳು. ತನ್ನ ಪತಿಯ ಪತ್ರದಲ್ಲಿ ಹಣವು ತಿರುಗಿ ಬಂತೆಂದು ಬರೆಯದೆ ಇದ್ದುದರಿಂದ ಹಣವು ಹೋದಂತೆಯೆ. ಹಣ ಹೋದರೆ

ಹೋಗಲಿ—ಅವರಾದರೂ ಕ್ಷೇಮವಾಗಿ ಬಂದು ಸೇರಬೇಕು ಎಂದು ಚಿಂತಿಸಿದಳು. ತನ್ನ ಪತಿದೇವರು ಬಂದ ನಂತರ ದಾರಿದ್ರ್ಯದ ಕಷ್ಟವನ್ನು ಅವರು ಅನುಭವಿಸದಂತೆ ನಾನು ನೋಡಿಕೊಳ್ಳಬೇಕು. ಅವರು ಇದುವರೆಗೂ ಅನುಭವಿಸುತ್ತ ಬಂದ ಸುಖಗಳಿಗೆ ಯಾವ ವಿಷಯದಲ್ಲಿಯೂ ಲೋಪ ಬರದಂತೆ ನೋಡಿಕೊಳ್ಳಬೇಕು — ಎಂದು ಅದಕ್ಕೆ ಬೇಕಾದ ಆಲೋಚನೆಗಳನ್ನೆಲ್ಲ ಮಾಡುತ್ತಿದ್ದಳು.

ಮನೆ ಇಂತಹ ಬೆಲೆಗೆ ಹೋಗುವುದು. ಬಳೆ, ಕಡಗ, ಓಲೆ, ಇಂತಿಂತಹ ಬೆಲೆಗೆ ಹೋಗಬಹುದು. ಮೂಗುತಿ ಇಷ್ಟು ಬೆಲೆಗೆ ಹೋಗಬಹುದು. ಸರಿಗೆ, ಅಡ್ಡಿಕೆ—ಎಷ್ಟು ಕಡಮೆಯಾದರೂ ಇಷ್ಟು ಬೆಲೆಗೆ ಹೋಗುವುದು—ಹೀಗೆಲ್ಲ ತನ್ನ ಮನಸ್ಸಿನಲ್ಲಿಯೇ ಬೆಲೆಗಳನ್ನು ನಿಷ್ಕರ್ಷೆ ಮಾಡಿಕೊಂಡಳು. ಆ ಊರಿನಲ್ಲಿಯೇ ಒಂದು ಸಣ್ಣ ಮನೆಯನ್ನು ಕೊಂಡುಕೊಳ್ಳಬೇಕೆಂದು ತನ್ನಲ್ಲಿ ತೀರ್ಮಾನ ಮಾಡಿಕೊಂಡು, ನದಿಯ ದಡಕ್ಕೆ ಹೋಗಿ ಬರುವಾಗಲೆಲ್ಲ ಇದೇ ನಮ್ಮ ಮನೆ ಎಂದು ಅದನ್ನು ಮಮತೆಯಿಂದ ದೃಷ್ಟಿಸಿ ನೋಡಿ "ಏತಕ್ಕೆ? ಈ ಮನೆ ಸಾಲದೆ ಏನು? ಹಿತ್ತಲಿನಲ್ಲಿ ಸೊಪ್ಪು ಬೆಳೆಸಬಹುದು—ಪಲ್ಯಕಾಯಿಗಳನ್ನು ಬೆಲೆ ಕೊಟ್ಟು ಕೊಳ್ಳುವುದೆಂದರೆ ನಮಗೆ ಗಿಟ್ಟೀತೆ? ಗೋಡೆ ಇದೆ. ಸಗಣಿ ತಟ್ಟಬಹುದು. ಮನೆಯನ್ನು ಗುಡಿಸಿ ಸಾರಿಸುವುದಕ್ಕೂ ಯಾರೂ ಬೇಡ—ನಾವೇ ಗುಡಿಸಿ ಸಾರಿಸಿಕೊಳ್ಳಬಹುದು." ಎಂದು ಹೀಗೆ ಮನಸ್ಸಿನಲ್ಲಿ ಮುಂಡಿಗೆಯನ್ನು ಮಾಡಿಕೊಳ್ಳುತ್ತಿದ್ದಳು.

"ಪತಿದೇವರು ಬಂದಕೂಡಲೆ ಅವರಿಗೆ ನನ್ನ ಆಭರಣಗಳನ್ನು ಕೈಯ್ಯಿಂದ ಕಳಚಿ ಕೊಟ್ಟುಬಿಡುತ್ತೇನೆ" ಎಂದೂ "ಗಾರೆ - ಇಟ್ಟಿಗೆಯಿಂದ ಕಟ್ಟಿದ ಮನೆ ಹೋದರೆ ಹೋಗಲಿ—ನನ್ನ ಪ್ರೀತಿಯೆಂಬ ದೊಡ್ಡ ಮಹಡಿಯ ಮನೆಯಲ್ಲಿ ನಾನು ಅವರನ್ನು ಇರಿಸುವೆನು." ಎಂದೂ ತನ್ನ ಮನಸ್ಸಿನಲ್ಲಿಯೇ ಹೆಮ್ಮೆ ಪಡುತ್ತ ಇತರರೊಂದಿಗೆ ಈ ಮಾತನ್ನೊಂದೂ ಆಡದೆ, 'ಸ್ತ್ರೀ ಪುರುಷರು ಪರಸ್ಪರ ಪ್ರೇಮದಿಂದ ಬಾಳಿದರೆ ಪ್ರಪಂಚದಲ್ಲಿ ಅದಕ್ಕೆ ಸಮನಾದುದು ಬೇರೆ ಏನಿದೆ?" ಎಂದು ಹೇಳುತ್ತ ಕಾಲವನ್ನು ಕಳೆದಳು. ತಾವು ಅನುಭವಿಸಿದ ಸುಖಗಳನ್ನು ನೆನೆನೆನೆದು ಸಂತೋಷಗೊಂಡು ಅದೆಲ್ಲ

ವನ್ನು ಮತ್ತೆ ಯಾವಾಗ ಅನುಭವಿಸ ಹೋಗುತ್ತೇವೆ ಎಂದು ದುಃಖಿಸಿದಳು
ಮನೆಯಲ್ಲಿದ್ದ ಸಾಮಾನುಗಳನ್ನೆಲ್ಲ ಎಲ್ಲಿಯೋ ಪ್ರಯಾಣ ಮಾಡಬೇಕಾ
ಗಿದ್ದರೆ ಕಟ್ಟಿಡುವ ಹಾಗೆ ಅಚ್ಚುಕಟ್ಟಾಗಿ ಕಟ್ಟಿ ಒಂದು ಕಡೆಗಿಟ್ಟಳು
ಆರ್ದ್ರಾ ದರ್ಶನದ ದಿನ "ದೇವರೇ, ನನ್ನ ಪತಿಯನ್ನು ನನ್ನ ಬಳಿಗೆ ಕ್ಷೇಮ
ವಾಗಿ ಕರೆತಂದು ಸೇರಿಸಬೇಕು." ಎಂದು ಕಣ್ಣೀರು ಸುರಿಸುತ್ತ ಆಳವಾದ
ಭಕ್ತಿಯಿಂದ ಬೇಡಿಕೊಂಡಳು. ಅಂದು ಹಗಲೆಲ್ಲ "ಕಾಗೆ ಬಿಡುವಿಲ್ಲದೆ ಕೂಗು
ತ್ತದೆ — ಒಲೆ ಕೂಗುತ್ತದೆ — ಅವರು ನಾಳೆ ಬಂದುಬಿಡುವರೆ'ಂದು ಎಲ್ಲರ
ಬಳಿಯೂ ಹೇಳುತ್ತಿದ್ದಳು. ಆ ಸಂತೋಷದಲ್ಲಿ ಅವಳಿಗೆ ನಷ್ಟವಾದ ಹಣ
ಮತ್ತೆ ಸಿಕ್ಕಿದಂತೆ ಹಿಗ್ಗಿದಳು. ತನ್ನ ಮಗಳಾದ ಲಕ್ಷ್ಮಿ ಒಳ್ಳೆಯ ಸ್ಥಳದಲ್ಲಿ
ಸೇರಿಸಲ್ಪಟ್ಟದುದನ್ನು ಕುರಿತು ತೃಪ್ತಿ ಹೊಂದಿದಳು. ಆರ್ದ್ರಾ ಉತ್ಸವ
ಕಳೆದು ಮೂರನೆಯ ದಿನ ತನ್ನ ಪತಿ ಬರುವರೆಂದು ನಂಬಿ ಅವರಿಗೂ ಸೇರಿಸಿ
ಹೊತ್ತಾಗುವುದಕ್ಕೆ ಮುಂಚೆಯೇ ಬಹು ಚೆನ್ನಾಗಿ ಅಡಿಗೆಯನ್ನು ಮಾಡಿಟ್ಟು
ಅವರು ಬರುವ ದಾರಿಯನ್ನು ಆಸೆಯಿಂದ ಎದಿರು ನೋಡುತ್ತಿದ್ದಳು.

ಬೀದಿಯಲ್ಲಿ ಗಾಡಿಯ ಶಬ್ದ ಕೇಳಿಸಿದರೆ, " ಇಗೋ ಬಂದುಬಿಟ್ಟರು "
ಎಂದು ರೋಮಾಂಚಗೊಂಡು, ಓಡುತ್ತ ಬಂದು ಬೀದಿ ಬಾಗಿಲಿಗೆ ಹೋಗಿ
ನೋಡುವುದು ; ಬಾರದಿದ್ದುದನ್ನು ಕಂಡು ಮನಸ್ಸಿನಲ್ಲಿ ಮರುಗಿ, ನಡೆಯಲು
ಮೆತ್ತಗಾಗಿ, ಜೀವ ಸೊರಗಿ, ದೇಹ ಕುಗ್ಗಿ, ಬೇಸರದಿಂದ ಬಾಗಿಲನ್ನು ಹಾಕಿ
ಮೆತ್ತಗೆ ಒಳಗೆ ಬಂದು, ಅನಂತರ ಬಾಗಿಲಿಗೂ, ಒಳಗೂ ಊಗಲಾಡು
ತ್ತಿದ್ದಳು. ತಟಾರನೆ ಅವರು ಬಂದು ಬಾಗಿಲನ್ನು ತಟ್ಟುವಂತೆ ಶಬ್ದ
ಕೇಳಿಸುವುದು. ಬಾಗಿಲಲ್ಲಿ ಅವರ ಮಾತಿನ ಧ್ವನಿ ಕೇಳುವಂತೆ ಆಗುವುದು.
ಓಡಿಬಂದು ನೋಡಿಕೊಂಡು ಹೋಗುವಳು. ಅವಳ ಉದ್ದೇಶದಂತೆ
ಮುತ್ತುಸ್ವಾಮಿ ಅಯ್ಯರ್ ಬರುವುದಾದರೆ ಹತ್ತುಗಂಟೆಗೇ ಬಂದಿರಬೇಕು.
ಗಂಟೆ ೧೧ ಆಗುತ್ತದೆ. ಕಾಣಿಸಲಿಲ್ಲ. ೧೨ ಗಂಟೆ ಆಯಿತು; ೧, ೨, ೩
ಗಂಟೆ ಆಯಿತು. ಆಗಲೂ ಇಲ್ಲ. ಹೊತ್ತು ಆದಂತೆಲ್ಲ - ಹಾವು ಕಡಿದ ವಿಷ
ಹತ್ತುವಂತೆ ಕಮಲಾಂಬಾಳಿಗೆ ಮನಸ್ಸಿನ ದುಃಖ ಹೆಚ್ಚುತ್ತ ಹೋಯಿತು.
'ಬಾರದೆ ಇರಲಾರರೆ —ಬರುವ ದಾರಿಯಲ್ಲಿ ಏನು ಆಪತ್ತು ಸಂಭವಿಸಿತೋ—

ಯಾವ ಸಂಗತಿಯನ್ನೂ ಹೇಳುವವರಿಲ್ಲವಲ್ಲ! ಪಟ್ಟ ಕಷ್ಟಗಳೆಲ್ಲಾ ಸಾಲದೆಂದು ಇನ್ನೂ ಏನು ಸಂಭವಿಸಿದೆಯೊ? ನಮ್ಮ ಅದೃಷ್ಟಕ್ಕೆ ಎಲ್ಲವೂ ಒದಗುವುದು." ಎಂದು ಕಣ್ಣೀರು ಸುರಿಸಿ ಅತ್ತಳು. "ಅಯ್ಯಯ್ಯೋ! ದೈವವೆ! ನಿನಗೆ ಇದು ಧರ್ಮವೆ?" ಎಂದು ದೈವವನ್ನು ನಿಂದಿಸಿದಳು. ಅಡಿಗೆ ಮಾಡಿದ್ದ ಅನ್ನ ಹಾಗೆ ಉಳಿದಿರಲು, ಒಂದು ತೊಟ್ಟು ನೀರನ್ನು ಸಹ ಕುಡಿಯದೆ ನೆಲದ ಮೇಲೆ ಮಲಗಿ ತನಗೆ ಸಂಭವಿಸಿದ ಕಷ್ಟಗಳೆಲ್ಲವನ್ನು ನೆನೆನೆನೆದು ಯಾರು ಸಮಾಧಾನ ಮಾಡಿದರೂ ಸಮಾಧಾನಗೊಳ್ಳದೆ ಬಿಕ್ಕಿ ಬಿಕ್ಕಿ ಅತ್ತಳು. ಅತ್ತು ಅತ್ತು ಕಣ್ಣು ಕೆಂಪಗಾಯಿತು. ತಲೆನೋವು ಉಂಟಾಯಿತು. ಮುಖ ಬಾಡಿ ಕಪ್ಪಗಾಯಿತು. ಅಳುತ್ತ "ಪ್ರಾಣವನ್ನು ನೀಗುತ್ತೇನೆ." ಎಂದು ಹಲುಬಿದಳು. "ಅಯ್ಯಯ್ಯೋ!" ಎಂದು ಕೂಗಿಕೊಳ್ಳುತ್ತ ಬೆಂಕಿಯಲ್ಲಿ ಬಿದ್ದ ಹುಳದಂತೆ ಒದ್ದಾಡಿದಳು.

ಹೀಗೆ ಒಂದು ದಿನ, ಎರಡು ದಿನ, ಮೂರು ದಿನ– ಒಂದು ವಾರವಾಯಿತು. ಅವರು ಬರಲೇ ಇಲ್ಲ. "ಇನ್ನು ಬರುವುದಿಲ್ಲ? ಇಷ್ಟೆ ನಾನು ಕೊಟ್ಟಿಟ್ಟುದು ಅಯ್ಯೊ! ಹೀಗೆ ಕೊನೆಗಾಣಬೇಕೆ? ನಮ್ಮ ಸಂಬಂಧ ಹೀಗೆ ಕೊನೆಗಾಣುವುದೆಂದು ನಾನು ಸ್ವಪ್ನದಲ್ಲಿಯೂ ಎಣಿಸಲಿಲ್ಲ. ನೀನು ಎಲ್ಲಿಯಾದರೂ ಹೋಗು! ನಿನಗೂ ನನಗೂ ಇದ್ದ ಸಂಬಂಧ ಹರಿಯಿತು" ಎಂದು ಹೇಳಿ ಝಾಡಿಸಿ ತಳ್ಳಿದರಲ್ಲ! ಹಾಗೆಯೇ ಮಾಡಿಬಿಟ್ಟಿರಲ್ಲ! ಅಯ್ಯಯ್ಯೊ! ನಿಮ್ಮನ್ನು ಬಿಟ್ಟು ನಾನು ಹೇಗೆ ಅಗಲಿರಲಿ? ಪ್ರಾಣವನ್ನು ನೀಗಲೂ ಮನಸ್ಸಿನಲ್ಲಿ ಧೈರ್ಯ ಬರುವುದಿಲ್ಲವಲ್ಲ! ನೀವು ಇರುವ ಸ್ಥಳವಾದರು ನನಗೆ ತಿಳಿದರೆ ಅದು ಯಮಲೋಕವಾದರೂ ಸಾವಿತ್ರಿಯಂತೆ ನಾನು ಹಿಂಬಾಲಿಸಿಕೊಂಡು ಬಂದೇನು! ಅನಾಥೆಯನ್ನಾಗಿ ನನ್ನನ್ನು ಬಿಟ್ಟು ಹೋಗಿಬಿಟ್ಟಿರಲ್ಲಾ! ನಿಮಗೆ ಇದು ಧರ್ಮವೆ? ಅಯ್ಯೊ! ಚಿದಂಬರಕ್ಕಾದರು ಬಂದರೋ ಇಲ್ಲವೊ? ಇಷ್ಟು ವಿಪತ್ತುಗಳಾದ ಮೇಲೆ ಪ್ರಾಣವನ್ನೂ ಇಟ್ಟು ಕೊಂಡಿರಬೇಕೆ— ಎಂದು ಪ್ರಾಣವನ್ನು ತೊರದಿರಾ? ಏನೂ ತಿಳಿಯಲಿಲ್ಲವಲ್ಲ! ಏನು ಮಾಡಲಿ? ಅಯ್ಯೊ! ನಟರಾಜಾ! ನೀನು ಹೋದ ಮೊದಲು ನಾನು ಪಡುವ ಕಷ್ಟ ಅಷ್ಟಿಷ್ಟಲ್ಲ. ಒಂದು ಸುದ್ದಿಯನ್ನೂ ಹೇಳುವವರಿಲ್ಲವಲ್ಲ, ನಾನೇನು ಮಾಡಲಿ? ದೇವರೆ!

ಭೂಮಿಯಲ್ಲಿ ಹೆಣ್ಣಾಗಿ ಹುಟ್ಟಿ ನನ್ನಂತೆ ಅನುಭವಿಸುವವರಿಲ್ಲ—" ಎಂದು ಹಲುಬಿ ಅತ್ತು, ದಂಟಿನ ಸೊಪ್ಪಿನಂತೆ ಸೊರಗಿ, ಕಣ್ಣೀರಾಗಿ ಕರಗಿ ಜ್ಞಾನ ತಪ್ಪಿ ಬಿದ್ದಳು. ಹಾಗೆ ಬಿದ್ದು ಬಂದ ನಿದ್ದೆಯ ಮಧ್ಯದಲ್ಲಿ ಮುತ್ತುಸ್ವಾಮಿ ಅಯ್ಯರ್ ಕಾವಿ ಧರಿಸಿದ ಒಬ್ಬ ಸನ್ಯಾಸಿ ರೂಪದಿಂದ ಬಂದಂತೆಯೂ ಬಂದು "ಎಲೆ ಪಾಪಿ! ಇಗೋ—ಅರಿಸಿನವನ್ನು ತೊಕೊ—ನಾನು ಆಶ್ರಮವನ್ನು ಸ್ವೀಕರಿಸಿ ಆಯಿತು. ಇನ್ನು ಇಷ್ಟೇ ನಿನಗೂ ನನಗೂ" ಎಂದು ಹೇಳಿ ಬಹಳ ಕನಿಕರ ದೃಷ್ಟಿಯಿಂದ ನೋಡಿ, ಅನಂತರ ಮರೆಯಾದಂತೆಯೂ ಅವಳಿಗೆ ಕಂಡಿತು. ಅವಳು ಕೂಡಲೆ ಬೆಚ್ಚಿಬಿದ್ದು ಎಚ್ಚರವಾಗಿ ದೀಪ ಹಚ್ಚಿ "ಅಯ್ಯಯ್ಯೊ! ಸನ್ಯಾಸಿಯಾಗಿಯೇ ಬಿಟ್ಟಿರಾ? ನೀವು ಭಿಕ್ಷುಕರಾದರೆ, ನಾನು ಭಿಕ್ಷಿಣಿ! ನಿಮಗೆ ಸೇವೆಯನ್ನು ಮಾಡಿ ನಾನು ನಾಯಿಯಂತೆ ಹಿಂಬಾಲಿಸಿ ಬರಲಾರೆನೆ! ನನ್ನನ್ನು ಅನಾಥಳನ್ನಾಗಿ ಬಿಟ್ಟು ಹೋಗುವದು ಧರ್ಮವೆ—" ಎಂದು ಹಲುಬಲು ಪಕ್ಕದಲ್ಲಿದ್ದವರು "ಏನೇ ಕಮಲಾಂಬಾ! ಏನೇ ಅಮ್ಮ! ಏನು ಕನಸನ್ನು ಕಂಡೆ? ಏತಕ್ಕೆ ಹಲುಬುತ್ತೀಯೆ? ಭಯ ಪಡಬೇಡ. ಅಳದೆ ಹೇಳು" ಎಂದು ಕೇಳಲು, ಅವಳು ತಾನು ಕಂಡ ಕನಸನ್ನು ಹೇಳಿ ಇನ್ನೂ ಹೆಚ್ಚಾಗಿ ಅಳಲು, "ಹುಚ್ಚಿ, ಹೀಗೆ ಅಳುತ್ತಾರೆಯೇ — ವಿಚಿತ್ರವಾಗಿದೆ. ಕನಸು ಕಂಡರೆ ಏನಾಯಿತು? ಅಂದು ಹಾಗೆಯೇ ಶೇಷಿ—ತನ್ನ ಗಂಡ ಸತ್ತು ಹೋದಂತೆ ಕನಸನ್ನು ಕಂಡಳು—ಮರುದಿನವೇ ಅವನು ದೆವ್ವದ ಹಾಗೆ ಎದುರಿಗೆ ಬಂದು ನಿಲ್ಲಲಿಲ್ಲವೆ? ಅದಕ್ಕೆ ಕೂಡ ಅವಳು ಅಳಲಿಲ್ಲವಲ್ಲ -ಎಲೆ ಹುಚ್ಚಿ! ನಾಳೆ ಬಂದು ಬಿಡುತ್ತಾರೆ ನೋಡು—ನಿನ್ನ ಗಂಡ! ನಾನು ಹೇಳುತ್ತೇನೆ—ನೋಡೇಳು?" ಎಂದು ಸಮಾಧಾನಗೊಳಿಸಿದರು. ಕಮಲಾಂಬಾಳ್ ಬಿಕ್ಕಿ ಬಿಕ್ಕಿ ಅಳುತ್ತ ಬಾಯಿಂದ ಕಣ್ಣೀರನ್ನು ಪಾನಮಾಡುತ್ತ "ಅವರು ಇನ್ನು ಬರುವರೆಂದು ನನಗೆ ತೋರುವುದಿಲ್ಲ" ಎಂದು ಮೈಯಲ್ಲ ನಡುಗುತ್ತ ಹೇಳಲು—ಅವರು ಏನೊ ತಮಗೆ ತಿಳಿದ ಸಮಾಧಾನಗಳನ್ನು ಹೇಳಿ ಸಂತೈಸಿದರು.

## ೨೭. ತನ್ನ ಕರ್ಮ ತನ್ನನ್ನೇ ಸುಡುವುದು

ಮರುದಿನ ಬೆಳಗಾಯಿತು. ಬೆಳಗಾದ ಎರಡು ಘಳಿಗೆಗೆಲ್ಲ ಮುಸಕು ಹಾಕದ ಬೋಳತಲೆ, ಬಾಳೆಪಟ್ಟೆ, ಸವುಟೆನಕಾವು, ಬಟ್ಟೆಗಂಟು, ಕಂಬಳಿ, ಹಗ್ಗ, ಬೆರಣೆ ಮೊದಲಾದ ಅಲಂಕಾರ ಸಾಮಗ್ರಿಗಳನ್ನು ಕೈಯಲ್ಲಿ ಹಿಡಿದು ಕೊಂಡು, ಸುಣ್ಣ ಹಚ್ಚಿದ ಕೆನ್ನೆಯೂ, ಅರಿಸಿನ ಗೀರಿದ ಹಣೆಯೂ ಉಳ್ಳ ವಳಾದ ಒಬ್ಬ ಎಳೆ ವಯಸ್ಸಿನ ವಿಧವೆ ನಡುಬೀದಿಯಿಂದ ಓಡಿ ಒಂದು ಪಕ್ಕದ ಲ್ಲಿದ್ದ ಸಬ್‌ಮ್ಯಾಜಿಸ್ಟ್ರೇಟ್ ಮನೆಗೆ ಹೋಗಿ, “ವೈದ್ಯನಾಥ! ವೈದ್ಯನಾಥ! ಎಲಾ ಪೈತ್ಯನಾಥಾ!(ಹುಚ್ಚುನಾಥ)”ಎಂದು ಕೂಗಲು,ಒಳಗಿದ್ದ ವೈದ್ಯನಾಥ ಅಯ್ಯರ್ ಬೆಚ್ಚುಬಿದ್ದು, “ಹೀಗೆ ಯಾರು ನಮ್ಮನ್ನು ಕರೆದಾರು?” ಎಂದು ಬೀದಿ ಬಾಗಿಲಿಗೆ ಬಂದು ನೋಡಲು ಸುಬ್ರಹ್ಮಣ್ಯ ಅಯ್ಯರ್ ಹೆಂಡತಿ ಪೊನ್ನಮ್ಮಾಳ್ ಮೇಲೆ ವಿವರಿಸಿದ ವೇಷದೊಡನೆ ನಿಂತಿದ್ದಳು.” ಎಲಾ ವೈದ್ಯನಾಥಾ, ನನ್ನ ಭಾವ ಇನ್ನು ಇಲ್ಲಿ ಬಾರಲಾರರು. ನಾನು ಯಾರು ಗೊತ್ತೇ? ಸುಬ್ರಹ್ಮಣ್ಯ ಅಯ್ಯರ್ ಎಂದು ಒಬ್ಬರು ಇದ್ದರಲ್ಲವೆ? ಅವರ ಹೆಂಡತಿ. ಅವರು ಹೋಗಿ ಬಿಟ್ಟರು. ನೀನು ಸಾವಿರ ರೂಪಾಯಿ ಕೊಡು. ದೀಕ್ಷಿತರಿಗೆ ಕೊಡಬೇಕು. ನನಗೆ ಔಷಧ ಇಡಲು ಗೊತ್ತಿದೆಯಲ್ಲಾ. ಸುಬ್ಬಮ್ಮಾಳ್ ಹೋಗಿದ್ದಳೋ, ಚಿದಂಬರಕ್ಕೆ. ನನ್ನ ಭಾವ ಇಲ್ಲಿ ಬರ ಲಾರರು ಇನ್ನು ಮೇಲೆ” ಎಂದು ಹೇಳಿ ಚಿಂಗ್ ಚಿಂಗ್ ಎಂದು ಕುಣಿದು, ಆಮೇಲೆ, “ಸುಬ್ರಹ್ಮಣ್ಯ ಅಯ್ಯರ್ ಒಳ್ಳೆಯವರು. ಸತ್ತುಹೋದರು. ನಾನು ಕೊಲ್ಲಲಿಲ್ಲ ಅವರನ್ನು. ನಾನು ಕೊಲ್ಲಲಿಲ್ಲ. ಕಣ್ಣುಗುಡ್ಡು ನೋಡು. ನೀನು ಹೊಡೆ ಅವರನ್ನು. ಸವುಟನ್ನು ತೆಗೆದು ತಿವಿ. ಕಂಬಳಿ ಹಗ್ಗದಿಂದ ಕಟ್ಟ ಇಗೊ ಈ ಬಾಳೆಯ ಪಟ್ಟೆಯನ್ನು ತೆಗೆದುಕೊಂಡು ಹೊಡೆದು,ಈ ಬಟ್ಟೆಯನ್ನು ಸುತ್ತು ಕತ್ತಿನಲ್ಲಿ. ನೋಡ್ತೀಯಾ? ಏನು ನೋಡೋದು? ಅಯ್ಯೋ! ನನ್ನ ಚೆಲುವಿನ ದೊರೆಯೇ, ನನ್ನ ಹಾಳುಮಾಡಿದ ರಾಜನೆ! ನಾನು ಕೆಟ್ಟೆನಲ್ಲಾ! ಚಂಡಿಯಾಗಿ ಕೂದಲಿದೆ ನನ್ನ ತಲೆಯಲ್ಲಿ—ನಾನು ತುಂಬ ಚೆಲುವೆ—ನನ್ನ ಅಮ್ಮ ಬಹಳ ಕೆಟ್ಟವಳು — ರಾಕ್ಷಸಿ — ಅವಳು ಬಂದಾಳು. ಒಳಗೆ

ಹೋಗೋಣ ಬಾ" ಎಂದು ಬೊಗಳುತ್ತ "ನಾನು ನಿನಗೆ ಒಂದು ಸಂಗತಿ ಹೇಳುತ್ತೇನೆ. ಯಾರಿಗೂ ಹೇಳಬೇಡ" ಎಂದು ಕೇಳಲು, ವೈದ್ಯನಾಥ ಅಯ್ಯರ್ "ಓಹೋ! ಇವಳಿಗೆ ಚಿತ್ತ ಸ್ವಾಧೀನವಿಲ್ಲ. ಎಲ ಎಲಾ—ಹೀಗಾಗಬೇಕೆ? ಸ್ವಲ್ಪ ದಿನಕ್ಕೆ ಹಿಂದೆಯೇ ಏನೋ ಒಂದು ತರಹವಾಗಿ ಇದ್ದಳೆಂದು ಹೇಳುತ್ತಿದ್ದರು. ಹುಚ್ಚೇ ಹಿಡಿದು ಬಿಟ್ಟಿತೆ?" ಎಂದು ಪರಿತಾಪಗೊಂಡರು.

ಸುಬ್ರಹ್ಮಣ್ಯ ಅಯ್ಯರ್ ಸಾಯುವ ವೇಳೆಯಲ್ಲಿ ನಡೆದ ವೃತ್ತಾಂತವನ್ನು ವಿಸ್ತಾರವಾಗಿ ಹೇಳಿದ್ದೇವೆ. ಅವರು ನಡುರಾತ್ರಿಯಲ್ಲಿ ಪೊನ್ನಮ್ಮಾಳ ಕೈಯ್ಯನ್ನು ಹಿಡಿದುಕೊಂಡು ಹಲ್ಲನ್ನು ಕಡಿಯುತ್ತ ಕಣ್ಣುಗಳಲ್ಲಿ ಕಿಡಿ ಹಾಕಲು, "ಚಂಡಾಳಿ! ರಾಕ್ಷಸಿ!" ಎಂದು ಬೈದು ಹೊಡೆಯಲು ಬಂದುದು ಅವಳ ಜ್ಞಾಪಕದಿಂದ ಮಾಸಿಹೋಗಲೇ ಇಲ್ಲ. ಆಗ ಅವಳು ತುಂಬ ಹೆದರಿಬಿಟ್ಟಳು. ತನ್ನ ಗಂಡನ ಮರಣಕ್ಕೆ ತಾನು ಕಾರಣವಾದುದರಿಂದ ತನ್ನನ್ನು ಬ್ರಹ್ಮಹತ್ಯ ಸುತ್ತಿಕೊಳ್ಳುವುದೆಂಬ ಭಯವೂ, ಆ ರಾತ್ರಿ ಅವರು ಕಣ್ಣು ಬಿಟ್ಟು ನೋಡಿದ ಘೋರವಾದ ನೋಟ ಅವಳಲ್ಲಿ ಉಂಟುಮಾಡಿದ ಹೆದರಿಕೆಯೂ ಅವಳ ಚಿತ್ತವನ್ನು ಪಲ್ಲಟ ಮಾಡಿದುವು. ಯಾವಾಗಲೂ ಅದೇ ಜ್ಞಾಪಕವಾಗಿದ್ದುದರಿಂದ ಅದು ಅವಳ ಮನಸ್ಸಿನಲ್ಲಿ ಆಳವಾಗಿ ಹೂತು, ಅವಳ ಸಹಜ ಪ್ರಜ್ಞೆಯನ್ನು ದೂರ ಮಾಡಿತು. ಅನಂತರ ಕಮಲಾಂಬಾಳಿಗೆ ವಿರೋಧವಾಗಿ ಶಂಕರಿಯಮ್ಮಾಳ್, ಸುಬ್ಬಮ್ಮಾಳ್ — ಇಬ್ಬರೂ ಸೇರಿ ಮಾಡಿದ ದುರಾಲೋಚನೆಗಳೂ, ಮುತ್ತುಸ್ವಾಮಿ ಅಯ್ಯರ್ ಊರಿಗೆ ಬರದಂತೆ ಮಾಡಿದ ಕಾರ್ಯವೂ ಅವಳಿಗೆ ಅಲ್ಪಸ್ವಲ್ಪ ಉಳಿದಿದ್ದ ಚಿತ್ತ ಸ್ವಾಧೀನವನ್ನೂ ನಾಶಗೊಳಿಸಿದುವು. "ತನ್ನ ಕರ್ಮ ತನ್ನನ್ನು ಸುಡುವುದು" ಎಂಬ ಹೇಳಿಕೆ ಅವಳ ವಿಷಯದಲ್ಲಿ ಚೆನ್ನಾಗಿ ಪರಿಣಮಿಸಿತು. ಪೊನ್ನಮ್ಮಾಳ ನಡತೆ ದುರ್ನಡತೆಯಾದರೂ ಅವಳು ಅದಕ್ಕೆ ತಕ್ಕ ದೃಢಚಿತ್ತವನ್ನುಳ್ಳವಳಲ್ಲ. ಅವಳ ಮನಸ್ಸು ತನ್ನ ಕಾರ್ಯಗಳನ್ನು ತನಗೇ ಒಂದಕ್ಕೆ ಹತ್ತಾಗಿ ಕಾಣಿಸುವಂತಹ ಭೂತಕನ್ನಡಿಯಂತೆ ಇದ್ದಳು. ಕೆಲವು ಕನ್ನಡಿಯು ದೀಪಗಳು ದೀಪದ ಬೆಳಕನ್ನು ಹೆಚ್ಚು ಪ್ರಕಾಶಿಸುವಂತೆ ಮಾಡುವುವು. ಪ್ರಕಾಶ ಮಿತಿಮೀರಿ

ಹೋದರೆ ಉಷ್ಣವು ತಾಳಲಾರದೆ ಒಡೆದು ಹೋಗುವಂತೆ ಅವಳ ಮನಸ್ಸೂ ಸುಲಭದಲ್ಲಿ ಒಡೆದುಹೋಗುವಂತೆ ಬಲಹೀನವಾದುದು.

ಅವಳಿಗೆ ಹುಚ್ಚು ಹಿಡಿದ ಸಂಗತಿಯನ್ನು ಶಂಕರಿ ಅಮ್ಮಾಳ್ ಎಷ್ಟು ಬಚ್ಚಿಟ್ಟರೂ ಊರಿಗೆಲ್ಲ ತಿಳಿದು ಹೋಯಿತು. ಅವಳ ಮನೆಯಲ್ಲಿ ತಕ್ಕ ಕಾವಲಿನಲ್ಲಿ ಇರಿಸಲ್ಪಟ್ಟಳು. ನೂತನ ವಿಧವೆ ಆದುದರಿಂದ ಗಂಡನು ಮರಣ ವಾದ ಮೇಲೆ ಒಂದು ವರ್ಷವಾಗುವವರೆಗೂ ಹೊರಗೆ ಹೋಗಬಾರದೆಂಬ ಜಾತಿ ನಿಯಮದಂತೆ ಅವಳು ಹಲವು ಬಾರಿ ಹೊರಗೆ ಹೋಗಲು ಉದ್ದೇಶಿ ಸಿದರೂ, ಮನೆಗೆ ಬಂದು ಹೋಗುವವರ ಬಳಿ ಬೊಗಳಲು ಆರಂಭಿಸಿದರೂ ಅವಳನ್ನು ಶಂಕರಿ ಅಮ್ಮಾಳ್ ಒಂದು ಪ್ರತ್ಯೇಕ ಕೋಣೆಯಲ್ಲಿ ಹಾಕಿ ನಿರ್ಬಂಧಿಸಿದಳು. ಯಾರಾದರೂ "ಪೊನ್ನಮ್ಮಾಳ್ ಎಲ್ಲಿ ?" ಎಂದು ಕೇಳಿದರೆ ಮಲಗಿ ನಿದ್ದೆ ಹೋಗುತ್ತಾಳೆ. ಮುಸುರೆ ಉಜ್ಜುತ್ತಾಳೆ." ಅಥವಾ ಅವಳಿಗೆ ಹೊರಗೆ ಬರುವುದಕ್ಕೇ ಇಷ್ಟವಿಲ್ಲ. ಒಳಗೇ ಮುಸುಕು ಹಾಕಿ ಕೊಂಡು ಅಳುತ್ತಿದ್ದಾಳೆ." ಎಂದು ಈ ಬಗೆಯ ಸಮಾಧಾನಗಳನ್ನು ಹೇಳಿ, ಮರೆ ಮಾಚಿದಳು. ಈ ಬಗೆಯ ಕಾವಲಿನಲ್ಲಿದ್ದರೂ, ಅಂದು ಏನೋ ಆಕಸ್ಮಿಕವಾಗಿ ಬಾಗಿಲು ಬೀಗ ಹಾಕದೆ ಇದ್ದುದರಿಂದ ಪೊನ್ನಮ್ಮಾಳ್ ಇದೇ ಸಮಯವೆಂದು ಸದ್ದುಮಾಡದೆ ಹೊರಕ್ಕೆ ಬಂದು ಆ ಬೀದಿಯಲ್ಲಿ ಕೂಡ ನಿಲ್ಲದೆ, ಮತ್ತೊಂದು ಬೀದಿಗೆ ನಡೆದು ಬಿಟ್ಟಳು. ಅದು ಬೆಳಗಿನ ವೇಳೆಯಾ ದುದರಿಂದ ಊರಲ್ಲಿದ್ದ ಗಂಡಸರೆಲ್ಲರೂ ನದಿಯ ದಡಕ್ಕೆ ಹೋಗಿದ್ದರು. ಸ್ತ್ರೀಯರೆಲ್ಲರೂ, ಮನೆಯೊಳಗಿನ ಕೆಲಸಗಳಲ್ಲಿ ಮಗ್ನರಾಗಿದ್ದರು. ಪೊನ್ನಮ್ಮಾ ಳನ್ನು ತಡೆಯಲು ಯಾರೂ ಇರಲಿಲ್ಲ. ಅವಳು ನೇರವಾಗಿ ವೈದ್ಯನಾಥ ಅಯ್ಯರ್ ಮನೆಗೆ ಬಂದು ಮೇಲೆ ಹೇಳಿದಂತೆ ಹುಚ್ಚಾಟಬಟ್ಟೆ ಮಾತನಾಡ ಲಾರಂಭಿಸಿದಳು.

ವೈದ್ಯನಾಥ ಅಯ್ಯರಿಗೆ ಬಹಳ ದಿನಗಳಿಂದ ಮಗು ನಟರಾಜನ ವಿಷ ಯವಾಗಿ ಅವಳ ಮೇಲೆ ಸಂದೇಹವಿತ್ತು. ಮತ್ತು ತನ್ನ ಗಂಡನನ್ನು ಮದ್ದು ಕೊಟ್ಟು ಅವಳು ಕೊಂದಳೆಂಬ ವದಂತಿ ಅವರ ಕಿವಿಗೂ ಮುಟ್ಟಿತ್ತು. ಆದು ದರಿಂದ ತನ್ನ ಮುಖ್ಯ ಸ್ನೇಹಿತರಾದ ಮುತ್ತುಸ್ವಾಮಿ ಅಯ್ಯರವರ

ಕುಟುಂಬದ ಚರಿತ್ರೆಯನ್ನು ತಿಳಿಯಲು ಅದೇ ಸಮಯವೆಂದು ಭಾವಿಸಿ ಅವರು ಒಳಗೆ ಯಾರನ್ನೂ ಬಿಡಬಾರದೆಂದು ಖಂಡಿತವಾದ ಆಜ್ಞೆಯನ್ನು ಮಾಡಿ ಸೇವಕರನ್ನು ಬಾಗಿಲ ಬಳಿ ನಿಲ್ಲಿಸಿ ಪೊನ್ನಮ್ಮಾಳನ್ನು ಹಿಂಬಾಲಿಸಿ ಒಳಗೆ ಹೋದರು. ಅವಳು "ಹಾಲಿನಲ್ಲಿ ಕಲಿಸಿದರೆ ತಿಳಿಯಲಾರದು. ಬಿಂದಿಗೆ ಬಿಂದಿಗೆಯಾಗಿ ಬಾಯಿಂದ ತೆಗೆದು ಹಾಕಿದನು—ಚಿತೆಯಲ್ಲಿ ಹೋಗುವನು— ಬೂದಿಯಾಗುವನು—ಪಿಶಾಚಿ ಕಣ್ಣು ಬಿಡುವಂತೆ—ನೋಟವನ್ನು ನೋಡು ತಿವಿ ಕಣ್ಣನ್ನು—ಇಗೋ — ಈ ಬಾಳೆಯ ಪಟ್ಟೆಯನ್ನು ತೆಗೆದುಕೊಂಡು ಹೊಡೆ—ನಮ್ಮ ಭಾವ ಇನ್ನು ಇಲ್ಲಿ ಬರಲಾರರು" ಎಂದು ಮತ್ತೆ ನಿರರ್ಗಳ ವಾಗಿ ಆರಂಭಿಸಿದುದರಿಂದ ವೈದ್ಯನಾಥ ಅಯ್ಯರ್ "ಏತಕ್ಕೆ ಮುತ್ತುಸ್ವಾಮಿ ಅಯ್ಯರ್—ಬರಲಾರರೆನ್ನುತ್ತೀಯ? ಏನು ವಿಶೇಷ? ನಿನಗೆ ಹೇಗೆ ಗೊತ್ತು?" ಎಂದು ಕೇಳಲು "ನನಗೆ? ಸೇರಿಕೊಂಡು ಮಾತನಾಡಿ ಮಾಡಿ—ಕುಟುಂಬ ವನ್ನು ಹಾಳುಮಾಡಿದರು. ಅದರಲ್ಲಿ ನಾನು ಸೇರಲಿಲ್ಲ: ಇಲ್ಲ, ನಿಜವಾ ಗಿಯೂ ಇಲ್ಲ. ದೀಕ್ಷಿತರಿಗೆ ೫೦೦ರೂಪಾಯಿ ಸುಬ್ಬಮ್ಮಾಳಿಗೆ ೫೦೦ ರೂಪಾಯಿ ಕೊಡಬೇಕು. ಹೌದು—ನನಗೆ ಗೊತ್ತಿಲ್ಲ, ನಾನು ಒಲ್ಲೆನೆಂದು ಹೇಳಿಬಿಟ್ಟೆ ಅಯ್ಯೋ! ಅಯ್ಯಯ್ಯೋ! ಕಣ್ಣನ್ನು ನೋಡು—ತಿವಿದು ಹಾಕು. ಏನೂ ತಿಳಿ ಯಲಿಲ್ಲವೆ? ಅಯ್ಯೋ! ನನ್ನ ಚೆಲುವಿನ ದೊರೆಯೇ—ನನ್ನ ಹಾಳು ಮಾಡಿದ ರಾಜನೇ—ಸತ್ತು ಹೋದೆಯಲ್ಲಾ, ನಾನು ಕೊಲ್ಲಲಿಲ್ಲ—ಕೊಲ್ಲಲಿಲ್ಲ—" ಎಂದು ಹೀಗೆ ಬೊಗಳುತ್ತ ಹೋಗಲು ಈ ಹುಚ್ಚು ಮಾತುಗಳಿಂದ ವೈದ್ಯನಾಥ ಅಯ್ಯರ್ ಸಮಯೋಚಿತವಾದ ಪ್ರಶ್ನೆಗಳನ್ನು ಹಾಕಿ ಅವಳ ಮನಸ್ಸನ್ನು ತನ್ನ ದಾರಿಗೆ ತಿರುಗಿಸಿಕೊಂಡು ಬೇಕಾದ ವಿಷಯಗಳನ್ನು ಗ್ರಹಿಸಿಕೊಂಡರು. ಶಂಕರಿಅಮ್ಮಾಳ, ಈಶ್ವರ ದೀಕ್ಷಿತರು, ಸುಬ್ಬಮ್ಮಾಳ್—ಈ ಮೂವರು ಸೇರಿ ಮಾತನಾಡಿ ಕಮಲಾಂಬಾಳನ್ನು ಕುರಿತು ಮುತ್ತುಸ್ವಾಮಿ ಅಯ್ಯರ್ ಬಳಿ ಅಪವಾದ ಹೇಳಿ ಅವರು ಊರಿಗೆ ಬರದಂತೆ ಮಾಡಿದರೆಂದು ಅವರಿಗೆ ತಿಳಿಯಿತು.

ಇಷ್ಟರಲ್ಲಿ ಶಂಕರಿಅಮ್ಮಾಳೂ, ಸುಬ್ಬುವೂ, ಪೊನ್ನಮ್ಮಾಳನ್ನು ಕಾಣದೆ ಬೀದಿಯಲ್ಲೆಲ್ಲ ಮನೆಮನೆಗೂ ಹೋಗಿ ಕೂಗುತ್ತ ಬಂದಾಗ ವೈದ್ಯನಾಥ

ಅಯ್ಯರ್ ಅವರನ್ನು ಹಾಗೆಯೇ ನಿಲ್ಲುವಂತೆಯೂ, ಅವರನ್ನು ಹೊರಗಡೆ ಬಿಡದಂತೆಯೂ ಪೋಲೀಸಿನವರಿಗೆ ಆಜ್ಞೆಮಾಡಿ, ಊರಿನಲ್ಲಿರುವ ಮುಖ್ಯವಾದ ದೊಡ್ಡ ಮನುಷ್ಯರಿಗೆ ಹೇಳಿಕಳುಹಿಸಿ, ಅವರ ಬಳಿ ತಾನು ಪೊನ್ನಮ್ಮಾಳಿಂದ ಗ್ರಹಿಸಿದ ವೃತ್ತಾಂತವನ್ನು ಹೇಳಿ ಅವಳ ಉನ್ಮಾದಾವಸ್ಥೆಯ ಮಾತಿನ ಆಧಾರದ ಮೇಲೆ ಆ ವೃತ್ತಾಂತಕ್ಕೆ ರುಜುವಾತು ಮಾಡಲು, ಊರಿನವರೆಲ್ಲ ಶಂಕರಿಯನ್ನೂ ಸುಬ್ಬಮ್ಮನನ್ನೂ ಬಾಯಿಗೆ ಬಂದಂತೆ ಬೈದು ಅಪಮಾನಗೊಳಿಸಿದರು. ವೈದ್ಯನಾಥ ಅಯ್ಯರ್, ಈಶ್ವರ ದೀಕ್ಷಿತರನ್ನೂ ಬರಮಾಡಿಕೊಂಡು, ಈ ಮೂವರನ್ನು ಸೆರೆಮನೆಯಲ್ಲಿಡಬೇಕೆಂದು ಆಜ್ಞೆ ಮಾಡಿದರು. ಇವರಲ್ಲಿ ಒಬ್ಬೊಬ್ಬರೂ, "ನಿನ್ನಿಂದ ಬಂತು ಇಷ್ಟು : ನಿನ್ನ ಮಗಳಿಗಾಗಿ ನನ್ನನ್ನು ಕೆಡಿಸಿದೆ" ಎಂತಲೂ, "ನಿನ್ನಿಂದ ಬಂತು ಇಷ್ಟು, ನೀನೇ ಅಲ್ಲವೇನೆ ಯೋಚನೆಯನ್ನು ಹೇಳಿದೆ" ಎಂದೂ ಸೆರೆಮನೆಯಲ್ಲಿ ಒಬ್ಬರನ್ನೊಬ್ಬರು ಬೈದು, ಕೈಗಳಿಂದ ಹೊಡೆದಾಡಿ ಜಗಳವಾಡಿಕೊಂಡರು. ಈಶ್ವರ ದೀಕ್ಷಿತರು ಲಂಚವನ್ನು ಕೊಟ್ಟೇ ತಪ್ಪಿಸಿಕೊಳ್ಳಲು ಸಾಧ್ಯವೆಂದು ನಂಬಿ ಮೌನವಾಗಿ ಒಂದು ಮೂಲೆಯಲ್ಲಿ ಕುಳಿತುಕೊಂಡಿದ್ದರು.

ಇದು ಹೀಗಿರಲು, ವೈದ್ಯನಾಥ ಅಯ್ಯರವರ ಮನೆಯಲ್ಲಿ ನಡೆದ ವಿಷಯಗಳು ಕಮಲಾಂಬಾಳ್‌ಗೆ ತಿಳಿದು ಬಂದಾಗ, ಕಮಲಾಂಬಾಳ್,"ಅಯ್ಯೊ! ಏನು ಪಾಪ ಮಾಡಿದೆನೊ? ಚೆನ್ನಾಗಿ ಅನುಭವಿಸುತ್ತಿದ್ದೇನೆ. ಅವರ ಮೇಲೆ ದೂರು ಹೇಳಲು ಅವರದೇನು ತಪ್ಪು? ನನ್ನ ಪಾಪ, ಅವರನ್ನು ಅಂತಹ ಕೆಟ್ಟ ಕೆಲಸ ಮಾಡುವಂತೆ ಮಾಡಿಸಿತು. ಅವರೇನು ಮಾಡಿಯಾರು? ಈ ಅಪವಾದವನ್ನು ನಂಬಿ ಅವರು ಎಲ್ಲಿ ದೇಶಾಂತರಕ್ಕೆ ಹೋದರೊ, ಅಥವಾ ಪ್ರಾಣವನ್ನೇ ನೀಗಿ ಕೊಂಡರೊ! ಅಯ್ಯೊ! ಹೀಗೂ ಆಗಬಹುದೆ! ದೈವವೆ! ಅವರನ್ನು ನಾನು ಎಂದು ನೋಡೇನು? ನಾನು ನಿರಪರಾಧಿಯೆಂದು ಅವರಿಗೆ ನಾನು ಹೇಗೆ ಋಜು ಪಡಿಸಲಿ!" ಎಂದು ಅಳಲು ಸುತ್ತುಮುತ್ತಲಿದ್ದವರು ಅವಳನ್ನು ಸಮಾಧಾನ ಗೊಳಿಸಿದರು. ವೈದ್ಯನಾಥ ಅಯ್ಯರ್ ಈ ದೊಡ್ಡ ಕುಟುಂಬಗಳಿಗೆ ಸಂಭವಿಸಿದ ಈ ದುರದೃಷ್ಟಕ್ಕಾಗಿ ಪರಿತಾಪ ಹೊಂದಿ, ಮುತ್ತುಸ್ವಾಮಿ ಅಯ್ಯರವರ ದೊಡ್ಡಪ್ಪನ ಮಗನಾದ ಮಂಜಾಕುಪ್ಪದ

ಡೆಪ್ಯುಟಿ ಕಲೆಕ್ಟರ್ ನಾರಾಯಣಸ್ವಾಮಿ ಅಯ್ಯರಿಗೆ ಒಂದು ತಾರನ್ನು ಕೊಟ್ಟು ಅವರು ಬರುವವರಿಗೂ ಅವರ ಗೃಹಕೃತ್ಯಗಳನ್ನು ತಾನೇ ಗಮನಿಸುತ್ತ ಬಂದರು.

ಇಲ್ಲಿ ಈ ರೀತಿಯಾಗಿರಲು ಮದರಾಸಿನಲ್ಲಿ ಒಂದು ದಿನ ರಾತ್ರಿ ಸಮುದ್ರದ ಗಾಳಿ ಅಲೆಗಳ ಆವೇಶವನ್ನು ತಾನೂ ಪಡೆದು, ಯೌವನಾವಸ್ಥೆಗೆ ಸಹಜವಾದ ಕುತೂಹಲದೊಡನೆ ಹಲವು ಕಣ್ಣುಗಳುಳ್ಳ ಕಿಟಿಕೆಗಳ ಮೂಲಕ ಒಳಗೆ ಪ್ರವೇಶಿಸಿ, ಚೆನ್ನಾಗಿ ವಿಮರ್ಶಿಸಿ, ಚೀರಿ, ಚದರಿ, ಓಡಿ, ನಲಿದು ಆಟವಾಡುತ್ತಿದ್ದ ಒಂದು ಮಹಡಿಯ ಕೋಣೆಯಲ್ಲಿ ಹಾಸಿದ್ದ ಸುಪ್ಪತಿಗೆಯ ಮೇಲೆ ಶ್ರೀನಿವಾಸನೂ, ಲಕ್ಷ್ಮಿಯೂ ಕ್ಷೀರಸಾಗರದ ಮೇಲೆ ಪವಡಿಸಿದಂತೆ ಕಾಮನೂ ರತಿಯೂ ಸೇರಿದ್ದ ದೃಶ್ಯದಂತೆ, ಅಂತರಂಗದಲ್ಲಿಯೂ ಬಾಹ್ಯದಲ್ಲಿಯೂ ಐಕ್ಯಗೊಂಡು, ಮಾತಾಡುತ್ತ ನಗುತ್ತ ಇದ್ದರು. ಸ್ವಲ್ಪ ಹೊತ್ತು ಹೀಗೆ ಉಲ್ಲಾಸವಾಗಿ ಕಳೆದ ನಂತರ ತಾವು ಯಾವಾಗಲೂ ಓದುತ್ತಿದ್ದ ರಾಮಾಯಣವನ್ನು ಕೈಯಲ್ಲಿ ತೆಗೆದುಕೊಂಡರು. ತೆಗೆದುಕೊಂಡು ಅದನ್ನು ತೆರೆಯಲು, ಸತ್ತುಹೋದ ಇಂದ್ರಜಿತ್ತನ್ನು ಕುರಿತು ರಾವಣನು ಪ್ರಲಾಪಿಸುವ ಘಟ್ಟ ಬಂದಿತು. ಆದನ್ನು ಇಬ್ಬರೂ ಓದಲು ಆರಂಭಿಸಿದರು. ರಾವಣೇಶ್ವರನ ಗಾಂಭೀರ್ಯವನ್ನೂ, ಅವನ ಬೆಂಕಿಯಂತಹ ಕೋಪವನ್ನೂ ಕಂಡು ಪಕ್ಕದಲ್ಲಿ ಪರಿವಾರದವರೂ ಮಂತ್ರಿಗಳೂ—ಎಲ್ಲರೂ ಅನುಭವಿಸಿದ ಸಂತಾಪವನ್ನು ಕವಿ ಒಂದು ಅಕ್ಷರಕ್ಕೆ ಲಕ್ಷ ಬಹುಮಾನ ಯೋಗ್ಯವಾದ ರೀತಿಯಲ್ಲಿ ವರ್ಣಿಸಿರುವುದನ್ನು ಬಹಳ ರಸವತ್ತಾದ ರೀತಿಯಲ್ಲಿ ಹಾಡಿಕೊಂಡರು.

ರಾವಣನು ಮಾಡಿದ ಪ್ರಲಾಪವನ್ನು ಓದುವಾಗ ರಾವಣನು ರಾಕ್ಷಸ, ಆದರೂ ಅವನಲ್ಲಿ ಸತ್ತವರಿಗಾಗಿ ಇಷ್ಟು ಪರಿತಾಪವಿದೆಯಲ್ಲಾ ಎನ್ನಿಸಿತು ಲಕ್ಷ್ಮಿಗೆ. ರಾಮಚಂದ್ರನು ಖರದೂಷಣರನ್ನು ಕೊಂದಾಗ ಸೀತಾದೇವಿ ಯುದ್ಧದಲ್ಲಿ ಸತ್ತ ರಾಕ್ಷಸರನ್ನು ಕುರಿತು ಕೋಟಿ ಕಣ್ಣೀರು ಸುರಿಸಿದಳಂತೆ. ಆ ದೃಶ್ಯ ಲಕ್ಷ್ಮಿಗೆ ಆಗ ಜ್ಞಾಪಕವಾಯಿತು. ಕೂಡಲೆ ಕಳೆದು ಹೋದ ತನ್ನ ತಮ್ಮ ನಟರಾಜನನ್ನು ಕುರಿತು ತನ್ನ ತಂದೆ ಅತ್ತುದು ತಟಕ್ಕನೆ ನೆನಪಿಗೆ ಬಂದಿತು. "ಹೀಗೆಯೇ ನಮ್ಮ ತಂದೆಯೂ ಪ್ರಲಾಪಿಸಿದರು."

"ಅಯ್ಯೋ! ನಟರಾಜಾ!" ಎಂದು ಅಬ್ಬರಿಸುತ್ತ "ಅವನು ಎದುರಿಗೆ ಬಂದು, ತೆವಳಿಕೊಂಡು ಆಟವಾಡುತ್ತಿದ್ದಂತೆ ಇದೆಯಲ್ಲ! ಅಯ್ಯೋ! ಅವನನ್ನು ನೋಡಬೇಕೆಂದು ಆಸೆಯಾಗಿದೆ. ಹೇಗೆ ನೋಡೇನು? ಎರಡು ವರ್ಷಗಳೊಳಗೆ ಬಾಯಿಬಿಟ್ಟು ತೊದಲು ನುಡಿಯನ್ನಾಡಲು ಆರಂಭಿಸಿದ್ದನೆ? ಹೋಗುವ ಮಗುವಲ್ಲವೆ? ಇರುವ ಮಗುವಾಗಿದ್ದರೆ, ಹಾಗೆ ಮಾತಾಡಿರಲಾರ! ಅದು ಕೈಕಾಲನ್ನು ಆಡಿಸುವುದನ್ನೂ, ಅಯ್ಯೋ! ಅದರ ದೊಡ್ಡ ಚೆಲುವಾದ ಕಣ್ಣುಗಳನ್ನೂ ನಾನು ಯಾವಾಗ ಕಂಡೇನು? ಒಂದು ನಿಮಿಷದಲ್ಲಿ ಹೋದ ಜಾಗ ತಿಳಿಯದೆ ಹೋಗಿಬಿಟ್ಟನಲ್ಲಾ!" ಎಂದು ಲಕ್ಷ್ಮಿ ಅಳುತ್ತಿರಲು ಶ್ರೀನಿವಾಸನಿಗೂ ಅಳು ಬಂದಿತು. ಇಬ್ಬರೂ ಸೇರಿ ಬಿಕ್ಕಿ ಬಿಕ್ಕಿ ಅತ್ತು ಆನಂತರ ಬಳಲಿ ನಿದ್ದೆ ಹೋದರು.

ಸುಮಾರು ಎರಡು ಗಂಟೆಗೆ ಆ ಮನೆಯ ಬಾಗಿಲನ್ನು ಯಾರೋ ಬಂದು ಬಲವಾಗಿ ತಟ್ಟಲು ಶ್ರೀನಿವಾಸನು ಬೆಚ್ಚಿಬಿದ್ದು ಎಚ್ಚರಗೊಂಡು ಹೊರಕ್ಕೆ ಬಂದನು. ಬಂದ ಮನುಷ್ಯನು ಶ್ರೀನಿವಾಸನ ಕೈಯ್ಯಲ್ಲಿ ಒಂದು ಅವಸರದ ತಾರನ್ನು ಕೊಟ್ಟನು. ಶ್ರೀನಿವಾಸನು ಅದನ್ನು ಕೈಯ್ಯಲ್ಲಿ ತೆಗೆದುಕೊಂಡು, ಎದೆ ಡಬಡಬ ಎಂದು ಹೊಡೆದುಕೊಳ್ಳುತ್ತಿರಲು, ದೀಪವನ್ನು ಹತ್ತಿಸಿ ಅದನ್ನು ಒಡೆದು ನೋಡಿದನು. ಅದರಲ್ಲಿ "ಮುತ್ತುಸ್ವಾಮಿ ಅಯ್ಯರ್ ಕಾಣಿಸಲಿಲ್ಲ. ಕೂಡಲೆ ಲಕ್ಷ್ಮಿ ಸಮೇತ ಹೊರಟು ಬರಬೇಕು." ಎಂದು ಬರೆದಿತ್ತು.

## ೨೮. ಅನರ್ಥ ಪರಂಪರೆ

ನಾಲ್ಕು ದಿನಗಳಾದ ಮೇಲೆ ಚಿದಂಬರಕ್ಕೆ ಹೋಗುವ ರೈಲಿನಲ್ಲಿ ಒಂದು ಅನುಕೂಲವಾದ ಕೋಣೆಯಲ್ಲಿ, ಕಮಲಾಂಬಾಳ್, ಶ್ರೀನಿವಾಸನ್, ಲಕ್ಷ್ಮಿ, ಸುಂದರಂ—ನಾಲ್ಕು ಜನರೂ ಕುಳಿತಿದ್ದರು. ಸುಂದರನಿಗೆ ಈಗ ವಯಸ್ಸು ಹನ್ನೆರಡಿರಬಹುದು. ಒಳ್ಳೆಯ ಬುದ್ಧಿಶಾಲಿ. ಮನೆಯಲ್ಲಿ ನಡೆದ ಸಂಗತಿಗಳೆಲ್ಲ ತಿಳಿದ ಮೇಲೆ "ತಂದೆಯನ್ನು ನಾನು ನೋಡಬೇಕು." ಎಂದು ಹೆಚ್ಚು

ಆಸೆಗೊಂಡು ಶ್ರೀನಿವಾಸನು ಹೊರಡುವಾಗ ಜೊತೆಯಲ್ಲಿ ಹೊರಟುಬಿಟ್ಟನು. ಕಮಲಾಂಬಾಳ್‍ಗೆ "ಒಂದುವೇಳೆ ಅವನನ್ನೂ, ಲಕ್ಷ್ಮಿಯನ್ನೂ, ಶ್ರೀನಿವಾಸನನ್ನೂ ಉದ್ದೇಶಿಸಿಯಾದರೂ, ತನ್ನ ಗಂಡ ತಮ್ಮ ವಿರಕ್ತಿಯನ್ನು ಬಿಟ್ಟು ಗೃಹಸ್ಥ ಮಾರ್ಗಕ್ಕೆ ತಿರುಗಲಾರರೆ—" ಎಂಬ ಭಾವನೆ. ಹಾಗೆ ಹೋಗ ವಾಗಲೇ ಶ್ರೀನಿವಾಸನು ಪ್ರತಿಯೊಂದು ಸ್ಟೇಷನ್ನಿನಲ್ಲೂ ಕೆಳಗಿಳಿದು ಎಲ್ಲಾ ದರೂ ಮುತ್ತುಸ್ವಾಮಿ ಅಯ್ಯರ್ ಕಾಣಿಸಬಹುದೋ ಎಂದು ಹುಡುಕುತ್ತ ಬಂದನು.

ಶೀರ್‌ಕಾಳಿ ಸ್ಟೇಷನ್ನಿನಲ್ಲಿ ಇಳಿದು, ಮಳೆ ಹುಯ್ಯುತ್ತಿದ್ದುದರಿಂದ ಛತ್ರಿಯನ್ನು ಹಿಡಿದುಕೊಂಡು ಹುಡುಕುತ್ತಿರಲು, ಬೆಲೆ ಬಾಳುವ ಸರಿಗೆ ಟೋಪಿಯನ್ನೂ, ಫಳಫಳವೆಂದು ಮಿನುಗುವ ಕರಿರೇಷ್ಮೆ ಅಂಗಿಯನ್ನೂ ಮೂರು ಕೈ ಅಗಲವುಳ್ಳ ಸರಿಗೆ ಅಂಗವಸ್ತ್ರವನ್ನೂ ಧರಿಸಿ ದಂತದಿಂದ ಮಾಡಿದ ಗೋಮುಖವಿರುವ ಚಿನ್ನದ ಕಟ್ಟು ಹಾಕಿದ ಕೈ ಬೆತ್ತವನ್ನೂ, ಪಟ್ಟು ಗೊಂಚಲಿದ್ದ ರೇಷ್ಮೆಯ ಛತ್ರಿಯನ್ನೂ ಹಿಡಿದುಕೊಂಡು, ಕಾಲಿನಲ್ಲಿ ದಿವ್ಯವಾದ ಜಪಾನಿನ ಚಡಾವನ್ನು ಮೆಟ್ಟಿ, ಎದೆಯ ಮೇಲೆ ಚಿನ್ನದ ಗಡಿಯಾರ ಸರಪಳಿಯನ್ನು ಹಾಕಿಕೊಂಡ ಒಬ್ಬ ಅಲಂಕಾರ ಪುರುಷನು ಅವನ ಬಳಿ ಬಂದು "ಗುಡ್ ಮಾರ್ನಿಂಗ್!" ಎಂದು ಸಲಾಮು ಮಾಡಿ, ವಜ್ರದ ಉಂಗುರಗಳನ್ನು ಧರಿಸಿದ ತನ್ನ ಕೈಯಿಂದ ಅವನ ಕೈಯನ್ನು ಕುಲುಕಿ, "ಏನು ಸೌಖ್ಯವೆ! ಬಹಳ ದಿನಗಳಾಯಿತೆ ನೋಡಿ!" ಎಂದು ಯೋಗ ಕ್ಷೇಮಗಳನ್ನು ವಿಚಾರಿಸಿದನು. ಶ್ರೀನಿವಾಸನಿಗೆ ಆ ಮನುಷ್ಯನನ್ನು ಹಿಂದೆ ನೋಡಿದ ನೆನಪೇ ಆಗಲಿಲ್ಲ. ಆದರೆ ಅವನನ್ನು "ನೀವು ಯಾರು?" ಎಂದು ಕೇಳುವುದು ಅಲೌಕಿಕವೆಂದು ಭಾವಿಸಿ, ತಿಳಿದವನಂತೆ ನಟಿಸಿ, ತಾನೂ ಅವನ ಯೋಗಕ್ಷೇಮಾತಿಶಯಗಳನ್ನು ಅಕ್ಕರೆಯಿಂದ ವಿಚಾರಿಸಿದನು. ಆ ಮನುಷ್ಯನು ಅವನ ಕೈಯಲ್ಲಿ ತನ್ನ ಕೈಯನ್ನು ಪೋಣಿಸಿಕೊಂಡು, ಉಲ್ಲಾಸವಾಗಿ ಅತ್ತ ಇತ್ತ ನಡೆದುಕೊಂಡು, ಅವನೊಡನೆ ಮಾತಾಡುತ್ತಿರಲು, ಶ್ರೀನಿವಾಸನು, "ರೈಲು ಹೊರಡಲು ಹೊತ್ತಾಯಿತು—ಹೋಗಬೇಕಲ್ಲಾ" ಎನ್ನಲು ಅದಕ್ಕೆ ಅವನು, ಇಲ್ಲ— ಇಂದು ಇನ್ನೂ ಅರ್ಧಗಂಟೆ ಇಲ್ಲಿ ರೈಲು

ನಿಲ್ಲಬೇಕಾಗಿದೆ. ಉತ್ತರದಿಂದ ಬರುವ ರೈಲು ಬಂದ ಮೇಲೆಯೇ ಇದು ಹೊರಡಬೇಕಾಗಿದೆ—ಎಲಾ ಯಾರೋ— "ಪ್ಯೂನ್! —ಸಾಮಾನುಗಳನ್ನು ಜಾಗ್ರತೆಯಾಗಿ ನೋಡಿಕೊ" ಎಂದು ಸೇವಕನಿಗೆ ತಾಕೀದು ಮಾಡಿ ನಾವು ಸುಳಿಯಲ್ಲಿ ಇಲ್ಲಿ ಏಕೆ ನಿಲ್ಲಬೇಕು? ಈ ಸ್ಟೇಷನ್ ಮಾಸ್ಟರ್ ಮನೆಯವರಿಗೂ ಹೋಗಿ ಬರೋಣ" ನಮಗಾಗಿ ಅಲ್ಲಿ ಟಿಫನ್ ತಯಾರಾಗಿದೆ—ಹೋಗಿ ಬೇಗ ಬಂದು ಬಿಡೋಣ. ನೀವು ಯಾವ ಚಿಂತೆಯನ್ನೂ ಇಟ್ಟು ಕೊಳ್ಳಬೇಡಿ. ಇನ್ನೂ ಅರ್ಧ ಗಂಟೆ ಇದೆ ರೈಲು ಪೊರಡುವುದಕ್ಕೆ. ಬಹಳ ದಿನಗಳಾಯಿತು, ಸಾರ್, ತಮ್ಮನ್ನು ನೋಡಿ. ಕೊನೆಗೆ ನಾನು ಮದರಾಸನ್ನು ಬಿಟ್ಟು ಊರಿಗೆ ಬರುವ ಹಿಂದಿನ ದಿನ ನೋಡಿದುದು!" ಎಂದು ಹೇಳಿ ಅವನನ್ನು ಕರೆದು ಕೊಂಡು ಹೋಗಲು, ರೈಲು ಹೊರಟೇ ಬಿಟ್ಟಿತು. ಶ್ರೀನಿವಾಸನು "ಅಯ್ಯಯ್ಯೋ! ರೈಲು ಹೊರಟು ಬಿಟ್ಟಿತೆ!" ಎನ್ನಲು ಅವನು, ಏನು, ಭಯ ಪಡುತ್ತೀರಯ್ಯ! ಇಷ್ಟು ವರ್ಷಗಳು ಮದರಾಸಿನಲ್ಲಿದ್ದ ಮೇಲೆ... ಗಾಡಿ ಲೈನು ಬದಲಾಯಿಸುವುದಕ್ಕಾಗಿ ಹೋಗುತ್ತಿದೆ--ತಿಳಿಯಲಿಲ್ಲವೆ? ಅಗೊ, ಆ ಗಾಡಿ ಬರುವುದು ಗೊತ್ತಾಗಲಿಲ್ಲವೆ—ಗಂಟೆ ಬಾರಿಸಿದುದು ನಿಮಗೆ ಕೇಳಿಸಲಿಲ್ಲವೆ?" ಎಂದು ಹೇಳುತ್ತಲೆ, ಸ್ಟೇಷನ್ ಮಾಸ್ಟರ ಮನೆಗೆ ಹಿಂದುಗಡೆಯಿಂದ ಕರೆದು ಕೊಂಡು ಹೋದನು. ಕೈಯಲ್ಲಿ ಬಿಚ್ಚುಕತ್ತಿಯನ್ನು ಹಿಡಿದ. ಕುದುರೆ ಸವಾರರು ನಾಲ್ವರು ತಟಕ್ಕನೆ ಶ್ರೀನಿವಾಸನನ್ನು ಎತ್ತಿ ಸಿದ್ಧವಾಗಿದ್ದ ಒಂದು ಕುದುರೆಯ ಮೇಲೆ ಕೂಡಿಸಿ ಕೈಕಾಲುಗಳನ್ನು ಸರಪಳಿಗಳಿಂದ ಬಂಧಿಸಿ, ತಮ್ಮ ವಾಹನಗಳನ್ನು ಓಡಿಸಿಕೊಂಡು ಹೊರಟರು. ಅವನನ್ನು ಕರೆದು ಕೊಂಡು ಬಂದ ಮನುಷ್ಯನೂ, ಒಂದು ಕುದುರೆಯ ಮೇಲೆ ಹತ್ತಿ, ಅವ ರೊಡನೆ ಹೊರಟನು. ಶ್ರೀನಿವಾಸನಿಗೆ ಮಿತಿಮೀರಿದ ಕೋಪ ಉಂಟಾ ಯಿತು. ಆದರೆ ಕುದುರೆ ಹೋಗುವ ವೇಗದಲ್ಲಿ ಅವನು ಏನನ್ನೂ ಮಾಡ ಲಾಗಲಿಲ್ಲ. ಒಂಟಿಯಾಗಿ ಬಿಟ್ಟು ಬಂದ ಹೆಂಡತಿ, ಅತ್ತೆ, ಮೈದುನನಿಗಾಗಿ ವಿಚಾರ ಪಡುತ್ತಾನೆ. "ಅಯ್ಯೋ! ಅವರು ಏನು ಮಾಡುವರೋ" ಎಂದು ಹಲಬುತ್ತಾನೆ. "ಈ ರಾಕ್ಷಸ ಮನುಷ್ಯರನ್ನು ಕೊಂದು ಬಿಡುತ್ತೇನೆ" ಎಂದು ಶಪಥಮಾಡುತ್ತಾನೆ. ತನ್ನನ್ನು ವಂಚಿಸಿ ಕರೆದುಕೊಂಡು ಬಂದವನನ್ನು

ಬಾಯಿಗೆ ಬಂದಂತೆ ಗಟ್ಟಿಯಾಗಿ ಬೈಯ್ಯುತ್ತಾನೆ. ಅದರ ಹೊರತು ಅವನು ಏನನ್ನೂ ಮಾಡಲಾಗಲಿಲ್ಲ.

ಇಲ್ಲಿ ಹೀಗಿರಲು, ರೈಲಿನಲ್ಲಿದ್ದವರು ಅವನು ಬಾರದೆ ರೈಲು ಹೊರಟುದು ದನ್ನು ಕಂಡು, ಕೂಗಿ, ಗಾಡಿಯನ್ನು ಬಿಟ್ಟು ಕೆಳಗೆ ಇಳಿಯಲು ಯತ್ನಿಸುವು ದನ್ನು ಕಂಡು ರೈಲು ಕರ್ಮಚಾರಿಗಳು ಬಾಗಿಲನ್ನು ಬಲವಾಗಿ ಮುಚ್ಚಿ, "ಇಳಿಯಬಾರದು — ಗಾಡಿ ಹೋಗುವಾಗ ಇಳಿಯಬಾರದು." ಎಂದು ಗದರಿಸಲು, ಅವರು ಒಳಗೆ ಕುಳಿತು ಗಾಬರಿಯಿಂದ ಅಳಲಾರಂಭಿಸಿದರು. ಜೊತೆಯಲ್ಲಿದ್ದ ಪ್ರಯಾಣಿಕರಲ್ಲಿ ಒಬ್ಬರು, "ಅಮ್ಮಾ, ಭಯ ಪಡಬೇಡಿ! ಮುಂದಿನ ಸ್ಟೇಷನ್ನಿಗೆ ಹೋಗಿ, ಇಳಿದು, ತಾರನ್ನು ಕೊಟ್ಟರೆ, ಮರುಗಾಡಿ ಯಲ್ಲಿ ಅವರು ಬರುವರು. ರಾತ್ರಿ ಎಂಟು ಗಂಟೆಯೊಳಗೆ ನೀವು ಅವರನ್ನು ಕಾಣಬಹುದು. ಧೈರ್ಯವಾಗಿರಿ. ಸ್ವಲ್ಪ ದೂರವೆ ಇದೆ. ಅವಸರ ಪಡಬೇಡಿ. ನಾವೆಲ್ಲರೂ ಇದ್ದೇವೆ." ಎಂದು ಧೈರ್ಯ ಹೇಳುತ್ತ ಬರುತ್ತಿರಲು ಇದ್ದಕ್ಕಿದ್ದಂತೆ ಒಂದು ಸೇತುವೆ 'ಪಠಾರ್' ಎಂಬ ಶಬ್ದದಿಂದ ಸಿಡಿದು ಒಡೆಯಿತು.

ಒಡೆದ ಕೂಡಲೆ ಗಾಡಿಗಳು ಸರಸರವೆಂದು ಕೆಳಗೆ ಹೋಗುತ್ತಿದ್ದ ಪ್ರವಾಹದಲ್ಲಿ ಒಂದರ ಮೇಲೆ ಒಂದು ಬಿದ್ದವು. "ಹೋ!" ಎಂದು ಜನರು ಕೂಗಿ ಅಬ್ಬರಿಸಿದರು. ಇಂಜಿನ್ ಗಾಡಿ ಮರಳಿನಲ್ಲಿ ಹೂತುಹೋಯಿತು. ಇತರ ಗಾಡಿಗಳೊಳಗೂ ನೀರು ತುಂಬಿ, ಜನರನ್ನು ಹೊರಕ್ಕೆಳೆದು ಹಾಕಿತು. ನದಿಯಲ್ಲಿ ಪ್ರವಾಹ ಹೆಚ್ಚುತ್ತಿದೆ. ಹಾಗೆ ಹಾಗೆಯೇ ಜನಗಳು ನೀರಿನಲ್ಲಿ ಸಿಕ್ಕಿಕೊಂಡು ಹೋಗುತ್ತಿದ್ದಾರೆ. ಮಕ್ಕಳು, ಮರಿ, ಮೂಟೆ, ಗಂಟು— ಎಲ್ಲವೂ ಪ್ರವಾಹದಲ್ಲಿ ಪ್ರಯಾಣ ಮಾಡತೊಡಗಿದವು. ಈಜಲು ಬಲ್ಲ ಕೆಲವರು ಕೈಕಾಲುಗಳನ್ನು ಬೀಸಿ ಈಜುತ್ತಾರೆ. ದಡದಲ್ಲಿ ತಳ್ಳಲ್ಪಟ್ಟ ಕೆಲವರು ಒದ್ದಾಡಿಕೊಂಡು ದಡವನ್ನು ಸೇರಲು ಪ್ರಯತ್ನಿಸುತ್ತಿದ್ದಾರೆ. ನಡು ನೀರಿನಲ್ಲಿ ಸಿಕ್ಕಿಕೊಂಡವರು 'ಹರೋ ಹರ'ವೆಂದು ಮುಳುಗುವುದೂ, ತೇಲುವುದೂ, ನೀರಿನ ಹೊಡೆತದಲ್ಲಿ ಒಯ್ಯಲ್ಪಡುವುದೂ—ಹೀಗೆ ಕಷ್ಟ ಪಟ್ಟರು. ಈ ಸಮಯದಲ್ಲಿ ಇಷ್ಟು ಸಾಲದೆಂಬಂತೆ ಗಾಳಿಯೂ, ಮಳೆಯೂ ಬಹು ಉಗ್ರವಾದುವು. ದಡದ ಬಳಿ ಇರುವ ಮರಗಳು ಚಡಚಡವೆಂದು

ಮುರಿದು ನೀರಿನಲ್ಲಿ ಬೀಳುತ್ತಿವೆ. ಅವುಗಳನ್ನು ಆಶ್ರಯಿಸಿಕೊಂಡು ಕೆಲವರು ದಡವನ್ನು ಹತ್ತುತ್ತಾರೆ. ಕೆಲವರು ಅವುಗಳ ಹೊಡೆತಕ್ಕೆ ಸಿಕ್ಕಿ 'ಅಯ್ಯೋ!' ಎಂದು ಕೂಗಿಕೊಂಡು ಮುಳುಗುತ್ತಾರೆ. ಭಯಂಕರವಾದ ಸಿಡಿಲು ಗುಡುಗುಗಳಾದುವು. ಆಕಾಶ ಕತ್ತಲೆಯಿಂದ ಕವಿಯಿತು. ಮಿಂಚು 'ಫಳೀರ್' 'ಫಳೀರ್' ಎಂದು ಮಿಂಚಿ, ಅಂಧಕಾರವನ್ನು ಹೆಚ್ಚುಮಾಡಿತು. ಮಳೆ ಕಲ್ಲನ್ನು ಬೀರುವಂತೆ ಹೊಡೆಯುತ್ತಿತ್ತು. ಆಕಾಶಕ್ಕೂ, ಭೂಮಿಗೂ ಅಮೋಘವಾದ ಘೋರಯುದ್ಧವೇ ನಡೆಯುವಂತಿತ್ತು. ಗಾಳಿ—ಓ—ಯುದ್ಧದ ಕಹಳೆಯನ್ನು ಮೊಳಗಿ, ಆದಿಶೇಷನಂತೆ ಚೀರಿ, ದಡಕ್ಕೆ ಹೋಗುವವರನ್ನೂ ನೀರಿಗೆ ಎಳೆಯಿತು. ಗುಡುಗಿನ ಶಬ್ದದಲ್ಲಿ ಭೂಮಿ ನಡುಗುತ್ತಿದೆ. ಮರಗಳು ಹೀಗೂ ಉಂಟೇ—ಎಂದು ಧಾರೆಧಾರೆಯಾಗಿ ಕಣ್ಣೀರು ಸುರಿಸುತ್ತಿವೆ. ಹಗಲೋ, ರಾತ್ರಿಯೋ ತಿಳಿಯದಾಯಿತು. ಸೂರ್ಯ, ಚಂದ್ರ, ನಕ್ಷತ್ರಗಳೆಲ್ಲವೂ ಈ ಪರಿತಾಪವನ್ನು ನೋಡಲಾಗದೆ—ಹೋದ ಸ್ಥಳ ತಿಳಿಯದಂತೆ ಓಡಿಹೋಗಿ ಅವಿತುಕೊಂಡುವು. ಕೆರೆ ಕೊಳಗಳೆಲ್ಲವೂ ಕೋಡಿ ಹರಿದು ಅವುಗಳ ನೀರು ಕೂಡ ಸೂರೆಗೊಂಡು ನದಿ, ಜೆಟ್ಟದ ಹಾವುಗಳು, ಕೊರವರ ಗುಡಿಸಲುಗಳು, ಹೆಣಗಳು, ಬಿದ್ದ ಮರಗಳು, ಸತ್ತ ಹಸುಕರುಗಳು, ಇವುಗಳೆಲ್ಲವನ್ನೂ ಬಾಚಿ, ಹೊರಳಿಸಿಕೊಂಡು ಕೆಲವು ಜಾಗಗಳಲ್ಲಿ 'ಓ' ಎಂದು ಕೂಗಿಕೊಳ್ಳುತ್ತ, ಕೆಲವು ಜಾಗಗಳಲ್ಲಿ 'ಹಂ' ಎಂದು ಅಡಗಿಸಿಕೊಂಡು, ಪ್ರಜ್ಞೆಯಿಲ್ಲದೆ ಅರಿವನ್ನು ಕಳೆದುಕೊಂಡು, ಅಂಗಾಂಗಗಳ ಸ್ವಾಧೀನವಿಲ್ಲದೆ, ಅತ್ತ ಇತ್ತ ಓಲಾಡುತ್ತ ಬರುವ ಕುಡುಕನಂತೆ, ಹರಡಿಕೊಂಡು ರಭಸವಾಗಿ ಓಡುತ್ತ, ಕೂಗಿ ಹಾಡುತ್ತ, ತಾನು ಸೂರೆಗೊಂಡ ಕೊಳ್ಳೆ ಸಾಲದೆಂದು, ತನ್ನ ಮೇಲೆ ಹಾಕಲ್ಪಟ್ಟ ಸೇತುವೆಯನ್ನು ಹೊರಲು ಇಷ್ಟವಿಲ್ಲದೆ ಅದರ ಮೇಲೆ ಹಾಯ್ದು, ಅದನ್ನು ಒಡೆದು, ತಳ್ಳಿ, ನೂರಾರು ಜನರನ್ನು ತನ್ನ ವಶ ಮಾಡಿಕೊಂಡಿತು.

ಮಗು ಉರುಳುತ್ತ ಮುಳುಗುವುದನ್ನು ಕಂಡ ಒಬ್ಬ ತಾಯಿ ತಾನೂ ಜೊತೆಯಲ್ಲಿಯೆ ಮುಳುಗಿದಳು. ಹೆಂಗಸು ಮುಳುಗುವುದನ್ನು ಕಂಡ ಗಂಡಸು, ಅವಳನ್ನು ಹಿಡಿದು ಎಳೆಯಲು ಯತ್ನಿಸಿ ತನ್ನ ಪ್ರಾಣವನ್ನೂ ಕಳೆದುಕೊಂಡನು.

ಮಾವನ ಮನೆಗೆ ಹೋಗಿ ಬಂದ ಎಳೆ ವಯಸ್ಸಿನ ಅಳಿಯಂದಿರು ಎಷ್ಟು ಜನರೊ! ನೂತನವಾಗಿ (ಹೊಸದಾಗಿ) ಮದುವೆಯಾದವರು ಎಷ್ಟು ಜನರೊ! ದೊಡ್ಡವರಿರಲು ಅವರ ಕಣ್ಣುಮುಂದೆ ಸತ್ತ ಚಿಕ್ಕವರೂ ಎಷ್ಟು ಜನರೊ! ಇಂದು ಬರುವರು, ನಾಳೆ ಬರುವರು, ಎಂದು ದಿನಗಳನ್ನು ಎಣಿಸುತ್ತ ಸವೆದ ಬೆರಳುಗಳೊಡನೆ ಕಾಲವನ್ನು ಕಳೆಯುವ ನಾಯಕಿಯರು ಇರಲು—ಅದನ್ನು ತಿಳಿಯದೆ ಸತ್ತ ನಾಯಕರು ಎಷ್ಟು ಜನರೊ! ಒಬ್ಬ ತಾಯಿಗೆ ಒಬ್ಬನೇ ಮಗನಾಗಿದ್ದ ಬಾಲಕರು ಎಷ್ಟು ಜನರೊ ! ಗರ್ಭವತಿಯರಾದ ಹೆಣ್ಣು ಮಕ್ಕಳು ಎಷ್ಟು ಜನರೊ! ಈ ವಿಧ ಪರಿತಾಪಗಳಿಂದ ತುಂಬಿ ಜನ ಮುಳು ಗುವವರೂ, ಮುಳುಗಲಿರುವವರೂ, ತೇಲುವವರೂ, ಈಜುವವರೂ. ಎಷ್ಟೋ! ಆ ತರುಣದಲ್ಲಿ ದಡದ ಕಡೆ ಒಳ್ಳೆಯ ಗಾಳಿಯೊಂದು ಸಮಯ ಸಂಜೀವಿ ಯಂತೆ ಬೀಸಲು, ಈಜಲಾಗದವರನೇಕರು ದಡದ ಕಡೆ ಒಯ್ಯಲ್ಪಟ್ಟಿತು. ಲಕ್ಷ್ಮಿಯೂ, ಸುಂದರನೂ, ದಡದ ಪಕ್ಕದಲ್ಲಿದ್ದ ಒಂದು ಮರಳಿನ ರಾಶಿ ಯಲ್ಲಿ ತಳ್ಳಲ್ಪಟ್ಟರು. ಕಮಲಾಂಬಾಳ್ ಅವರ ಪಕ್ಕದಲ್ಲಿ ಒಂದು ಹುಲ್ಲು ಪೊದೆಯಲ್ಲಿ ಅರ್ಧ ಜೀವದೊಡನೆ ಅಸ್ತವ್ಯಸ್ತವಾಗಿ ಬಿದ್ದಿದ್ದಳು.

ಹೀಗೆ ಇವರು ಬಿದ್ದಿರುವಾಗ, ಯಾರೋ ಒಬ್ಬರು ಮುದುಕರು ಆ ಮಳೆಯಲ್ಲಿ ಕೈಯಲ್ಲಿ ಒಂದು ಛತ್ರಿಯನ್ನೂ, ಲಾಂದರವನ್ನೂ ಹಿಡಿದು ಕೊಂಡು, ಅಲ್ಲಿ ಬಿದ್ದಿದ್ದವರನ್ನು ತಟ್ಟಿ, ಎಬ್ಬಿಸಿ, ಮೂರ್ಛೆಯಿಂದ ಏಳುವಂತೆ ಮಾಡಿ, ಪಕ್ಕದಲ್ಲಿದ್ದ ಮಠಕ್ಕೆ ಕರೆದುಕೊಂಡು ಹೋಗುತ್ತಿದ್ದರು. ಅವರು ಕಮಲಾಂಬಾಳ್, ಲಕ್ಷ್ಮಿ ಸುಂದರಂ—ಇವರಿದ್ದ ಸ್ಥಳಕ್ಕೆ ಬಂದು ಅವರನ್ನು ನೋಡಿ ಬೆಚ್ಚಿ ಬಿದ್ದು ಪಕ್ಕದಲ್ಲಿ ಕುಳಿತುಕೊಂಡು "ಅಯ್ಯೋ! ಇದೇನು ವಿಪತ್ತು! ಇವರು ಎಲ್ಲಿಂದ ಬಂದರು! ಎಲೆ ಪಾಪವೆ ! ಪ್ರಾಣವಾದರೂ ಇದೆಯೊ, ಇಲ್ಲವೊ!" ಎಂದು ಚಿಂತಿಸಿ, ಕೈತಟ್ಟಿ, ಶ್ವಾಸ, ನಿಶ್ವಾಸವನ್ನು ನೋಡಿ, ಅವರನ್ನು ಮೆತ್ತಗೆ ಎತ್ತಿ, ಮಂಟಪಕ್ಕೆ ಸೇರಿಸಿ, ಮೂರ್ಛೆಯಿಂದ ಎಚ್ಚರಿಸುವ ಪ್ರಯತ್ನಗಳನ್ನು ಮಾಡುತ್ತಿದ್ದರು.

## ೨೯. ಅಮ್ಮೃಯ್ಯಪ್ಪ ಪಿಳ್ಳೈಯವರ ಪೂರ್ವಕಥೆ

ಮೂರ್ಛೆಯಲ್ಲಿ ಬಿದ್ದಿದ್ದ ಲಕ್ಷ್ಮಿ, ಕಮಲಾಂಬಾಳ್, ಸುಂದರಂ—ಆ ಮೂವರನ್ನೂ ನದಿಯ ದಡದಲ್ಲಿದ್ದ ಒಂದು ಮಂಟಪದಲ್ಲಿ ಸೇರಿಸಲ್ಪಟ್ಟಿತು. ಅಲ್ಲಿ ಅವರಿಗೆ ಪ್ರಜ್ಞೆ ಬರುವಂತೆ ಮಾಡಲು ಬೇಕಾದ ಪ್ರಯತ್ನಗಳು ಮಾಡಲ್ಪಾದುವು. ಆ ಉಪಾಯಗಳ ಸಹಾಯದಿಂದ ಮೂವರೂ ಪ್ರಜ್ಞೆಯನ್ನು ಪಡೆದರು. ಕಮಲಾಂಬಾಳ್ ಬೆಚ್ಚಿಬಿದ್ದು ಎಚ್ಚರಗೊಂಡು ನೋಡಲು ವಿದ್ವಾನ್ ಅಮ್ಮೃಯ್ಯಪ್ಪ ಪಿಳ್ಳೈಯವರು ಪಕ್ಕದಲ್ಲಿ ನಿಂತುಕೊಂಡಿದ್ದರು. ವಡುಸಾಪಟ್ಟಿಯಲ್ಲಿ ಅವತರಿಸಿದ ದೇವತೆಗಳೂ ಹೊಗಳುವ ಅಷ್ಟಾವಧಾನಂ ಮಹಾ ವಿದ್ವಾನ್ ಅಮ್ಮೃಯ್ಯಪ್ಪ ಪಿಳ್ಳೈಯವರನ್ನು ಇದನ್ನು ಓದುವವರು ಮರೆತಿರಲಾರರೆಂದು ನಂಬುತ್ತೇವೆ. ವಯಸ್ಸಾದುದರಿಂದ ಅವರು ಮಧುರೆಯ ಕಾಲೇಜಿನಿಂದ ನಿವೃತ್ತರಾಗಿ, ಅಲ್ಲಿಂದ ಹೊರಟು ಪುಣ್ಯಕ್ಷೇತ್ರಗಳಿಗೆ ಹೋಗಿ ದೇವರ ದರ್ಶನ ಮಾಡುವುದಕ್ಕಾಗಿ ಉತ್ತರ ದೇಶಕ್ಕೆ ಯಾತ್ರೆ ಹೋಗುತ್ತಿದ್ದರು. ಯಾವ ಸ್ಥಳಕ್ಕೆ ಹೋದರೂ, ಆಯಾ ಸ್ಥಳಗಳನ್ನು ಕುರಿತು ಹಾಡದೆ ಇರುತ್ತಿರಲಿಲ್ಲ. ಎಲ್ಲ ವಿಧವಾದ ಛಂದಸ್ಸುಗಳಲ್ಲಿಯೂ ಅವರು ಕೈಯಾಡಿಸುತ್ತಿದ್ದರು. ಅವು ಒಮ್ಮೊಮ್ಮೆ ಬೆರೆತು ಪರಸ್ಪರ ವೈಷಮ್ಯವೂ ಉಂಟಾಗುತ್ತಿತ್ತು. ಆದರೆ ಹಟಮಾರಿ ಮುದುಕರು ಬಿಡುತ್ತಿರಲಿಲ್ಲ. ಅವರು ಚಿತ್ರ ಕವಿತೆಗಳನ್ನು ರಚಿಸುವುದರಲ್ಲಿ ಬಹಳ ಸಮರ್ಥರು. ಅನೇಕ ಬಗೆಯ ಉದ್ದಕ್ಕೆ ಅಡ್ಡಲಾಗಿ ಓದುವ ಚಮತ್ಕಾರ ಪದ್ಯಗಳನ್ನು ಬರೆಯುತ್ತಿದ್ದರು. ಎರಡು ಕಾಲು ಉಳ್ಳ ಮನುಷ್ಯರು ಹುಟ್ಟುವುದು ಪ್ರಪಂಚದಲ್ಲಿ ಸಹಜ. ಹಾಗಿಲ್ಲದೆ ಮೂರು ಕಾಲು, ನಾಲ್ಕು ಕೈ, ಎರಡು ತಲೆ—ಹೀಗೆ ಮನುಷ್ಯರು ಹುಟ್ಟಿದರೆ ಅವರನ್ನು ನೋಡಲು ಟಿಕೆಟ್ಟು ಕೊಂಡಲ್ಲವೇ ಜನರು ನೋಡಲು ಹೋಗುತ್ತಾರೆ! ಹಾಗೆಯೂ ನಾಲ್ಕು ಸಾಲಿನ ಪದ್ಯಗಳು ಪ್ರಪಂಚದಲ್ಲಿ ಸರ್ವಸಾಮಾನ್ಯ. ಹಾಗಿಲ್ಲದೆ—ಆರು ಸಾಲಿನವು, ಏಳು ಸಾಲಿನವು ಇದ್ದರೆ ವಿಚಿತ್ರವೇ ಆಗುವುವು. ಅವುಗಳನ್ನು ಅಮ್ಮೃಯ್ಯಪ್ಪ ಪಿಳ್ಳೈ ಅಲ್ಲದೆ ಬೇರೆ ಯಾರು ತಾನೆ ಹಾಡಲಾದೀತು. ಈ ವಿಧವಾದ ವಿಚಿತ್ರ ಕವಿಗಳು ಹೋದ ಕ್ಷೇತ್ರಗಳಲ್ಲೆಲ್ಲ

ಪದ್ಯಗಳನ್ನು ರಚಿಸಿ, ಗಟ್ಟಿಯಾಗಿ ಹಾಡಿ—ಕೆಲವು ವೇಳೆ ಅಪ್ರಸಿದ್ಧ ಸ್ಥಳ ಗಳನ್ನೂ ಕುರಿತು ಹಾಡುಗಳನ್ನು ರಚನೆ ಮಾಡುತ್ತ ಹೋದರು. ಸೇತುವೆ ಮುರಿದು ಬಿದ್ದಮೇಲೆ ರೈಲುಗಾಡಿಗೆ ಆಕಸ್ಮಿಕ ವಿಪತ್ತು ಸಂಭವಿಸಿದ ಆ ದಿನ ಅವರು ಆ ಸೇತುವೆಗೆ ಪಕ್ಕದ ಒಂದು ಗ್ರಾಮದಲ್ಲಿ ಇದ್ದರು. ಈ ವಿಧವಾದ ವಿಪತ್ತಾಯಿತೆಂದು ತಿಳಿದ ಕೂಡಲೆ ಪುಣ್ಯವನ್ನು ಶೇಖರಿಸುವುದರಲ್ಲಿ ಬಹಳ ಗಮನವಿಟ್ಟಿದ್ದ ಅವರು ಲಾಂದರನ್ನೂ, ಛತ್ರಿಯನ್ನೂ ಹಿಡಿದುಕೊಂಡು, ಕೆಲವರನ್ನು ಜೊತೆ ಮಾಡಿಕೊಂಡು, ನದಿಯಲ್ಲಿ ಸಿಕ್ಕಿಬಿದ್ದ ಜನರ ರಕ್ಷಣೆ ಗಾಗಿ ಓಡಿಬಂದರು. ಬಂದವರು ಕಮಲಾಂಬಾಳ್, ಲಕ್ಷ್ಮಿ—ಇವರನ್ನು ಕಂಡು "ಇವರು ಹೇಗೆ ಇಲ್ಲಿಗೆ ಬಂದರು?" ಎಂದು ಆಶ್ಚರ್ಯಗೊಂಡು, ಅವರನ್ನು ಮಂಟಪಕ್ಕೆ ಸೇರಿಸುವ ಪ್ರಯತ್ನದಲ್ಲಿದ್ದರು.

ಅಮ್ಮಯ್ಯಪ್ಪ ಪಿಳ್ಳೆ ಮುತ್ತುಸ್ವಾಮಿ ಅಯ್ಯರವರಿಂದ ಆದರಿಸಲ್ಪಟ್ಟ ವರೆಂದು ಮಾತ್ರ ಹೇಳಿದೆವೇ ಹೊರತು ಅವರಿಬ್ಬರಿಗೂ ಇದ್ದ ಸಂಬಂಧ ವನ್ನು ನಾವು ಮೊದಲೇ ತಿಳಿಸಲಿಲ್ಲ. ಮುಂದೆ ನಡೆಯಲಿರುವ ವೃತ್ತಾಂತಗ ಳಿಗೆ ಇದು ತಿಳಿಯಬೇಕಾದುದು ಆವಶ್ಯವಾಗಿರುವುದರಿಂದ ಅದನ್ನು ಕುರಿತು ಸಂಕ್ಷೇಪವಾಗಿ ಪ್ರಸ್ತಾಪಿಸೋಣ.

ಮುತ್ತುಸ್ವಾಮಿ ಅಯ್ಯರ್ ತಂದೆಯವರು ರಂಗಸ್ವಾಮಿ ಅಯ್ಯರೆಂದು ಒಬ್ಬರಿದ್ದರು. ಅವರ ಜೀವನ ಕೋಲಾಹಲ ಮಯವಾದುದು. ಅನುಭವಿ ಸುವುದಕ್ಕಾಗಿಯೇ ಜನ್ಮ ತಾಳಿದಂತಿತ್ತು. ಗಂಧ, ಹೂ, ಹಾಡು—ಇವು ಇಲ್ಲದ ದಿನವಿಲ್ಲ. ಆಟ ಹಾಡು—ಇವುಗಳಲ್ಲಿಯೇ ಅವರ ಆಯುಷ್ಯವೆಲ್ಲ ಕಳೆಯಿತು. ಈ ನಿತ್ಯ ಕಲ್ಯಾಣ ಪುರುಷರು ಸಾಯುವ ವೇಳೆಯಲ್ಲಿ ತನ್ನ ದಾಸಿಯ ತೊಡೆಯ ಮೇಲೆ ತಲೆಯನ್ನಿಟ್ಟು ಕೊಂಡು, ಅವಳ ವೀಣಾ ಗಾನ ವನ್ನು ಕೇಳುತ್ತಲೆ ಪರಲೋಕವನ್ನು ಸೇರಿದರು.

ಅವರು ಒಂದು ದಿನ ತನ್ನ ದಾಸಿಯಾದ ದೇವಯಾನೆಯ ಮನೆಯಲ್ಲಿ ಕುಳಿತುಕೊಂಡು ಅವಳನ್ನು ಹಾಡುವಂತೆ ಹೇಳಿ ಕೇಳುತ್ತಿದ್ದರು. ಅವಳು ಜಾವಳಿ, ಕ್ಷೇತ್ರಿಯರ ಪದಗಳು—ಎಲ್ಲವನ್ನು ಹಾಡಿ, ತಾನು ನೂತನವಾಗಿ ಮಟ್ಟನ್ನು ಹಾಕಿಟ್ಟಿದ್ದ ಕೆಲವು ಶೃಂಗಾರ ರಸದ ಹಾಡುಗಳನ್ನು ಹಾಡಿದಳು.

ಗ ಅಮ್ಮಯ್ಯಪ್ಪ ಪಿಳ್ಳೆ ಸಂಪಾದನೆಯು ಸಲುವಾಗಿ ಆಡುಸಾಪಟ್ಟೆಯನ್ನು ಬಿಟ್ಟು ಶಿರುಕುಳಕ್ಕೆ ಬಂದಿದ್ದರು. ಅವರು ಆ ಕಾಲದಲ್ಲಿಯೇ ಸ್ವಲ್ಪ ಭಾಷಾ ಜ್ಞಾನ ಪಡೆದಿದ್ದರು. ರಂಗಸ್ವಾಮಿ ಅಯ್ಯರ್ ದೇವೆಯಾನೆಯೂ ಮೇಲೆ ಅವರಿಸಿದ ಸಂದರ್ಭದಲ್ಲಿದ್ದಾಗ ಅಮ್ಮಯ್ಯಪ್ಪ ಪಿಳ್ಳೆ ಆಕಸ್ಮಾತ್ತಾಗಿ ಆ ಬೀದಿಯಲ್ಲಿ ಬರುತ್ತಿದ್ದರು. ಆ ರಾತ್ರಿ ಅವರಿಗೆ ಅನ್ನ ಸಿಗದೆ ಇದ್ದುದರಿಂದ ಸ್ಥಲ ಉಪವಾಸ ಆಚರಿಸಿದರು. ತಮಿಳು ಹಾಡುಗಳು ಅವರ ಕಿವಿಯಲ್ಲಿ ಬಿದ್ದ ಕೂಡಲೆ ಆ ಮನೆಯ ಜಗುಲಿಯ ಮೇಲೆ ಹೋಗಿ ಕುಳಿತುಕೊಂಡರು. ಸಂಗೀತದಲ್ಲಿ ಅವರಿಗೆ ತುಂಬ ಜ್ಞಾನವಿತ್ತು. ಪಲ್ಲವಿ ಹಾಡಿದರೆ, ಮುಂದೆ ಹಾಡಲು ಗೊತ್ತಿಲ್ಲವೆ—ಮತ್ತೆ ಮತ್ತೆ ಹೇಳಿದುದನ್ನೇ ಹೇಳುತ್ತಾನೆ—ಎಂದು ಎಣಿಸುದರು. ಹಾಡುವುದರಲ್ಲಿ ಇಷ್ಟೇತಕ್ಕೆ? ನೇರವಾಗಿ ಇದ್ದುದನ್ನು ಹೇಳಿದರೆ ನಾನು ಕೇಳಿಕೊಂಡು ಹೋಗಲಾರೆನೆ?" ಎಂದು ತನ್ನೊಳಗೇ ಹೇಳಿ ಕೊಳ್ಳುತ್ತ ಜಗುಲಿಯಲ್ಲಿ ಸ್ವಲ್ಪ ಹೊತ್ತು ವಿಶ್ರಮಿಸಿಕೊಳ್ಳುತ್ತಿದ್ದರು. ಅದು ಛಳಿಯ ಕಾಲ. ಗಾಳಿ ಅವರ ದಾರಿದ್ರ್ಯವನ್ನು ಸ್ವಲ್ಪವೂ ಲಕ್ಷಿಸದೆ ಅವರ ಮೇಲೆ ತಂಪಾಗಿ ಬೀಸುತ್ತಿತ್ತು. ಅವರು ಉಟ್ಟಿದ್ದ ಚಿಂದಿ ಬಟ್ಟೆಗಳು ಅವರನ್ನು ರಕ್ಷಿಸಲು ಸಾಲದೇ ಇದ್ದುವು. ಛಳಿಗೆ ಭಯಪಟ್ಟು ಅವರು ಜಗುಲಿಯನ್ನು ಬಿಟ್ಟು ಇಳಿದು ಆ ಮನೆಯ ಬಾಗಿಲಿನ ನಡುದಾರಿಯಲ್ಲಿ ಹೋಗಿ ಸೇರಿಕೊಂಡರು. ಹಾಡಿನ ಮೋಹದಲ್ಲಿ ಅದು ಪರರ ಮನೆಯೆಂಬುದು ಅವರಿಗೆ ಮರೆತು ಹೋಯಿತು. ಒಳಗೆ ಹೋದ ನಂತರ ಯಾರಾದರೂ ನೋಡಬಹುದೆಂದು ಹೆದರಿ ಪಕ್ಕದಲ್ಲಿದ್ದ ಒಂದು ಗೂಡಿನಲ್ಲಿ ಅವಿತು ಕೊಂಡು ಪಿಳ ಪಿಳನೆಂದು ಕಣ್ಣನ್ನು ಬಿಟ್ಟುಕೊಂಡು ಕುಳಿತಿದ್ದರು.

ಹೀಗೆ ಇದ್ದಾಗ ರಂಗಸ್ವಾಮಿ ಅಯ್ಯರ್ ತಟಕ್ಕನೆ ಎದ್ದು ಆಕಸ್ಮಿಕವಾಗಿ ಬಾಗಿಲ ಕಡೆ ಬಂದಾಗ ಅಮ್ಮಯ್ಯಪ್ಪ ಪಿಳ್ಳೆ ಅವಿತುಕೊಂಡಿರುವುದನ್ನು ಕಂಡರು. ಊರಿನಲ್ಲಿ ಆಗ ಕಳ್ಳರ ಭಯ ಹೆಚ್ಚಾಗಿತ್ತು. ದಕ್ಷಿಣ ಸೀಮೆಯಿಂದ ಕೆಲವು ಕಳ್ಳರು ಹೊಸದಾಗಿ ಬಂದಿರುವುದಾಗಿ ಅಂದೇ ಪ್ರಸ್ತಾಪವಿತ್ತು. ರಂಗಸ್ವಾಮಿ ಅಯ್ಯರ್ ಅವರನ್ನು ಕಂಡ ಕೂಡಲೆ "ಕಳ್ಳ" "ಕಳ್ಳ" ಎಂದ ಕೂಗಿ ಕೊಂಡರು. ಮನೆಯ ಕೆಲಸದವರೂ ಪಕ್ಕದ ಮನೆಯವರೂ,

ಎದುರು ಮನೆಯವರೂ—ಎಲ್ಲರೂ ಸೇರಿ "ಕಳ್ಳ ಕಳ್ಳ" ಎಂದು ಕೂಗುತ್ತ ಓಡಿ ಬಂದು ಅಮ್ಮಯ್ಯಪ್ಪ ಪಿಳ್ಳೆಯನ್ನು ಗೂಡಿನಿಂದ ಸರಸರನೆ ಹೊರಕ್ಕೆಳೆದರು. ಅವರ ರೂಪ, ಬಣ್ಣ, ಬಟ್ಟೆ—ಎಲ್ಲದರಲ್ಲಿಯೂ ಸಾಕ್ಷಾತ್ ಕಳ್ಳನಂತೆಯೇ ಇದ್ದರು. ಹಾಗೆ ಇದ್ದ ಆಡುಸಾಪಟ್ಟಿ ಮಹಾನುಭಾವರನ್ನು ಅವರು ಎಲ್ಲರೂ ಹಿಡಿದು ಕಟ್ಟಿಹಾಕಿ ಬಾಯಿಗೆ ಬಂದಂತೆಲ್ಲ ಬೈದು, ಹೊಡೆಯಲಾರಂಭಿಸಿದರು. ತಮಿಳು ವಿದ್ವಾಂಸರೊಬ್ಬರು ಒಬ್ಬಂಟಿಗರಾಗಿ ದಾರಿಯಲ್ಲಿ ಹೋಗುತ್ತಿದ್ದಾಗ ಕಳ್ಳರು ಬಂದು ಅಡ್ಡಗಟ್ಟಲು, ಅವರು, "ನನ್ನ ಬಳಿ ೫೦ ರೂಪಾಯಿ ಬಾಳುವ ಒಂದು ಉಡಿದಾರ ಮಾತ್ರವಿದೆ. ನಾನಾದರೊ ಪಟ್ಟಣಕ್ಕೆ ಹೋಗುವವನು. ಅರ್ಧ ವಸ್ತ್ರದೊಂದಿಗೆ ಬಿಡು, ವೀರನೆ!" ಎಂದು ಬಹು ವ್ಯಾಕರಣ ಬದ್ಧವಾಗಿ ಹೇಳಿದರೆಂಬ ಒಂದು ಕಥೆಯುಂಟು. ಅದರಂತೆ ನಡೆದ ಉಪಚಾರವನ್ನು ಸಹಿಸಲಾಗದ ಪಿಳ್ಳೆ ಅವರೂ, "ನೀವು ಒಂದು ದಿನವಾದರೂ ತಪ್ಪು ಮಾಡಿದವರಲ್ಲ. ಇಂದು ಎನ್ನನ್ನು ಹೊಡೆದು, ತಪ್ಪು ಮಾಡಿದುದು ನನ್ನ ಕೆಟ್ಟ ಕಾಲ. ನೀವು ಹಲವರು—ನಾನೊಬ್ಬ" ಎಂಬ ಅರ್ಥ ಬರುವಂತೆ ಬಹಳ ವ್ಯಾಕರಣ ಶುದ್ಧವಾದ ಮಾತನ್ನು ಆಡಿದರು.

ಅವರು "ಏನೊ—ಲೇ— ಬಾಯಿಗೆ ಬಂದಂತೆ ಬೊಗಳುತ್ತೀಯಾ! ಇವನು ಪಕ್ಕಾ ಕಳ್ಳ! ದಕ್ಷಿಣ ಸೀಮೆಯ ಕಳ್ಳ—" ಎಂದು ಹೇಳುತ್ತ ಮತ್ತೆ ಬಲವಾಗಿ ಪ್ರಹಾರವನ್ನು ಮಾಡಲು ಪಿಳ್ಳೆ ಅವರು, "ನಾನು ಪಂಡಿತ" ಎಂದರು. ಮುಂದುವರಿಯುತ್ತ ಬಹಳ ಪ್ರೌಢವಾದ ಭಾಷೆಯಲ್ಲಿ ತಾವು ಕಳ್ಳರಲ್ಲವೆಂದೂ ಉತ್ತಮ ಕುಲ ಪ್ರಸೂತರೆಂದು ಸಾರಿಕೊಂಡರು. ಆದರೆ ಅವರನ್ನು ಹಿಡಿದವರಿಗೆ ಅವರ ಮಾತುಗಳು ಅರ್ಥವಾಗಲಿಲ್ಲ. ಆ ವೇಳೆಗೆ ರಂಗಸ್ವಾಮಿ ಅಯ್ಯರ್ ಮುಂದೆ ಬಂದು "ಇವನು ಯಾರು? ಕಸಬಿನಲ್ಲಿ ಕಳ್ಳನಾಗಿದ್ದಾನೆ—ಪಂಡಿತರ ಮಾತನ್ನು ಆಡುತ್ತಾನೆ." ಎಂದು ಕೊಂಡು, ಆ ಗುಂಪಿನ ಮಧ್ಯೆ ನುಸುಳಿ ಅಮ್ಮಯ್ಯ ಪಿಳ್ಳೆಯ ಬಳಿ ಹೋಗಲಾಗಿ, ಪಿಳ್ಳೆಯವರು ಅವರ ಕಾಲನ್ನು ಬಿಗಿಯಾಗಿ ಹಿಡಿದುಕೊಂಡು "ನಾನು ಆಡುಸಾಪಟ್ಟಿ ವಿದ್ವಾನ್ ಅಮ್ಮಯ್ಯ ಪಿಳ್ಳೆ ಹಾಡನ್ನು ಕೇಳಲು ಬಂದವನು—ಕದಿಯುವುದಕ್ಕಲ್ಲ" ಎಂದು ಹೇಳಲು, ಅಯ್ಯರ್ ಅವರನ್ನು ದೃಷ್ಟಿಸಿ ನೋಡಿ,

ಅವರು ಕದಿಯಲು ಬಂದವರಲ್ಲವೆಂದು ಊಹಿಸಿ "ಈಗ ಬಿಟ್ಟು ಬಿಡಿ. ಬೆಳಗಾಗುತ್ತಲೆ ನೋಡಿಕೊಳ್ಳೋಣ" ಎಂದು ಹೇಳಿ ಅವರನ್ನು ಭದ್ರವಾಗಿ ಒಂದು ಕೋಣೆಯಲ್ಲಿ ಕೂಡಿಟ್ಟು, ಬೀಗ ಹಾಕಬೇಕೆಂದು ಆಜ್ಞೆ ಮಾಡಿದರು. ಹಾಗೆಯೇ ಅಲ್ಲಿದ್ದವರು ಸಮ್ಮತಿಸಿ, ದೇವಯಾನೆಯ ಮನೆಯಲ್ಲಿ ಒಂದು ಕೋಣೆಯಲ್ಲಿ ಅವರನ್ನು ನಿರ್ಬಂಧಿಸಿಟ್ಟರು.

ಬೆಳಗಾಗುತ್ತಲೆ ರಂಗಸ್ವಾಮಿ ಅಯ್ಯರ್ ಕೋಣೆಯನ್ನು ತೆರೆದು ನೋಡಿದಾಗ, ಬಿದ್ದ ಏಟುಗಳಿಂದ ಬಳಲಿ ಚೆನ್ನಾಗಿ ನಿದ್ದೆ ಮಾಡಿ ಆಗತಾನೆ ಎಚ್ಚರಗೊಂಡ ಅಮ್ಮಯ್ಯ ಪಿಳ್ಳೈ ಅವರ ಕಾಲನ್ನು ಗಟ್ಟಿಯಾಗಿ ಹಿಡಿದು ಕೊಂಡು ತನ್ನ ನಿಜ ವೃತ್ತಾಂತವನ್ನು ತಿಳಿಯಪಡಿಸಿ ಅಳಲಾರಂಭಿಸಿದರು. ಅವರು "ಈ ಮನುಷ್ಯ ಒಂದು ವಿದ್ಯಾವಂತನಾದ ಮೂಢನು—ಏನೂ ತಿಳಿಯದ ಮಂಕು" ಎಂದು ಅರಿತು ರಾತ್ರಿ ಅವರು ಪಟ್ಟ ಅವಸ್ಥೆಗಾಗಿ ದುಃಖಿಸಿ ಅಂದು ಮೊದಲು ಅವರು ಅವರನ್ನು ತನ್ನ ಸಂರಕ್ಷಣೆಯಲ್ಲಿಯೇ ಇಟ್ಟುಕೊಂಡರು. ಅವರೊಂದಿಗೆ ಬಳಿಕೆ ಹೆಚ್ಚಾದಷ್ಟೂ ಅವರ ರೀತಿನೀತಿಗಳು ರಂಗಸ್ವಾಮಿ ಅಯ್ಯರ್‌ಗೆ ಬಹಳ ಮೆಚ್ಚುಗೆ ಆಯಿತು. ಅವರಿಗೆ ದೇವಯಾನೆಯ ಹೊಟ್ಟೆಯಲ್ಲಿ ಹುಟ್ಟಿದ ಮಗಳೊಬ್ಬಳಿದ್ದಳು. ಅವಳಿಗೆ ಜಾನಕಿ ಎಂದು ಹೆಸರು. ಆ ಹುಡುಗಿಯನ್ನು ವೇಶ್ಯೆಯ ಕಸಬಿನಲ್ಲಿ ಬಿಡಲು ಅವರಿಗೆ ಸಮ್ಮತಿ ಇರಲಿಲ್ಲ. ಯಾರಾದರೊಬ್ಬ ಬಡವನಿಗೆ ಕೊಟ್ಟು ಸಂರಕ್ಷಣೆ ಮಾಡಬೇಕೆಂದು ಅವರಿಗೆ ಬಹಳ ದಿನಗಳಿಂದ ಉದ್ದೇಶವಿತ್ತು. ಅಮ್ಮಯ್ಯಪ್ಪ ಪಿಳ್ಳೈಯ ಗುಣವನ್ನು ಅವರು ತುಂಬ ಮೆಚ್ಚಿದ್ದರು. ಆದುದರಿಂದ ಆ ಹುಡುಗಿಯನ್ನು ಅವರಿಗೇ ಕನ್ಯಾದಾನ ಮಾಡಿಕೊಟ್ಟರು. ಅವರ ಕಾಲವಾದ ನಂತರ ಮುತ್ತುಸ್ವಾಮಿ ಅಯ್ಯರವರೂ ಆ ಸಂಬಂಧವನ್ನು ಆದರಿಸಿದ್ದು ಮಾತ್ರವಲ್ಲದೆ ಅವರಿಗೆ (ಅಳಿಯನಿಗೆ) ಕೊಡುವ ವಸ್ತುಗಳನ್ನೂ, ಭೂಮಿ ಮೊದಲಾದುವನ್ನೂ ಕೊಟ್ಟು ಮಧುರೆಯ ಕಾಲೇಜಿನಲ್ಲಿ ತಮಿಳು ಪಂಡಿತರ ಕೆಲಸವನ್ನೂ ಸಂಪಾದಿಸಿ ಕೊಟ್ಟರು. ಅಮ್ಮಯ್ಯಪ್ಪ ಪಿಳ್ಳೈಯೂ, ಜಾನಕಿ ಅಮ್ಮಾಳೂ ಗೃಹಸ್ಥ ಧರ್ಮವನ್ನು ಸಾಂಗವಾಗಿ ಪರಿಪಾಲಿಸುತ್ತ ಬಂದರು. ಕಮಲಾಂಬಾಳ್ ಜಾನಕಿ ಅಮ್ಮಾಳನ್ನು ತನ್ನ ಗಂಡನ ತಂಗಿಯೆಂದೇ

ಭಾವಿಸುತ್ತ ಬಂದಳು. ಅವರಿಬ್ಬರಲ್ಲಿ ಬಹಳ ಪ್ರೀತಿ ಇತ್ತು. ಈ
ಅಮ್ಮೆಯ್ಯಪ್ಪ ಪಿಳ್ಳೈ, ಜಾನಕಿ ಅಮ್ಮಾಳ್—ಇಬ್ಬರೂ ಸೇರಿಯೇ ಯಾ
ಮಾಡಿದರು.

ಕಮಲಾಂಬಾಳ್ ಕಣ್ಣು ತೆರೆದ ಕೂಡಲೆ ಅಮ್ಮೆಯ್ಯಪ್ಪ ಪಿಳ್ಳೈ ಎದ
ಅವಳನ್ನು ನಮಸ್ಕರಿಸಿದರು. ಲಕ್ಷ್ಮಿಯೂ, ಸುಂದರನೂ "ಭಾವನವರಾ
ಅಮ್ಮೆಯ್ಯಪ್ಪ ಪಿಳ್ಳೈಯನ್ನು ಕಂಡು ತುಂಬ ಸಂತೋಷಗೊಂಡವರಾ
'ಅತ್ತೆ'ಯ ಯೋಗಕ್ಷೇಮವನ್ನು ಕುರಿತು ವಿಚಾರಿಸಿದರು. ಅನಂತರ ಎ
ರನ್ನೂ ಅಮ್ಮೆಯ್ಯಪ್ಪ ಪಿಳ್ಳೈ ತಾನು ಇಳಿದಿದ್ದ ಜಾಗಕ್ಕೆ ಕರೆದುಕೊಂಡ
ಹೋದರು. ಜಾನಕಿ ಅಮ್ಮಾಳ್ ಇವರನ್ನು ತುಂಬ ಸಂತೋಷದಿಂ
ಉಪಚರಿಸಿ, ಅಡಿಗೆಗೆ ಬೇಕಾದ ಸಾಮಾನುಗಳನ್ನೆಲ್ಲ ಕೊಟ್ಟು ಯೋಗಕ್ಷೇಮ
ವನ್ನೆಲ್ಲ ವಿಚಾರಿಸಿದಳು. ಮುತ್ತುಸ್ವಾಮಿ ಅಯ್ಯರವರ ಕುಟುಂಬ ದುಃಸ್ಥಿ
ಹೊಂದಿದ್ದನ್ನು ಕೇಳಿದ ಜಾನಕಿ ಅಮ್ಮಾಳ್ ಮತ್ತು ಅವಳ ಗಂಡ ಬಹ
ದುಃಖಿಸಿದರು. ಅನಂತರ ಅಳುವುದರಲ್ಲಿ ಪ್ರಯೋಜನವಿಲ್ಲವೆಂದು ಒಬ್ಬರನ್ನೊ
ಬ್ಬರು ಸಮಾಧಾನ ಪಡಿಸುತ್ತ ಶೀರ್‌ಕಾಳಿಯಿಂದ ಚಿದಂಬರಕ್ಕೆ ಹೋಗಬೆ
ಕೆಂದು ತೀರ್ಮಾನಿಸಿ ಅಂತೆಯೇ ಹೊರಟರು. ಇವರು ಹೋದನಂತರ ಎರಡ
ದಿನಗಳು ಶೀರ್‌ಕಾಳಿಗೆ ರೈಲು ಇರಲಿಲ್ಲ. ಆಮೇಲೆ ಯಾವುದೋ ಸೇತು
ಗಳನ್ನು ಸರಿಮಾಡಿ ರೈಲನ್ನು ಬಿಟ್ಟರು. ಕಾತುರತೆಯಿಂದ ಎದಿರು ನೋಡಿ
ಆ ರೈಲಿನಲ್ಲಿ ಶ್ರೀನಿವಾಸನಿರಲಿಲ್ಲ. ಮತ್ತೆ ಎರಡು ಮೂರು ರೈಲುಗಳ
ಬಂದು ಬಂದು ಶ್ರೀನಿವಾಸನನ್ನು ಅಮ್ಮೆಯ್ಯಪ್ಪ ಪಿಳ್ಳೈ ಹುಡುಕಿದರು. ಅವನ
ಬರಲಿಲ್ಲ. ಇಷ್ಟರಲ್ಲಿ ಚಿದಂಬರದಲ್ಲೆಲ್ಲ ಮನೆಮನೆಗೂ ಹೊಕ್ಕು ಮುತ್ತುಸ್ವಾಮಿ
ಅಯ್ಯರನ್ನು ಹುಡುಕಿದರು. ಅವರ ವಿಷಯದಲ್ಲಿ ಯಾವ ಸುಳಿವೂ ಸಿಗಲಿಲ್ಲ
ಮೂರು ದಿನಗಳು ಹೀಗೆ ಹುಡುಕಿದ ಮೇಲೆ ಕೊನೆಯಲ್ಲಿ ಒಬ್ಬ ದೀಕ್ಷಿತರ
ಮುತ್ತುಸ್ವಾಮಿ ಅಯ್ಯರವರ ಲಕ್ಷಣ ವಿಶೇಷಗಳನ್ನು ಕೇಳಿದ ಕೂಡಲೆ—
"ಆ ರೀತಿಯ ಒಬ್ಬರು ತನ್ನ ಮನೆಯಲ್ಲಿಯೇ ತಂಗಿರುವುದಾಗಿಯೂ, ಅವರ
ಬೇಗನೆ ಸಂಸಾರ ಸಮೇತ ಕಾಶಿಗೆ ಹೋಗುವರೆಂದು ಹೇಳಿದುದಾಗಿಯೂ
ತಿಳಿಸಿದರು. ಅವರು ಹೇಳಿದ ಮನುಷ್ಯರ ಗುರುತುಗಳು, ಮಾತು, ನಡೆ

ನೊದಲಾದುವೆಲ್ಲ ಹೊಂದಿದುವು. ಅವರ ಊರು ಯಾವುದೋ ಒಂದು 'ಕುಳ' ನೆಂದು ಹೇಳಿದುದಾಗಿಯೂ ಹೇಳಿದರು. ಈ ಸುಳಿವನ್ನು ಇಟ್ಟುಕೊಂಡು ಅವರು ಕಾಶಿಗೇ ಹೋಗಿರಬೇಕೆಂದು ತೀರ್ಮಾನಿಸಿದರು. ಆದರೆ ಇವರು ಉತ್ತರಕ್ಕೆ ಹೋಗುವುದೇ—ದಕ್ಷಿಣಕ್ಕೆ ಹೋಗುವುದೇ—ಎಂದು ತೀರ್ಮಾನಿಸಲು ಸುಲಭವಾದ ವಿಷಯವಾಗಿರಲಿಲ್ಲ.

ಶ್ರೀನಿವಾಸನು ಕಾಣಲಿಲ್ಲವೆಂದು ಲಕ್ಷ್ಮಿ ಹುಳದಂತೆ ಒದ್ದಾಡಿದಳು. ಗಾಳಿ ಮೂಲಕವಾಗಿಯಾದರೂ ಅವನ ಕ್ಷೇಮ ಸಮಾಚರ ತಿಳಿದರೆ ಸಾಕೆನ್ನುವಷ್ಟು ತೋರಿತು. ಶ್ರೀನಿವಾಸನನ್ನು ಹುಡುಕುವುದೇ — ಅಥವಾ ಮುತ್ತುಸ್ವಾಮಿ ಅಯ್ಯರವರನ್ನು ಹುಡುಕುವುದೇ—ಈ ಸಮಸ್ಯೆ ಅವರಲ್ಲಿ ಬಗೆಹರಿಯಲಿಲ್ಲ. ಕೊನೆಯಲ್ಲಿ ಶ್ರೀನಿವಾಸನು ಅವರನ್ನು ಹುಡುಕಿಕೊಂಡು ಚಿದಂಬರಕ್ಕೆ ಬರುವನೆಂದು ಊಹಿಸಿ, ಹಾಗೆ ಬರುವ ಪಕ್ಷಕ್ಕೆ ಅವರು ಕಾಶಿಗೆ ಹೋಗಿರುವ ಸುದ್ದಿಯನ್ನು ಅವನಿಗೆ ತಿಳಿಸಲು ಅವನ ಹೆಸರಿಗೆ ಆ ಊರಿನ ಅಂಚೆಯ ಕಚೇರಿಯಲ್ಲಿ ಒಂದು ಪತ್ರವನ್ನೂ, ಮುಖ್ಯವಾದ ಪ್ರತಿಯೊಬ್ಬ ದೀಕ್ಷಿತರಿಗೂ ಒಂದು ಪತ್ರವನ್ನು ಕೊಟ್ಟು ನಟರಾಜನ ಸನ್ನಿಧಿಯಲ್ಲಿ ಹೋಗಿ ಅಡ್ಡಬಿದ್ದು ಮೊರೆ ಇಟ್ಟು ಕಾಶಿಯನ್ನು ಉದ್ದೇಶಿಸಿ ಹೊರಟರು.

## ೩೦. ಚಿದಂಬರ ರಹಸ್ಯ

ಇದು ಹೀಗಿರಲು, ಹಿಂದೆಯೇ ಮುತ್ತುಸ್ವಾಮಿ ಆಯ್ಯರ್‌ವರೂ ಅವರ ಗುರುಗಳಾಗಿ ಬಂದೊದಗಿದ್ದ ಸಚ್ಚಿದಾನಂದ ಸ್ವಾಮಿಗಳೂ ಅರ್ಧ ರಾತ್ರಿಯಲ್ಲಿ ಏಕಾಂತವಾದ ದಾರಿಯಲ್ಲಿ ಹೊದರಲ್ಲಾ, ಅವರ ಸ್ಥಿತಿಗತಿಗಳನ್ನು ಕುರಿತು ಸ್ವಲ್ಪ ವಿಚಾರಿಸೋಣ. ಮುತ್ತುಸ್ವಾಮಿ ಅಯ್ಯರ್ ಸ್ವಾಮಿಗಳನ್ನು ನೆರಳಿನಂತೆ ಹಿಂಬಾಲಿಸಿದರು. ಇವರಿಬ್ಬರೂ ಚಿದಂಬರದ ಕೊನೆಯ ಎಲ್ಲೆಯನ್ನು ದಾಟುವ ತರುಣದಲ್ಲಿ ಸ್ವಾಮಿಗಳು ಇದ್ದಕ್ಕಿದ್ದ ಹಾಗೆ ಹಿಂದೆ ತಿರುಗಿ, "ಆಗೋ, ಆ ಗೋಪರವನ್ನು ನೋಡು. ಅದು, ನೆಲದಿಂದ ಮೇಲಕ್ಕೆದ್ದು ಆಕಾಶ ಲೋಕದೊಂದಿಗೆ ಸಂಬಂಧ ಬೆಳೆಸಿ ಸ್ಥಿರವಾಗಿ ನಿಲ್ಲುವಂತೆ, ನಿನ್ನ

ಮನಸ್ಸು ಊರ್ಧ್ವ ಮುಖವಾಗಿ ಹೋಗಿ ಭ್ರಾಂತಿಗೆ ಒಳಗಾಗದೆ ಸ್ಥಿರಗೊಳ್ಳು ವಂತೆ ಭಗವಂತನು ನಿನಗೆ ಕರುಣಿಸುವನು. ಹಾಗೆ ಅನುಗ್ರಹಿಸುವಂತೆ ಪ್ರಾರ್ಥನೆಯನ್ನು ಸಲ್ಲಿಸಿ ಆ ಗೋಪುರವನ್ನು ಭಗವಂತನ ಪ್ರತೀಕವೆಂದು ಭಾವಿಸಿ ಸೇವೆ ಮಾಡು." ಎಂದು ಆಜ್ಞಾಪಿಸಿದರು. ಮುತ್ತುಸ್ವಾಮಿ ಅಯ್ಯರ್ ಸಹ "ಭಗವಂತ! ನಿನ್ನ ಮಹಿಮೆಯನ್ನು ಅಳೆಯಲು ಸಾಧ್ಯವಿಲ್ಲ. ಮನೋ ವಾಕ್ಕುಗಳಿಗೆ ನಿಲುಕದೆಯೂ, ಸಿಗದೆಯೂ ನಿಲ್ಲುವ ವಸ್ತು ನೀನೊಬ್ಬನೆ ನಿನ್ನ ಸ್ವರೂಪವಾದ ಈ ಲೋಕವನ್ನು ಆದರಿಸಿ ಅಂಕೆಯಲ್ಲಿಟ್ಟಿರುವ ಈ ಆಕಾಶವೂ, ಅದರಲ್ಲಿ ನೀನು ಆಜ್ಞೆ ಮಾಡಿದಂತೆ ಸಂಚರಿಸುವ ನಕ್ಷತ್ರ ಕೂಟ ಗಳಿಂದ ಅಖಿಲಾಂಡ ಕೋಟಿಗಳೂ ತುಂಬಿದ ಈ ಬ್ರಹ್ಮಾಂಡದಲ್ಲಿ ನಾನೊಬ್ಬ ಬಡವ, ಭಿಕಾರಿ, ಅನಾಥ—ನಾಯಿಗೂ ಕಡೆಯಾದವನು. ಹುಳುಗಳಲ್ಲಿ ಹುಳು. ಈ ಲೋಕಗಳ ಸುತ್ತಾಟದಿಂದ ಉದುರುವ ಒಂದು ಕಣಕ್ಕೂ ನಾನು ಸಮನಲ್ಲ. ಮಹಾ ಸಮುದ್ರದಲ್ಲಿನ ಒಂದು ತೊಟ್ಟು. ಉಪ್ಪುನೀರು ಸೌಂದರ್ಯದಲ್ಲಿಯೂ, ಗುಣದಲ್ಲಿಯೂ ನನಗಿಂತಲೂ ಉತ್ತಮವಾದುದು. ಬಿಸಿಲಿನಲ್ಲಿ ಕಾಯ್ದು, ಮಳೆಯಲ್ಲಿ ನೆನೆದು, ಗಾಳಿಯಲ್ಲಿ ಒಣಗುವ, ನಿಶ್ಚೇತನ ವಾದ ಮರಳಿನ ಕಣಕ್ಕೂ ನಾನು ಸಮನಲ್ಲ. ಬೆಟ್ಟ, ನದಿ, ಸಮುದ್ರ, ಗಾಳಿ, ಮೇಘ, ಸೂರ್ಯ, ಚಂದ್ರ, ನಕ್ಷತ್ರಾದಿಗಳು ಮೊದಲಾದ ದೊಡ್ಡ ಕುಟುಂಬ ವನ್ನು, ಸ್ಥಿರವಾಗಿ ನಿಲ್ಲಿಸಿ, ದಾರಿ ತಪ್ಪದೆ, ರಕ್ಷಿಸುವ ಲೀಲೆಯನ್ನು ತೋರಿ ಸುವ ಸನ್ಯಾಸ ಸಂಸಾರಿಯಾದ ನಿನಗೆ ನಾನು ಒಂದು ಗಣ್ಯ ವಸ್ತುವೆಂದು ತೋರಿದುದೂ, ನನ್ನನ್ನು ಅನಾಥನನ್ನಾಗಿ ಬಿಟ್ಟು ಬಿಡಲು ಒಪ್ಪದೆ ಆದರಿ ಸಲು ಎಣಿಸಿದ ನಿನ್ನ ಭಾವವನ್ನು ಕ್ರಿಮಿಗಳಿಂದ ಗ್ರಹಗಳವರೆಗೂ ಚಲನ ವಿಲ್ಲದೆ ಸಂಚರಿಸುವ ನಿನ್ನ ಚಿದ್ವಿಲಾಸ ವೈಭವವನ್ನೂ ನಾನು ನೆನೆಯುವಾಗ ನಿನ್ನ ಗೋಪುರವನ್ನು ಕಂಡು ದಂಡ ಪ್ರಣಾಮ ಮಾಡುವುದು ನನಗೊಂದು ಶ್ರಮವಾದೀತೆ?" ದೀರ್ಘವಾಗಿ ಧ್ಯಾನಮಾಡಿ, ರೋಮಾಂಚಗೊಂಡು, ದೇಹ ವೆಲ್ಲವೂ ನೆಲದ ಮೇಲೆ ಬೀಳುವಂತೆ ಸಾಷ್ಟಾಂಗ ನಮಸ್ಕಾರಮಾಡಿ ಎದ್ದರು. ಎದ್ದ ಕೂಡಲೆ ಸ್ವಾಮಿಗಳು "ಮುತ್ತುಸ್ವಾಮಿ, ನನ್ನ ಚಿನ್ನ" ಎಂದು ಮನ ಸಾರ ಮೆಚ್ಚಿ ಬೆನ್ನು ತಟ್ಟಿ "ತಿಲ್ಲೈ ಸ್ಥಲವೇ ಸ್ಥಲವಪ್ಪಾ!" ತಿಲ್ಲೈ ತಿಲ್ಲೈ

ಎನ್ನುವವರಿಗೆ ಪುನರ್ಜನ್ಮವಿಲ್ಲ" ಎಂಬ ನಾಣ್ಣುಡಿಯೂ, ತೊಲ್ಲೆ ತೊಲ್ಲೆ ಎಂದರೆ,(ತೊಂದರೆ ತೊಂದರೆ) ಎನ್ನುವ ದೊಡ್ಡ ಕ್ಲೇಶ—ಒಲ್ಲೆ ಒಲ್ಲೆ ಎಂದು ದೂರವಾಗುವುದು. ದೇವರು ಇದ್ದಾನೆ ಎನ್ನುವುದೂ ಅಲ್ಲಿಯೇ --ಇಲ್ಲ ವೆಂಬುದೂ ಅಲ್ಲಿಯೇ. ಅರಿವಿಲ್ಲದವರು ಅರಿವನ್ನು ಪಡೆಯುವುದೂ ಅಲ್ಲಿಯೆ. ಅರಿತವರು ಅನುಭವಿಸುವುದೂ ಅಲ್ಲಿಯೇ. ರೂಪವೂ ಇಲ್ಲಿಯೇ—ತೇಜಸ್ಸೂ ಇಲ್ಲಿಯೇ—ಸೃಷ್ಟಿ ಸಂಹಾರಗಳೂ ಇಲ್ಲಿಯೇ. ಉಪನಿಷತ್ತಿನ ಅಂತರಾರ್ಥ ವನ್ನು ಒಳಗೊಂಡಂತಹ ರಚನೆಯುಳ್ಳ ಆಲಯವನ್ನೂ ಅದರೊಳಗೆ ಸೃಷ್ಟಿಗೆ ಹಿಂದೆಯೂ ಮುಂದೆಯೂ ಆನಂದದ ಸ್ಥಿತಿಯನ್ನೂ, ಆಕಾಶ ರೂಪವನ್ನೂ, ಆನಂದ ತಾಂಡವವನ್ನೂ ಒಟ್ಟುಗೂಡಿಸಿ ರೂಪತಾಳಿರುವ ಸಭಾಪತಿಯನ್ನೂ, ರಹಸ್ಯ ತೇಜಸ್ಸನ್ನೂ ಅದಕ್ಕೆ ಹಿನ್ನೆಲೆಯಾಗಿರುವ ಮೂಲ ಮಂತ್ರವನ್ನೂ ಭಾವಿಸಿ, ಸ್ವಾಮಿಗಳು ಜ್ಞಾನಾನಂದವ ಉದ್ಗಾರವನ್ನು ಮಾಡುತ್ತ ಮುಂದೆ ಸಾಗಲು ಅವರ ಹಿಂದೆ ಮುತ್ತುಸ್ವಾಮಿ ಅಯ್ಯರ್ ಸೂರ್ಯನ ಪ್ರತಿಬಿಂಬ ವನ್ನು ತನ್ನೊಳಗೆ ತಾಳಿದ ಇಬ್ಬನಿಯ ಬಿಂದು ಆನಂದದಿಂದ ಪ್ರಜ್ವಲಿಸು ವಂತೆ ತೇಜೋಮಯರಾಗಿ ಆನಂದದಲ್ಲಿ ಮಗ್ನರಾಗಿ ಅವರನ್ನು ಹಿಂಬಾಲಿ ಸಿದರು.

ಈ ರೀತಿಯಲ್ಲಿ ಇವರು ದಾರಿ ನಡೆದು ತಿರುಪತ್ತಿಯೂರೆಂಬ ಗ್ರಾಮ ವನ್ನು ಸೇರಿ ಅಲ್ಲಿರುವ ಪಟ್ಟಣತ್ತಾರ್ ಎಂಬ ಭಕ್ತನ ಸಮಾಧಿಯಲ್ಲಿಗೆ ಹೋಗಿ ಅಲ್ಲಿ ಕೆಲವು ದಿನ ತಂಗಿದ್ದರು. ಒಂದುದಿನ ಪ್ರಪಂಚವೆಲ್ಲವೂ ತನ್ನ ಕುಲಾಚಾರ ಕರ್ಮಾನುಷ್ಠಾನಗಳನ್ನು ಮುಗಿಸಿಕೊಂಡು, ದೇವರಿಗೆ ನಮ ಸ್ಕಾರ ಮಾಡಿ ಧ್ಯಾನ ಮಾಡುವ ಸಂಜೆಯ ಸಮಯದಲ್ಲಿ, ಜ್ಞಾನ-ತಪಸ್ಸಿನ

---

* ಮನುಷ್ಯನ ಚಿನ್ಮಯ ಸ್ವರೂಪದಲ್ಲಿಯೂ ಜ್ಞಾನಾನಂದ ಶಕ್ತಿಯಲ್ಲಿಯೂ ನಂಬಿಕೆ ಇಲ್ಲದವರಿಗೆ ಈ ಅಧ್ಯಾಯ ರುಚಿಸಲಾರದು. ಕಥೆಯನ್ನು ಮಾತ್ರ ಗಮನಿಸುವವರಿಗೆ ಇದು ಅತ್ಯವಶ್ಯವಲ್ಲ.

* ಇದನ್ನು ಗುರು—ಶಿಷ್ಯ ಭಾವವನ್ನು ಅನುಭವಿಸಿದವರಲ್ಲದೆ ಇತರರು ಅರಿ ಯುವುದು ಕಷ್ಟ. ಶಿಷ್ಯನು ಗುರುವನ್ನು ಹುಡುಕುತ್ತ ಹೋಗುವಂತೆಯೆ ಗುರುವೂ ಶಿಷ್ಯನನ್ನು ಅರಸುತ್ತ ಅಲೆಯುವನು.

ಸ್ವರೂಪರಾದ ಸಚ್ಚಿದಾನಂದ ಸ್ವಾಮಿಗಳು ಮೂಲ ಲಿಂಗವನ್ನು ತಬ್ಬಿಕೊಂಡು ಯೋಗ ನಿದ್ರೆಯಲ್ಲಿದ್ದರು. ಆಗ ಮುತ್ತುಸ್ವಾಮಿ ಅಯ್ಯರ್, ಸ್ವಾಮಿಗಳವರ ಇತರ ಕೆಲವು ಶಿಷ್ಯರೂ ಸಮಾಧಿಗೆ ಹೊರಗಿರುವ ಬಾವಿಯ ಬಳಿ ಕುಳಿತಿದ್ದರು.

ಮುತ್ತುಸ್ವಾಮಿ ಅಯ್ಯರ್, "ದೇವರು ಒಬ್ಬನೇ ಆದರೂ ಅವನನ್ನು ಅರಿಯಲೂ, ಅನುಭವಿಸಲೂ, ಹಲವು ದಾರಿಗಳಿವೆ. ಆ ದಾರಿಗಳಲ್ಲೆಲ್ಲ ಉತ್ತಮವಾದ ದಾರಿಯನ್ನು ಯಾವುದು ಬೋಧಿಸುವುದೋ ಅದೇ ಉತ್ತಮವಾದ ಮತ." ಎಂಬ ವಿಷಯವನ್ನು ಕುರಿತು ಮಾತಾಡುತ್ತಿದ್ದಾಗ, "ನಮ್ಮ ಹಿರಿಯರು ದೇವರ ಮೂರ್ತಿಗಳನ್ನೆಲ್ಲ ಜ್ಞಾನಾನಂದ ಮೂರ್ತಿಗಳಾಗಿ ಭಾವನೆ ಮಾಡಿದ್ದಾರೆ. ನಾನರಿತಮಟ್ಟಿಗೆ ಬೇರೆ ಯಾರೂ ದೇವರನ್ನು ಹೀಗೆ ಅರಿಯಲಿಲ್ಲ. ದೇವರು ನಾಶರಹಿತನಾದ ಆನಂದಮೂರ್ತಿ. ಗಣಪತಿಯಾದರೂ ಆನಂದದ ಸೊಕ್ಕಿನಿಂದ ಆ ಪ್ರವಾಹದಲ್ಲಿ ಚಿಕ್ಕ ಕಣ್ಣುಗಳುಳ್ಳ ಆನೆಯ ಸ್ವರೂಪವನ್ನು ತಾಳಿದ್ದಾನೆ. ಸುಬ್ರಹ್ಮಣ್ಯ ದೇವರಾದರೂ ನವಿಲು ವಾಹನವನ್ನೇರಿ ಆನಂದ ಪ್ರೇಮವನ್ನು ಹಾಡುತ್ತಾನೆ. ಮಹಾವಿಷ್ಣು ಕ್ಷೀರಸಮುದ್ರವನ್ನು ಅರಸಿ ಶಯನ ಮಾಡುತ್ತಿದ್ದಾನೆ. ನಿದ್ದೆ ಬಾರದಿದ್ದರೆ ಗರುಡಾರೂಢನಾಗಿ ಆನಂದವಾಗಿ ಮೆರವಣಿಗೆಯನ್ನು ಮಾಡುತ್ತಿರುವನು. ನಟರಾಜನನ್ನು ಕುರಿತಂತೂ ಹೇಳಬೇಕಾಗಿಯೇ ಇಲ್ಲ. "ಚಿತ್ ಸಭೆಯಲ್ಲಿ ಆನಂದ ನರ್ತನವನ್ನು ಮಾಡುವ ಕರುಣಾಕರ ದೈವವೇ!" ಎಂದು ಚೆನ್ನಾಗಿ ಹೇಳಿರುವರು. ಮನುಷ್ಯನಿಗೆ ವಿರೋಧಿಯಾಗಿಯಾದರೋ ಅದು ಮಾಡುವ ಗದ್ದಲವೂ, ಅದರ ಅಲ್ಪ ಸಂತೋಷಗಳೂ, ಅಲ್ಪ ದುಃಖಗಳೂ, ಅತ್ಯಲ್ಪವಾದ ಜಗಳಗಳೂ, ಕಿರಿಕಿರಿಗಳೂ ಮನುಷ್ಯನೂ ಬ್ರಹ್ಮಸ್ವರೂಪನಾಗಿಲ್ಲದಿದ್ದರೆ ಅವನಿಗೆ ಅಷ್ಟು ಆನಂದ ಉಂಟಾದೀತೆ? ಪ್ರಪಂಚವಂತೂ ಮನುಷ್ಯನನ್ನು ಕತ್ತೆಯನ್ನಾಗಿ ಮಾಡುತ್ತದೆ. ಈ ಹೊಟ್ಟೆಯೊಂದು ಇಲ್ಲದಿದ್ದರೆ ಮನುಷ್ಯನಿಗೆ ಸಮನಾರುಂಟು? ಅವನು ಅನುಭವಿಸುವುದಕ್ಕಾಗಿಯೇ ಹುಟ್ಟಿದವನು. ದೇವರು ಅನುಭವಿಸಲು ಶಕ್ತಿಯನ್ನು ಕೊಟ್ಟು, ಆ ಅನುಭವ ಸುಲಭವಾಗಿ ಎಟುಕದಂತೆ ಬಲವಾದ ತಡೆಗಳನ್ನೂ ಉಂಟುಮಾಡಿದ್ದಾನೆ. ನಾವು ಒಂದು

ಮಾಂಸದ ತುಂಡನ್ನು ನಾಯಿಗೆ ತೋರಿಸಿ, ದೂರ ಬೀಸಿ ಎಸೆದು, ಆಟವಾಡು ವಂತೆ ದೇವರೂ ನಮ್ಮನ್ನು ಪರೀಕ್ಷೆಗೆ ಗುರಿಮಾಡಿ ಆಟವಾಡುತ್ತಾನೆ. ಅರ್ಜುನನನ್ನು ಜಗಳಕ್ಕೆ ಕರೆದು ಅವನ ಮೇಲೆ ಕೈಮಾಡಿ ಜಗಳವಾಡಿಯಲ್ಲವೇ ದೇವರು ಅವನಿಗೆ ಪಾಶುಪತಾಸ್ತ್ರವನ್ನು ದಯಪಾಲಿಸಿದುದು? ಆದರಂತೆ ನಮ್ಮನ್ನು ಪರೀಕ್ಷೆ ಮಾಡುವುದರಲ್ಲಿ ಅವನಿಗೆ ಬಹಳ ತೃಪ್ತಿ. ನಾವೆಲ್ಲರೂ ಅವನಿಗೆ ಮಕ್ಕಳು. ನಮ್ಮನ್ನು ಅಟ್ಟಿ ಓಡಿಸುತ್ತಲೂ, ನಾವು ಅಟ್ಟಿಸಿಕೊಂಡು ಹೋದರೆ ತಾನು ಓಡುತ್ತ, ನಮ್ಮೊಡನೆ ಸರಸ ಸಲ್ಲಾಪ ಮಾಡುತ್ತ, ಹೊಡೆದು, ಜಿಗುಟಿ, ಜೋಗುಳ ಹೇಳುತ್ತ ಮೋಸಗೊಳಿಸುತ್ತ, ಬಾರಿ ಬಾರಿಗೂ ಅಳುವಂತೆ ಮಾಡಿ, ನಗುವಂತೆ ಮಾಡುವುದು—ಅವನ ಕಸಬಾಗಿದೆ. ನಮಗೆ ಆಟವಾಡಲು ಕೊಟ್ಟಿರುವ ಸಾಮಾನುಗಳನ್ನಾದರೂ ನೋಡಿ. ಮರಗಳು, ನದಿಗಳು, ನಕ್ಷತ್ರಗಳು, ಮೇಘಗಳು, ಆಕಾಶ; ನಮಗೇನು ಕಡಮೆ? ಇವುಗಳನ್ನು ನಾವು ಅನುಭವಿಸದಿದ್ದರೆ ಅದು ನಮ್ಮ ತಪ್ಪು." ಎಂದು ಉತ್ಸಾಹದಿಂದ ಮಾತಾಡುತ್ತಿದ್ದಾಗ ಇದ್ದಕ್ಕಿದ್ದಂತೆ ದೊಡ್ಡ ವಿಷಯ ಗಳನ್ನು ಕುರಿತು ಮಾತಾಡಲು ಒಂದು ಆಸೆಯೂ, ಎಲ್ಲೆ ಮೀರಿದ ಕುತೂ ಹಲವೂ ಉಂಟಾಯಿತು.

ಅವರು ಆಕಾಶ, ಗಾಳಿ, ಮೇಘ, ದೇವರು—ಇವುಗಳೆಲ್ಲವನ್ನೂ ಕುರಿತು ಮಾತಾಡಿದರೂ ಅವರ ಮನಸ್ಸಿನಲ್ಲಿ ಉಕ್ಕಿ ಬಂದ ಭಾವನೆಗಳು ಶಮನಗೊಳ್ಳ ಲಿಲ್ಲ. ಈ ವಿಧವಾಗಿ ಸ್ವಲ್ಪಹೊತ್ತು ಅವರಿಗೆ ಅಸಾಧಾರಣವಾದ ಲವಲವಿಕೆ ಉಂಟಾಗಿತ್ತು. ಬಹಳ ಹೆಚ್ಚಾದ ಮನಸ್ಸಿನ ಹಸಿವು ತೋರಿತು. ಹೀಗೆ ಕೆಲವು ನಿಮಿಷಗಳು ಕಳೆದ ನಂತರ ಆ ಚಟುವಟಿಕೆ ಶಾಂತಗೊಂಡು ಒಂದು ಬಗೆಯ ಆನಂದ ಅವರಲ್ಲಿ ಜನಿಸಿತು. ಕಾರಣರಹಿತವಾದ ಒಂದುಬಗೆಯ ಕುತೂಹಲ ಅವರ ಮನಸ್ಸಿನಲ್ಲಿ ಉದಯಿಸಲು ಅವರು ಕಣ್ಣು ಮುಚ್ಚುವಂತಾಯಿತು. ಮಾತು ನಿಂತು ಮೌನ ನೆಲಸಿತು. ಮನಸ್ಸಿನಲ್ಲಿಯೇ ಅನುಭವಿಸುವ ಭಾವನೆ ಹೊರತು ಉಳಿದ ನೆನಪುಗಳೆಲ್ಲವೂ ಅಳಿದುವು. ಹೊರಗೆ ಕಾಣುವ ವಸ್ತು ಗಳೆಲ್ಲ ಮನಸ್ಸಿಗೆ ಸೋಕಲೇ ಇಲ್ಲ. ಅವರು ಆಕಾಶ ತತ್ತ್ವದೊಂದಿಗೆ ಬೆರೆತು ಐಕ್ಯವಾದಂತೆ ಅವರ ಮನಸ್ಸು ಅಖಂಡಾಕಾರವಾದ ವಿಸ್ತರಣವನ್ನು

ಪಡೆಯಿತು. ಅವರು ಅನುಭವಿಸಿದ ಆನಂದಕ್ಕೆ ಯಾವುದೂ ಎಣೆ ಇಲ್ಲ. ಆ ಕಾಲದಲ್ಲಿ ಇತರ ಎಲ್ಲ ಬಗೆಯ ಸಂತೋಷವೂ ಅವರಿಗೆ ತುಚ್ಛವೆಂದು ತೋರಿತು. ಅವರ ಮನಸ್ಸಿನಲ್ಲಿ ತರಂಗ ತರಂಗವಾಗಿ ಅಲೆಗಳು ಉಕ್ಕಿ ಎದ್ದುವು. ಅವರ ಮುಖ ಅರಳಿದಂತೆಯೇ ಇತ್ತು. ಕಣ್ಣಿಗೆ ಎಲ್ಲವೂ ಪೂರ್ತಿಯಾಗಿ ಮರೆ ಆಯಿತು. ತಾನೇ ಬ್ರಹ್ಮಮಯವಾದವರಂತೆ ಒಂದು ವಿಧವಾದ ಅರಿವು ಅವರಿಗೆ ಉಂಟಾಯಿತು. ಇಂದ್ರಿಯಗಳೆಲ್ಲವೂ ಶಮನ ಗೊಂಡುವು.

ಭಗವದ್ವಿಷಯವಾಗಿ ಮೆತ್ತನೆ ದನಿಯಲ್ಲಿ ಪಕ್ಕದಲ್ಲಿರುವವರು ಮಾತಾ ಡಲು ಅವರಿಗೆ ಆ ಆನಂದ ಅಧಿಕವಾಯಿತು. ಹೇಳುವುದಕ್ಕಾಗದ ಈ ವಿಧ ವಾದ ಆನಂದದಲ್ಲಿ ಅವರಿದ್ದಾಗ ಸ್ವಾಮಿಗಳು ಒಳಗಿನಿಂದ ಹೊರಕ್ಕೆ ಬಂದರು. ಅವರನ್ನು ಕಂಡ ಕೂಡಲೆ ಮುತ್ತುಸ್ವಾಮಿ ಅಯ್ಯರ್‌ಗೆ ಆನಂದ ಮತ್ತಷ್ಟು ಹೆಚ್ಚಿತು. ಸ್ವಾಮಿಗಳು ಅವರ ಪಕ್ಕದಲ್ಲಿ ಕುಳಿತು, "ಇದೇ ಪರಮ ಸುಖ. ನಿನಗೆ ಪರಿಪಕ್ವ ಕಾಲ ಸಮೀಪಿಸುತ್ತಿದೆ" ಎಂದು ಹೇಳಿ ಉತ್ಸಾಹಗೊಳಿಸಲು ಮುತ್ತುಸ್ವಾಮಿ ಅಯ್ಯರ್‌ಗೆ ಆನಂದ ಮೇರೆ ಮೀರಿ ಕೋಡಿ ಹರಿಯಿತು. ಅವರು ಬಾಯಿಬಿಟ್ಟು ನಗುವುದಕ್ಕೆ ತೊಡಗಿದರು. ಇಂತಹ ಬಗೆಯ ಸಂತೋಷ ವೆಂದು ಬಾಯಿಂದ ಹೇಳಲೂ ಆಗಲಿಲ್ಲ. ಮನಸ್ಸಿನಲ್ಲಿ ಆನಂದಾಮೃತ ಕಾರಂಜಿಯಂತೆ ಉಕ್ಕಿ ಬರುತ್ತಿತ್ತು. ಈ ವಿಧವಾಗಿ ಹೊತ್ತು ಹೋಗುವುದೇ ತಿಳಿಯದೆ ರಾತ್ರಿಯೆಲ್ಲವೂ ಕಳೆಯಿತು. ಮರುದಿನವೂ ಹೀಗೆಯೇ ಮುಂದು ವರಿಯ ಬಹುದಾಗಿತ್ತು. ಆದರೆ ಬೆಳಗಾಗುತ್ತಲೆ ತಮ್ಮಟೆಯ ಶಬ್ದವೂ, ಸಮೀಪದಲ್ಲಿ ಹೀನ ಜಾತಿಯ ಹೆಂಗಸರಲ್ಲಿ ಉಂಟಾದ ಕಲಹಗಳ ಶಬ್ದವೂ ಅದನ್ನು ಕೆಡಿಸಿದುವು.

## ೩೧. ಕಳ್ಳ ಬೈರಾಗಿ

ಇಲ್ಲಿ ಮುತ್ತುಸ್ವಾಮಿ ಅಯ್ಯರ್ ಹೀಗೆ ಆನಂದದಲ್ಲಿ ಮಗ್ನರಾಗಿರಲು, ಕಮಲಾಂಬಾಳ್, ಲಕ್ಷ್ಮಿ, ಅಮ್ಮಯ್ಯಪ್ಪ ಪಿಳ್ಳೆ ಮೊದಲಾದವರು, ಚಿದಂಬರ

ನಿಂದ ಹೊರಟು ಮದರಾಸ್‌ಗೆ ಬಂದು ಶ್ರೀನಿವಾಸನು ಮೊದಲಿದ್ದ ಜಾಗದ ಲ್ಲಿಯೇ ತಂಗಿದರು. ಕಮಲಾಂಬಾಳ್: "ದೈವವೆ! ನಿನ್ನ ದಿವ್ಯ ಚಿತ್ತವು ಹೀಗೆಯೆ! ನಾನು ದುಃಖ ಪಡುವುದು ಸಾಲದೆಂದು ನನ್ನ ಮಗಳನ್ನೂ ಸಹ ಹೀಗೆ ಗೋಳಾಡಿಸುತ್ತೀಯಾ" ಎಂದು ಬಿಡುವಿಲ್ಲದೆ ಚಿಂತಿಸಿದಳು. ಲಕ್ಷ್ಮಿ, "ತಂದೆಯನ್ನೂ, ಗಂಡನನ್ನೂ, ಕಳೆದುಕೊಂಡು ಪ್ರಾಣವನ್ನುಳಿಸಿಕೊಂಡಿ ರುವ ಕಳ್ಳಿ ನಾನಲ್ಲವೆ?" ಎಂದು ಪ್ರಲಾಪಿಸಿದಳು. ಅಮ್ಮಯ್ಯಪ್ಪ ಪಿಳ್ಳೈ ಊರಲ್ಲೆಲ್ಲ ಅಲೆದಾಡಿ ನೋಡುತ್ತಿದ್ದರು. ಹೀಗಿರುವಾಗ ಪಕ್ಕದಮನೆಯ ಅಜ್ಜಿಯೊಬ್ಬಳು ಕಮಲಾಂಬಾಳ್ ಬಳಿ ಬಂದು ಅವಳ ಸ್ಥಿತಿಯನ್ನು ಕಂಡು ಕನಿಕರಗೊಂಡು "ಅಮ್ಮಾ! ತಿರುವತ್ತಿಯೂರೆಂದು ಇಲ್ಲಿಗೆ ಸಮೀಪದಲ್ಲಿ ಮಹಾ ಕ್ಷೇತ್ರ ಒಂದಿದೆ. ಅಲ್ಲಿಯೇ ಪಟ್ಟಣತ್ತಾರೆನ್ನುವ ಸಂತರು ಸಮಾಧಿ ಹೊಂದಿರುವರು. ಅವರ ಗುಡಿಯಲ್ಲಿ ಒಬ್ಬರು ದೊಡ್ಡವರು ಬಂದಿದ್ದಾರೆ. ಅವರಿಗೆ ನೂರು ವರ್ಷವಂತೆ. ಅನ್ನ ಆಹಾರಗಳಿಲ್ಲವಂತೆ. ನಡೆದುದು, ನಡೆ ಯುವುದು, ನಡೆಯಲಿರುವುದು, ಎಲ್ಲವನ್ನೂ ಸ್ವಲ್ಪ ಕೂಡ ತಪ್ಪಿಲ್ಲದೆ ಹೇಳ ಬಲ್ಲವರಂತೆ ಮನುಷ್ಯನನ್ನು ನೋಡಿದ ಕೂಡಲೆ, ಅವನು ಇಂತಹ ಕೆಲಸ ಕ್ಕಾಗಿ ಬಂದಿರುವನೆಂದು ಹೇಳಿ, ಅದು ಫಲಿಸುವುದು, ಫಲಿಸಲಾರದು— ಎಂದೂ ಹೇಳುತ್ತಾರಂತೆ. ಬಹು ಲಕ್ಷಣವಾಗಿದ್ದಾರಂತೆ ತುಂಬ ಮುದುಕ ರಂತೆ. ಬಹಳ ಶಾಂತವಾದ ಮೂರ್ತಿಯಂತೆ ಅವರ ಹೆಸರು ಏನೊ ಒಂದು ಆನಂದಸ್ವಾಮಿಗಳೆಂದು ಬರುತ್ತೆ—ಆಂ—ಸರಿಯೆ "ಸಚ್ಚಿದಾನಂದ ಸ್ವಾಮಿ ಗಳು." ಅವರನ್ನು ಹೋಗಿ ಕಂಡರೆ ನಿನ್ನ ದುಃಖ ಈ ಕ್ಷಣದಲ್ಲಿಯೇ ನಿವೃತ್ತಿ ಯಾಗುವುದಮ್ಮಾ. ಆದರೆ ಅವರು ಈಗ ಅಲ್ಲಿಯೇ ಇರುವರೊ, ಇಲ್ಲವೊ? ಮೊದಲೇ ಯಾರನ್ನಾದರು ಹೋಗಿ ನೋಡಿಕೊಂಡು ಬರುವಂತೆ ಹೇಳಿ ಆಮೇಲೆ ನೀವೆಲ್ಲರು ಹೋಗಬಹುದು." ಎಂದು ಹೇಳಲು, ಕಮಲಾಂಬಾಳ್ "ಅಮ್ಮಾ! ದೊಡ್ಡ ಉಪಕಾರ ಮಾಡಿದಿರಿ. ಈ ಸಹಾಯ ಯಾರು ಮಾಡು ತ್ತಾರೆ? ಈ ಕಾಲದಲ್ಲಿ ಏನೊ ನಮ್ಮ ಸ್ಥಿತಿಯನ್ನು ಕಂಡು ಕನಿಕರ ತಾಳಿ ಇಷ್ಟು ಒಳ್ಳೆಯ ಸುದ್ದಿಯನ್ನು ಹೇಳಿದ ನಿಮಗೆ ನಾನು ಯಾವ ಉಪಕಾರ ವನ್ನು ಮಾಡಬಲ್ಲೆ?" ಎಂದು ಉಪಚಾರವನ್ನು ಹೇಳಿ ಅಮ್ಮಯ್ಯಪ್ಪ ಪಿಳ್ಳೈ

ಬಂದ ಕೂಡಲೆ ಅವರಿಗೆ ಈ ಮಾತನ್ನು ತಿಳಿಸಿದಳು. ಅವರು "ಇಗೋ ನಾನು ಹೋಗಿ ನೋಡಿ ಬರುತ್ತೇನೆ" ಎಂದು ಹೇಳಿ ಹೊರಟರು.

ಪಿಳ್ಳೈಯವರು ತಿರುವತ್ತಿಯೂರನ್ನು ತಲುಪಿ, ಪಟ್ಟಣತ್ತಾರ್ ಗುಡಿಗೆ ದಾರಿಯನ್ನು ಕೇಳುತ್ತಿದ್ದರು. "ಆಯಿತು, ಇನ್ನು ಕಾಲುಗಂಟೆಯಾದ ಮೇಲೆ ಕಮಲಾಂಬಾಳ್ ಚಿಂತೆ ಹರಿಯಿತು." ಅಮ್ಮಯ್ಯಪ್ಪ ಪಿಳ್ಳೈ ಸರಸರನೆ ಬರುತ್ತಿದ್ದಾರೆ. ಹಾಗೆ ಬರುತ್ತಿದ್ದಾಗ ದಾರಿಯಲ್ಲಿ ಬೈರಾಗಿಯೊಬ್ಬನು ಕುಳಿತಿದ್ದನು. ಅವರು ಅವನನ್ನು ಪಟ್ಟಣತ್ತಾರ್ ಗುಡಿಗೆ ದಾರಿಯನ್ನು ಕೇಳಲು, ಅವನು ಅವರ ಮಡಲಿನಲ್ಲಿದ್ದ ಹಣದ ಚೀಲವನ್ನು ನೋಡಿ, ಅವರನ್ನು ಹೊಸಬರೆಂದು ಕಂಡುಕೊಂಡು, ಕಾತುರನಾಗಿ ಎದ್ದು ಅವರನ್ನು ನಮಸ್ಕರಿಸಿ "ಸ್ವಾಮೀ! ದಾಸ ನಾನು ಕರೆದುಕೊಂಡು ಹೋಗುತ್ತೇನೆ ಬನ್ನಿ. ಈ ನಾಯಿ ಈ ಹೊತ್ತು ಒಳ್ಳೆಯ ಪೂಜೆ ಮಾಡಿತು. ತಮ್ಮಂತಹ ದೊಡ್ಡವರ ಸೇವೆ ನನಗೆ ಲಭಿಸಿತು. ಸ್ವಾಮೀ! ಏನೋ, ತಮ್ಮಲ್ಲಿ ವಶೀಕರಣದ ಮದ್ದು ಇದೆ. ಸೂಜಿಯನ್ನು ಅಯಃಕಾಂತ ಎಳೆಯುವಂತೆ ನನ್ನನ್ನು ಎಳೆಯುತ್ತಿದೆ." ಎಂದು ಸ್ತೋತ್ರ ಮಾಡಿದನು. ನಿಜವಾಗಿಯೂ ಅವರ ಬಳಿಯಲ್ಲಿ 'ಬೆಳ್ಳಿಯ ಆಯಃಕಾಂತ' (ನಾಣ್ಯ) ಮಡಲಿನಲ್ಲಿ ಚೀಲದಲ್ಲಿತ್ತು. (ಹಣವಿಲ್ಲದೆ ಪಿಳ್ಳೈಯವರು ಹೊರಗೆ ಹೊರಡುವ ಅಭ್ಯಾಸವಿರಲಿಲ್ಲ.) ಪಿಳ್ಳೈಯವರಿಗೆ ಅದರ ಜ್ಞಾಪಕ ವಿರಲಿಲ್ಲ. ಯಥಾರ್ಥವಾಗಿಯೇ ಏನೋ ತನ್ನಲ್ಲಿ ಅದ್ಭುತವಾದ ವಶೀಕರಣ ಶಕ್ತಿಯೊಂದು ಇರುವುದಾಗಿ ಅವರು ಭಾವಿಸಿ ಸಂತೋಷಿಸಿದರು. ಇದೇ ಸಮಯವೆಂದು ಕಂಡ ಆ ಬೈರಾಗಿ "ಸ್ವಾಮೀ! ತಮ್ಮ ಊರಿನ ಹೆಸರನ್ನು ತಿಳಿಯಲು ಈ ನಾಯಿ ಆಸೆ ಪಡುತ್ತದೆ." ಎಂದು ಕೈಜೋಡಿಸಿ, ಬಾಯನ್ನು ಮುಚ್ಚಿಕೊಂಡು ವಿನಯವಾಗಿ ಕೇಳಲು, ಅಮ್ಮಯ್ಯಪ್ಪ ಪಿಳ್ಳೈಯವರು ಸಿಡುಬಿನಿಂದ ಕಲೆಯಾಗಿದ್ದ ತನ್ನ ಕಪ್ಪುಮುಖದ ಮೇಲೆ ಮಂದಹಾಸವನ್ನು ಬೀರುತ್ತ, ತಾನು ಆಡುಸಾಪಟ್ಟಿಯಲ್ಲಿ ಅವತರಿಸಿದ ಪುಣ್ಯ ಚರಿತ್ರೆಯನ್ನು ವಿಶದವಾಗಿ ಹೇಳಿ, ಸದ್ಯದಲ್ಲಿ ದೇವತೆಗಳು ಹೊಗಳುವ ಅಷ್ಟಾವಧಾನ ಆಡುಸಾಪಟ್ಟಿ ಅಮ್ಮಯ್ಯಪ್ಪ ಕವಿರಾಯರಾಗಿ ಬೆಳಗುತ್ತಿರುವುದನ್ನು ಸೂಕ್ಷ್ಮ ವಾಗಿ ತಿಳಿಯ ಹೇಳಿದರು. ಅದನ್ನು ಕೇಳಿದ ಅಷಾಢಭೂತಿ ಬೈರಾಗಿ,

ಕೈಜೋಡಿಸಿಕೊಂಡು (ಬಂದ ನಗುವನ್ನು ಅಡಗಿಸಲು) ಬಾಯನ್ನು ಮುಚ್ಚಿಕೊಂಡು ನಿಂತು, ಅಡ್ಡಬಿದ್ದು ನಮಸ್ಕಾರ ಮಾಡಿ, "ಸ್ವಾಮಿಾ! ಈ ನಾಯಿ ಇನ್ನು ತಮ್ಮ ಗುಲಾಮ. ಈ ನಾಯಿಯೂ ತಮಿಾಳಿನಲ್ಲಿ ಸ್ವಲ್ಪ ಓದುವುದೂ ಬರೆಯುವುದೂ ಮಾಡುತ್ತದೆ. ಸ್ವಲ್ಪ ಸ್ವಲ್ಪ ಓದು ಬರುತ್ತದೆ. ತಮ್ಮಂತಹ ವಿದ್ವಾಂಸರನ್ನು ಕಂಡರೆ ಈ ನಾಯಿಗೆ ತಲೆ ಕಾಲು ತಿಳಿಯುವುದಿಲ್ಲ." ಎಂದು ಹೇಳಿ ಅವರ ಮಡಲಿನಲ್ಲಿ ಚೀಲದಲ್ಲಿ ಭದ್ರಪಡಿಸಿದ್ದ ಲಕ್ಷ್ಮೀದೇವಿಯನ್ನು ಅಂತರಂಗ ಭಕ್ತಿಯೊಡನೆ ಧ್ಯಾನಿಸಿ, ಮತ್ತೆ ಅಡ್ಡಬೀಳಲು, ವಿದ್ವಾನ್ ಅಮ್ಮಯ್ಯಪ್ಪ ಪಿಳ್ಳೆ ಆ ನಮಸ್ಕಾರಗಳೆಲ್ಲವನ್ನೂ ತನಗೇ ಅರ್ಪಣೆ ಮಾಡಿಕೊಂಡು, ದೊಡ್ಡಸ್ತಿಕೆಯ ಮಂದಹಾಸದೊಡನೆ ಹಸ್ತಲಾಘವವನ್ನು ಮಾಡಿ ಅವನನ್ನು ಎಬ್ಬಿಸಿದರು. ಹಾಗೆ ಎಬ್ಬಿಸುವಾಗಲೇ ಜ್ಞಾನಚಕ್ಷುವ ಪಡೆದಿದ್ದ ಆ ಬೈರಾಗಿಗೆ ಚೀಲದಲ್ಲಿ ಇಷ್ಟು ಹಣವಿರಬಹುದೆಂದು ಅಂದಾಜು ಮಾಡಲು ಅನುಕೂಲವಾಯಿತು. ಪಿಳ್ಳೆಯವರು ಆ ಬಡ ಬೈರಾಗಿಗೆ ಅಭಯ ಹಸ್ತವನ್ನು ಅನುಗ್ರಹಿಸಿ ಅವನ ವಿದ್ಯಾಪ್ರೌಢಿಮೆಯನ್ನು ಪರೀಕ್ಷಿಸಲು ಆಸೆಗೊಂಡು, "ನೀವು ಏನಾದರೂ ಪದ್ಯಗಳನ್ನು ನೋಡಿದ್ದುಂಟೆ?" ಎಂದು ಗಂಭೀರವಾಗಿ ಕೇಳಲು, ಅವನು "ಮುರಗಯ್ಯಾ, ವೇಲಾಯುಧಂ! ಸ್ವಾಮಿ! ಅವನೇ ನನ್ನ ದೈವ! ಅವನೊಬ್ಬ ಭಿಕಾರಿ — ನಾನೂ ಒಬ್ಬ ಭಿಕಾರಿ. ಅವನು ಬೆಟ್ಟದ ಮೇಲಿನ ಭಿಕಾರಿ—ನಾನು ಕೆಳಗಿರುವ ಭಿಕಾರಿ. ಅವನನ್ನು ಕುರಿತು ಈ ನಾಯಿ ಏನೋ ಒಂದೆರಡು ಬೊಗಳಿದೆ. ಬೇರೆ ಏನನ್ನು ತಾನೆ ತಿಳಿದುಕೊಂಡೀತು?" ಎಂದು ನಮ್ರತೆಯಿಂದ ಹೇಳಲು, ಕವಿರಾಯರು, "ಎಲ್ಲಿ? ಅದನ್ನು ಕೇಳೋಣ, ಹೇಳು." ಎಂದು ಆಜ್ಞಾಪಿಸಲು, ಅವರ ಆಜ್ಞೆಯನ್ನು ಶಿರಸಾವಹಿಸಿ,

> "ಆರು ಮುಖ ಮಾರು ಮುಖ ಮಾರು ಮುಖ ಮಾರು ಮುಖ
> ಮಾರು ಮುಖ ಮಾರು ಮುಖ ಮಾರು ಮುಖ ಮಾರು ಮುಖಂ
> ಏರು ನವಿಲೇರು ನವಿಲೇರು ನವಿಲ್
> ಏರು ನವಿಲೇರು ನವಿಲೇರು ನವಿಲ್."

ಎಂದು ಹಾಡಿ ಮುಗಿಸಲು ಕವಿರಾಯರ ಪಾಡು ಸಂಕಟಕ್ಕೆ ಈಡಾಯಿತು.

ಆ ಹಾಡಿಗೆ ಅರ್ಥವನ್ನು ಕೇಳಿದರೆ ಏನಾಗುವುದೊ ಎನ್ನುವ ಭಯ. ಆದರೂ ಅವನು ಅರ್ಥ ಕೇಳುವವರೆಗೂ ಅವಕಾಶ ಕೊಡಬಾರದೆಂದು ತೀರ್ಮಾನಿಸಿ, "ಹಾಡು ಚೆನ್ನಾಗಿದೆ—ಲಯ ಸೊಗಸಾಗಿದೆ — ಪದ, ಅರ್ಥ ತುಂಬ ಹೊಂದಿಕೊಂಡಿವೆ." ಎಂದು ಉಪಚಾರ ಹೇಳಲು ಅವನು, "ಈ ನಾಯಿ ಅನೇಕ ರೀತಿಯ ಛಂದಸ್ಸುಗಳಲ್ಲಿ ಬರೆದು ಹಾಡಬಲ್ಲದು." ಎಂದು ಹೇಳಿ ಈ ವಿವಿಧ ರೀತಿಯ ಪದ್ಯ ವೈಖರಿಗಳನ್ನು ಚಂಡ ಪ್ರಚಂಡನಾಗಿ ಹೇಳಲು, ಕವಿರಾಯರು "ಇದೇನು ? ನಾವು ಕನಸಿನಲ್ಲಿಯೂ ಕೇಳದ ಸಂಗತಿಗಳಾಗಿವೆಯಲ್ಲ! ಬಾವಿ ಅಗೆಯಲು ಹೋಗಿ ಭೂತವನ್ನೆಬ್ಬಿಸಿದಂತೆ ಆಯಿತು." ಎಂದು ಭಯಗೊಂಡು ತಾನು ಬಹಳ ಬುದ್ಧಿಶಾಲಿಯಾದುದರಿಂದ ಯುಕ್ತಿಯಿಂದ ತಪ್ಪಿಸಿಕೊಳ್ಳುವ ದಾರಿಯನ್ನು ಹುಡುಕಿ ತನ್ನ ಕವಿತಾ ಅಂಗಡಿಯನ್ನು ಬಿಚ್ಚಿದರು. ಅರ್ಥವೋ ಅರ್ಥವಿಲ್ಲವೋ—ಅದು ಅವರಿಗೆ ಲಕ್ಷ್ಯವೇ ಇರಲಿಲ್ಲ. ವ್ಯಾಕರಣ ವಿಧಿಗಳನ್ನು ಗಮನಿಸಿದರೆ ಗಿಟ್ಟಲಾರದು.

* ಹೂಗಳರಳಿ ಎಡೆಯಿಲ್ಲದೆ — ಮತಿಯಿಲ್ಲದವರೇ,
ಡು ಡು ಡು ಡು ಡು ಡು ಡು ಡು.
ಹೂಗಳರಳಿ ಎಡೆಯಿಲ್ಲದೆ—ಮತಿಯಿಲ್ಲದವರೇ,
ಡು ಡು ಡು ಡು ಡು ಡು ಡು ಡು.

ಎಂದು 'ಡು'ಕಾರ ವರ್ಗದಲ್ಲಿಯೂ

* "ಚೇರ್ಚಿ ಚೂ ಚೋ ಚಾಚು ಚೂಚಾ ಚೀಚು ಚಚ್ಚೈ" ಎಂದು 'ಚ'ಕಾರ ವರ್ಗದಲ್ಲಿಯೂ ಹಾಡುಗಳನ್ನು ಬಾಚಿ ಎಸೆಯಲಾರಂಭಿಸಿದರು. ಅವರು ಈ ವಿಧವಾದ ವಿದ್ಯೆಯ ಉನ್ಮಾದದಲ್ಲಿದ್ದಾಗ ಇದೇ ಸಮಯವೆಂದು ಕಂಡ ಆ ಭೈರಾಗಿ ಮಾತಾಡುತ್ತಲೇ ಅವರಿಗೆ ದಾರಿ ತಪ್ಪಿಸಿ ಎಳೆದುಕೊಂಡು ಹೋದನು. ಅಮ್ಮಯ್ಯಪ್ಪ ಹಿಳ್ಳೆಗೆ ಇದ್ದ ಆವೇಶದಲ್ಲಿ ಎಲ್ಲಿ ಹೋಗುತ್ತೇವೆ ಬರುತ್ತೇವೆ ಎನ್ನುವ ನೆನೆಪು ಕೂಡ ಇಲ್ಲ. ಅವರು ಕೇವಲ ಚಿತ್ರ ಕವಿತೆಗಳಲ್ಲಿಯೇ ಮುಗಿಸದೆ, ಉತ್ಪ್ರೇಕ್ಷೆ ಮೊದಲಾದ ಅಲಂಕಾರ

---

* ಈ ಹಾಡುಗಳ ಅರ್ಥ ನಾನು ಎಲ್ಲಿ ವಿಚಾರಿಸಿದುದರಲ್ಲಿಯೂ ಸಿಗಲಿಲ್ಲ. ಯಾರಾದರೂ ದಯಮಾಡಿ ಹೇಳಿದರೆ ವಂದನೆ ಸಲ್ಲಿಸುವೆನು.

ಕವಿತ್ವಕ್ಕೂ ಹೊಕ್ಕುಬಿಟ್ಟರು. ಒಬ್ಬ ಹೆಂಗಸು ವಿರಹತಾಪದಲ್ಲಿದ್ದಳಂತೆ. ಆಗ ಹೊತ್ತಾದುದರಿಂದ ಸೂರ್ಯನು ತನ್ನ ಪದ್ಧತಿಯಂತೆ ಕ್ರಮವಾಗಿ ಅಸ್ತಮಿಸಿದನು. ಹಾಗೆ ಹೇಳುವುದಕ್ಕೆ ಬದಲಾಗಿ ನಮ್ಮ ವಿದ್ವಾಂಸರು "ಸೂರ್ಯನೆಂಬ ಗಾಳಿಪಟ ಆ ಹೆಂಗಸಿನ ನಿಟ್ಟುಸಿರೆಂಬ ಚಂಡಮಾರುತದ ಹೊಡೆತಕ್ಕೆ ಸಿಕ್ಕು ಕೆಳಕ್ಕೆ ಬಿತ್ತು. ಬಿದ್ದು ಮೈಯಲ್ಲ ಗಾಯವಾಗಿ ರಕ್ತ ಸುರಿದುದರಿಂದ ಆಕಾಶವೆಲ್ಲ ಕೆಂಪಾಯಿತು" ಎಂದು ದಿವ್ಯವಾದ ಶೃಂಗಾರ ರಸದಿಂದ ಕೂಡಿದ ಹಲವು ಹಾಡುಗಳನ್ನು ಹಾಡಿದರು. ವಸಂತ ಕಾಲವನ್ನು ವರ್ಣಿಸುವಾಗ, ವಸಂತಕಾಲ ಮಳೆಗಾಲದೊಂದಿಗೆ ಹೋಲಿಸಿ ಹಾಡಿದರು. ಏಕೆಂದರೆ ಮಳೆಗಾಲದಲ್ಲಿ ಮೇಘಗಳು ತುಂಬಿರುವುವು. ವಸಂತ ಕಾಲದಲ್ಲಿಯೂ ಹೆಂಗಸರ ಜಡೆಗಳಂತೆ ಮೇಘಗಳುಂಟು. ಅಲ್ಲದೆ ಮಳೆಗಾಲದಲ್ಲಿ ಮಳೆ ಹುಯ್ಯುವುದು. ಅದರಂತೆ ವಸಂತಕಾಲದಲ್ಲಿಯೂ ಹೆಂಗಸರು ನಾಯಕರೊಡನೆ ಕೋಪಿಸಿಕೊಂಡು ಅಳುತ್ತಾರೆ. ಮಳೆಗಾಲದಲ್ಲಿ ದೊಡ್ಡ ಗಾಳಿ ಬೀಸುವುಧು. ಅಂತೆಯೇ ವಸಂತ ಕಾಲದಲ್ಲಿಯೂ ಹೆಂಗಸರು ವಿರಹತಾಪದಿಂದ ನಿಟ್ಟುಸಿರು ಬಿಡುವರು. ಮಳೆಗಾಲದಲ್ಲಿ ನವಿಲುಗಳಾಡುವುವು. ಅದರಂತೆ ವಸಂತ ಕಾಲದಲ್ಲಿಯೂ ಹೆಂಗಸರೆಂಬ ನವಿಲುಗಳು ಆಡುತ್ತಾರೆ." ಎಂದು ಹೀಗೆಲ್ಲ ಅಪೂರ್ವವಾದ ಉಪಮಾನಗಳನ್ನೆತ್ತಿ ಹೇಳಿದರು.

ಇಲ್ಲಿ ಇವರು ಹೀಗೆ ಪ್ರಸಂಗ ಮಾಡುತ್ತಿದ್ದಾಗಲೇ ಪಟ್ಟಣತ್ತಾರವರ ಸಮಾಧಿಯಲ್ಲಿ ಸ್ವಾಮಿಗಳು, ಮುತ್ತುಸ್ವಾಮಿ ಅಯ್ಯರ್‌ನನ್ನು ಕರೆದು "ಇನ್ನು ನಮಗೆ ಇಲ್ಲಿ ಕಾರ್ಯವಿಲ್ಲ" ಎಂದು ಹೇಳಿ ಅವರೊಂದಿಗೆ ಆ ಸ್ಥಳವನ್ನು ಬಿಟ್ಟು ಹೊರಟರು. ಇಲ್ಲಿ ಅಮ್ಮಯ್ಯಪ್ಪ ಪಿಳ್ಳೆ ಅವರು ಆ ಬಡ ಭೈರಾಗಿಗೆ ವಿದ್ವತ್ ಲಕ್ಷಣವನ್ನೂ, ಚಿತ್ರ ಕವಿತೆಗಳ ರೀತಿಗಳನ್ನೂ, ಉಪಮಾನದ ಚಾತುರ್ಯಗಳನ್ನೂ, ಇವುಗಳೆಲ್ಲವೂ ತನ್ನಲ್ಲಿಯೇ ಸೇರಿಕೊಂಡಿರುವ ಸತ್ಯಾಂಶವನ್ನೂ, ಹಿಂದೊಂದು ಕಾಲದಲ್ಲಿ ಪಟ್ಟಿವೀರನ್ ಪಟ್ಟಿಗವುಂಡಮನ್ ಕೋಟಿ ಕವಿರಾಯರೊಡನೆ ದ್ವಂದ್ವ ಯುದ್ಧ ಮಾಡಿ ಕಾಗಿಯೇ ಹಂಸಪಕ್ಷಿ ಎಂದು ಸಾಧಿಸಿದುದನ್ನೂ ಇನ್ನೂ ಅನೇಕ ವಿಷಯಗಳನ್ನೂ ಕುರಿತು, ಉಪನ್ಯಾಸ ಮಾಡುತ್ತಲೇ ಅವನೊಡನೆ ಹೋದರು. ಅವನೂ ಇವರನ್ನು ತುಂಬ ಅದರಿಸಿ,

ಏಕಾಂತ ಸ್ಥಳಕ್ಕೆ ಕರೆದುಕೊಂಡು ಹೋಗಿ ಸುತ್ತ ಮುತ್ತಲೂ ನೋಡುತ್ತ ಅವರ ಮಡಲಿನಲ್ಲಿ ಕೈಹಾಕಲು ಯತ್ನಿಸಿದನು. ಪಿಳ್ಳೆಯವರು ತಾನು ಮಾಡಿದ ಉಪನ್ಯಾಸದ ಪೆಸೆಯಿಂದ ಕರಗಿ ತನ್ನನ್ನು ಪ್ರೀತಿಯಿಂದ ಆಲಿಂಗನ ಮಾಡುತ್ತಾರೆಂದು ಭಾವಿಸಿ ಮನಸ್ಸಿನಲ್ಲಿ ಸಂತೋಷಗೊಂಡು, ಹಿಂದಿಗಿಂತಲೂ ಹೆಚ್ಚು ಉತ್ಸಾಹದಿಂದ "ನಾಯಿಗೂ—ಕಳ್ಳನಿಗೂ, ನೀರಿಗೂ—ಬೆಂಕಿಗೂ, ಕೊಕ್ಕರೆಗೂ—ಕತ್ತಿಗೂ ಶ್ಲೇಷಾರ್ಥಗಳನ್ನು ಹೊಂದಿಸಿ ವಿಚಿತ್ರವಾದ ವೃತ್ತಗಳ ಮೂಲಕ ವಿಶದ ಮಾಡಲು ತೊಡಗಿದನು.

ಭೈರಾಗಿ ಅವರ ಮಡಲಿನಲ್ಲಿ ಪ್ರೀತಿಯಿಂದ ಕೈಹಾಕಿ ಅಲ್ಲಿದ್ದ ಹಣದ ಚೀಲವನ್ನು ಮೆತ್ತಗೆ ಎಳೆದನು. ಅದನ್ನು ಎಳೆದ ಕೂಡಲೆ ಪಿಳ್ಳೆಯವರಿಗೂ ಪ್ರಜ್ಞೆ ಬಂತು. "ಎಲ ಎಲಾ—ಏನು ಮಾಡುತ್ತಿದ್ದೆಯೊ ನನಗೆ" ಎಂದು ಅವರು ಗದರಿಸಲು, ಆ ಭೈರಾಗಿ "ಯಾವ ವಿಶೇಷವೂ ಇಲ್ಲ ಸ್ವಾಮೀ. ತಾವು ಇನ್ನು ಹೇಳಬೇಕು. ಬಹಳ ಚೆನ್ನಾಗಿದೆ. ನಾಯಿಗೂ ಕಳ್ಳನಿಗೂ ಹೇಳಿದ ಶ್ಲೇಷ ತುಂಬ ಸೊಗಸಾಗಿದೆ. ಇಷ್ಟು ಚೆನ್ನಾಗಿ ತಿಳಿದು ಯಾರು ಹೇಳಬಲ್ಲರು? ನಾಯಿ ತನ್ನ ಮಟ್ಟಿಗೆ ಬೊಗಳುತ್ತದೆ, ಕಳ್ಳನು ತನ್ನ ಮಟ್ಟಿಗೆ ಕದಿಯುತ್ತಾನೆ. —ತುಂಬ ಚೆನ್ನಾಗಿದೆ ಉಪಮಾನ—ಅಯ್ಯೋ! ದೈವಿಕ ಕವಿತ್ವ! ತಮಗೆ ಸರಸ್ವತಿ ನಾಲಿಗೆಯಲ್ಲಿ ನರ್ತನ ಮಾಡುತ್ತಿದ್ದಾಳೆ." ಎಂದು ಹೇಳಿ ತನ್ನ ಮಡಲಿನಲ್ಲಿ ಆ ಚೀಲವನ್ನು ಸಮರ್ಪಿಸುವಾಗ, ವಿದ್ವಾನ್ ಅಮ್ಮಯ್ಯಪ್ಪ ಪಿಳ್ಳೆಯವರು ಪೂರ್ತಿಯಾಗಿ ಎಚ್ಚರಗೊಂಡು "ಏನೋ, ವಂಚಕನೆ! ಕಳ್ಳ! ನನ್ನ ಹಣವನ್ನು ಕಸಿದುಕೊಳ್ಳಲು ಬರುತ್ತೀಯಾ?" ಎಂದು ಕೂಗಲು ಅವನು "ಇನ್ನು ತೆಗೆದುಕೊಳ್ಳುವುದಿಲ್ಲ—ನಮಸ್ಕಾರ." ಎಂದು ಹೇಳಿ ಓಡ ಹತ್ತಿದ. ಅಮ್ಮಯ್ಯಪ್ಪ ಪಿಳ್ಳೆ ಹಿಂಬಾಲಿಸಿದರು. ಸ್ವಲ್ಪ ದೂರ ಹೋದ ನಂತರ ಅವನು ಇದ್ದಕ್ಕಿದ್ದಂತೆ ತಿರುಗಿ ಇವರ ಮುಖದಲ್ಲಿ ಫಳೀರೆಂದು ಒಂದು ಬಲವಾದ ಏಟನ್ನು ಕೊಟ್ಟು ಕೆಳಗೆ ಬೀಳಿಸಿ ಒಂದೇ ಸಮನೆ ಓಡಿಹೋದನು.

ಅಮ್ಮಯ್ಯಪ್ಪ ಪಿಳ್ಳೆ ಏಳಲಾರದೆ ಎದ್ದು "ಅಯ್ಯೋ! ದೈವವೆ! ಇಂದು ಬೆಳಗಾಗುತ್ತಲೆ ಯಾರ ಮುಖವನ್ನು ಕಂಡೆನೊ? ನಮ್ಮನ್ನು ಈ ಪೋಕಿರಿ ಹುಡುಗ ಹಾಡು ಕೇಳುವ ನೆವದಿಂದ ಮೋಸಮಾಡಿ ಓಡಿಹೋದನು.

ಎಲ ಎಲಾ! ಹೀಗೂ ಪ್ರಪಂಚದಲ್ಲಿ ಉಂಟೆ? ಕಿವುಡನ ಕಿವಿಯಲ್ಲಿ ಶಂಖವನ್ನು ಬಾರಿಸಿದ ಕಥೆಯಂತೆ ಇವನ ಬಳಿ ಹೋಗಿ ನಮ್ಮ ಶ್ರೇಷ್ಠವಾದ ಹಾಡನ್ನು ಹಾಡಿದೆವಲ್ಲಾ!" ಎಂದು ಬಹಳ ದುಃಖಿಸಿದರು. ಪಾಪ! ಅವರಿಗೆ ಹಣ ಹೋದುದು ಸಹ ಲೆಕ್ಕವಿಲ್ಲ—ಅನುಭವಿಸಲಾಗದ ಮೂಢನ ಎದುರಿಗೆ ತಮ್ಮ ಹಾಡನ್ನು ಹಾಡುತ್ತಿದ್ದೇವೆ—ಎಂಬುದರಲ್ಲಿ ಬಹಳ ವ್ಯಥೆ ಆಯಿತು. "ಇನ್ನು ಅವನು ಬರಲಿ ತೋರಿಸುತ್ತೇನೆ." ಎಂದು ಹೇಳಿ ಅವರು ಹಲ್ಲು ಕಡಿದರು. ಇನ್ನುಮುಂದೆ ಇವರ ಬಳಿ ಬರಲು ಅವನಿಗೇನು ಹುಚ್ಚೇ? ಅವನು ಓಡಿಯೇ ಹೋದನು. ಇವರೂ ತಮ್ಮ ಮೈಮೇಲಿದ್ದ ಕೆಸರನ್ನು ಒರೆಸಿಕೊಂಡು ತಮ್ಮ ಕಾಲಿನಲ್ಲಿ ಆಗಿದ್ದ ಗಾಯವನ್ನು ನೋಡಿ ಕಣ್ಣೀರು ಸುರಿಸಿ, ಕೊನೆಯಲ್ಲಿ "ನಾವು ಬಿದ್ದುದೂ, ಮೋಸ ಹೋದುದೂ—ಒಳ್ಳೆಯ ವೇಳೆ. ನಮ್ಮ ಹೊರತು ಬೇರೆ ಯಾರಿಗೂ ತಿಳಿಯದು." ಎಂದು ಸಮಾಧಾನ ಮಾಡಿಕೊಂಡು—"ಏನೋ ಕೆಟ್ಟಕಾಲ." ಎಂದು ವೇದಾಂತ ಮಾತನಾಡಿ, ಮತ್ತೆ ತಿರುವತ್ತಿಯೂರನ್ನು ಹುಡುಕಿಕೊಂಡು ಹೋದರು. ಕೊನೆಗೆ ಕಂಡುಹಿಡಿದು, ಪಟ್ಟಣದ ಪಿಳ್ಳೆಯವರ ಸಮಾಧಿಗೆ ಹೋಗಿ ನೋಡಲು ಅಲ್ಲಿ ಯಾರೂ ಇರಲಿಲ್ಲ. ಸುತ್ತುಮುತ್ತಲೂ ನೋಡಿದರು. ಯಾರೂ ಇಲ್ಲ. ಏಕಾಂತವಾಗಿದ್ದ ಲಿಂಗವನ್ನು ಮಾತ್ರ ದರ್ಶನ ಮಾಡಿಕೊಂಡು "ಪಟ್ಟಪಾಡು ಸಾಕು" ಎಂದು ಬಿಸಿಲಿನಲ್ಲಿ ಅಲೆದಾಡಿ ಶ್ರಮಪಟ್ಟು ಬೆವತು ಕೈಯನ್ನು ಒಂದಾಗಿ ಮಾಡಿಕೊಂಡು ಮನೆಗೆ ಹಿಂತಿರುಗಿದರು. ಇವರು ಯಾವುದೋ ಒಳ್ಳೆಯ ಸಮಾಚಾರಗಳನ್ನು ತರುತ್ತಾರೆಂದು ಕಾದಿದ್ದ ಕಮಲಾಂಬಾಳ್ ಮೊದಲಾದವರು, ಸುಮ್ಮನೆ ಹಿಂತಿರುಗಿದ ಇವರನ್ನು ನೋಡಿ ವ್ಯಸನಗೊಂಡರು. ಮರುದಿನವೇ ಅಲ್ಲಿ ಕಾಲವಿಳಂಬ ಮಾಡುವುದರಲ್ಲಿ ಪ್ರಯೋಜನವಿಲ್ಲವೆಂದು ಕಂಡು ಆ ಸ್ಥಳವನ್ನು ಬಿಟ್ಟು ಉತ್ತರಕ್ಕೆ ಹೋಗಲು ಅವರೆಲ್ಲರೂ ಹೊರಟರು.

## ೩೨. ಆಶೆ ಎಂಬ ವ್ಯಾಧಿಗೆ ಔಷಧ ಉಂಟೆ?

ಇಲ್ಲಿ ಹೀಗಿರಲು ಪುದುಚೇರಿಯಲ್ಲಿ ಒಂದು ಸೆರೆಮನೆಯ ಮಹಡಿಯ ಮೇಲೆ ಒಬ್ಬ ಯೌವನ ಪುರುಷನು ಅಂಗವಸ್ತ್ರದಿಂದ ತನ್ನ ಮೊಳಕಾಲನ್ನು ಕಟ್ಟಿಕೊಂಡು ಏಕಾಂತದಲ್ಲಿ ಕುಳಿತ್ತಿದ್ದನು. ಸಮಯ ನಡುರಾತ್ರಿ. ಬೆಳ ದಿಂಗಳು ಚೆನ್ನಾಗಿ ಬೆಳಗುತ್ತಿತ್ತು. ಊರೆಲ್ಲ ನಿಶ್ಶಬ್ದವಾಗಿತ್ತು. ಪ್ರಪಂಚದ ಜನರು ಊಟದ ಕೆಲಸವನ್ನು ಮರೆತು ನಿದ್ದೆ ಮಾಡುವ ಕೆಲಸದಲ್ಲಿ ತೊಡ ಗಿದ್ದರು. ಪಕ್ಷಿಗಳೆಲ್ಲ ಆಡಿ, ಹಾಡಿ, ತಮ್ಮ ಗೂಡುಗಳನ್ನು ಸೇರಿಕೊಂಡಿದ್ದುವು. ಮರಗಳೂ ಕೂಡ, ಅಲುಗಾಡದೆ ಬಾಯಿಮುಚ್ಚಿ ಮೌನವಾಗಿದ್ದುವು. ಹೀಗೆ ಭೂಲೋಕವೆಲ್ಲ ನಿದ್ರಾದೇವಿಯ ಮೋಹ ಪಾಶದಲ್ಲಿ ಸಿಲುಕಿ, ಸ್ವಲ್ಪವೂ ಕೆಲ ಸವಿಲ್ಲದೆ ನಿದ್ರಿಸುತ್ತಿರುವಾಗ ಆಕಾಶದಲ್ಲಿ ನಕ್ಷತ್ರಗಳು ಮಾತಾಡದೆ ಪ್ರಕಾ ಶಿಸುತ್ತಿದ್ದುವು. ಮೇಘಗಳು ಚಲನವಿಲ್ಲದೆ ತಮ್ಮ ದಾರಿಯಲ್ಲಿ ತನಿಯಾಗಿ ಸಾಗುತ್ತಿದ್ದುವು. ಎಲ್ಲೆಲ್ಲಿಯೂ ಭಯಂಕರವಾದ ನಿಶ್ಶಬ್ದ ನೆಲಸಿತ್ತು.

ದೆವ್ವಕೂಡ ಏಕಾಂತವಾದ ಸ್ಥಳದಲ್ಲಿ ಈ ಮಧ್ಯರಾತ್ರಿಯ ವೇಳೆಯಲ್ಲಿ ಹೋಗಲು ಅಂಜುವುದು. ಶ್ರೀನಿವಾಸನು ಮಾತ್ರ ಸೊರಗಿದ ಮುಖದೊಡನೆ ಚಂದ್ರನನ್ನು ನೋಡುತ್ತ ನಿಟ್ಟುಸಿರು ಬಿಡುವುದೂ, ತನಗೇ ತಿಳಿಯದೆ ಉಕ್ಕಿ ಬರುವ ಕಣ್ಣೀರು ಹನಿಗಳನ್ನು ಬೆರಳಿನಿಂದ ಒರೆಸಿ ಹಾಕುತ್ತಿದ್ದನು. "ಯಮ ದೂತರಂತೆ ನಮ್ಮನ್ನು ವಂಚಿಸಿದ ಪೋಕರಿಗಳು ಯಾವ ಕಾರಣಕ್ಕಾಗಿ ನಮ್ಮನ್ನು ಸೆರೆಯಲ್ಲಿಟ್ಟಿದ್ದಾರೆಂದು ತಿಳಿಯದೆ ಇದೆ!" ಎಂದು ಪ್ರಲಾಪಿಸಿದನು. "ನಾವು ಯಾವುದೊ ಒಂದು ಸ್ಥಳದಲ್ಲಿ, ಅವಳು ಬೇರೆ ಎಲ್ಲಿಯೋ! ಅಯ್ಯೋ ಅವಳು ಚಿಂತಿಸಿ ಚಿಂತಿಸಿ ಕರಗಿ ಪ್ರಾಣವನ್ನು ನೀಗುವಳಲ್ಲಾ!" ಎಂದು ಬಹಳವಾಗಿ ಚಿಂತಿಸಿದನು. "ಅಯ್ಯೋ! ಅವಳನ್ನು ಮೂಳೆ ಚರ್ಮಗಳ ಸಹಿತವಾದರೂ ನಾನು ಕಾಣುವೆನೊ ಇಲ್ಲವೋ! ಹಿಂದೆ ನಾಲ್ಕು ದಿನಗಳು ಅವಳನ್ನು ಬಿಟ್ಟು ನಾನು ಕಾಂಚೀಪುರಕ್ಕೆ ಹೋಗಿ ಬರುವುದರೊಳಗೆ ಅವಳ ದೇಹ ಅರ್ಧ ಕೃಶವಾಗಿ ಹೋಗಿತ್ತೇ! ಅಯ್ಯೊ! ಈಗ ಏನು ಮಾಡುವಳೊ?" ಎಂದು ನಿಟ್ಟುಸಿರೆಳೆದನು. ಎಲ್ಲಿಯದು! ಅವಳು. ಪ್ರಾಣವನ್ನುಳಿಸಿಕೊಂಡಿ

ರುವಳೆಂದು ತೋರುವುದಿಲ್ಲ. ನನಗಾದರೊ ಅವಳನ್ನು ಅಗಲಿರುವ ಒಂದು ಕಷ್ಟ, ಅವಳಿಗೆ ತಂದೆ, ತಮ್ಮ ಸಾಲದುದಕ್ಕೆ ನಾನು, ನಮ್ಮಮೂವರನ್ನೂ ಬಿಟ್ಟು ಅಗಲಿರುವ ಕಷ್ಟ! ಆ ಕಷ್ಟದ ಜೊತೆಗೆ ಅವಳು ಪ್ರಾಣವನ್ನು ಇಟ್ಟು ಕೊಂಡಿರುವಳೆ!" ಎಂದು ಕಣ್ಣೀರು ಸುರಿಸಿದನು. "ನಾನು ಈ ವಿಧವಾಗಿ ಹೋದೆ, ಬಂದೆ, ಈ ಜಾಗದಲ್ಲಿದ್ದೇನೆ" ಎಂದು ಸಹ ಅವಳಿಗೆ ಹೇಳುವವರಿಲ್ಲ ವಲ್ಲಾ! ಅವಳಾದರೂ ಎಲ್ಲಿದ್ದಾಳೆಯೋ, ಚಿದಂಬರಕ್ಕೆ ಹೋದಳೋ, ಅಥವಾ ಮತ್ತೆ ಶಿರುಕುಳಕ್ಕೇ ಹೋದಳೋ, ತಂದೆಯನ್ನಾದರೂ ನೋಡಿದಳೋ, ಅದೂ ಇಲ್ಲವೋ—ಯಾವ ಕಾಡೋ, ಮರವೊ, ಯಾರ ಕೈಯಲ್ಲಿ ಎಲ್ಲಿ ಪೇಚಾ ಡುತ್ತಿದ್ದಾಳೊ?" ಎಂದು ಕೊರಗಿದನು.

"ಇದೇ ತರುಣದಲ್ಲಿ, ಇದೇ ಸ್ಥಿತಿಯಲ್ಲಿ, ಅವಳು ನನ್ನನ್ನು ನೆನೆಸಿ ಕೊಂಡು ಪ್ರಲಾಪಿಸುತ್ತಿದ್ದರೂ ಇರಬಹುದು. ಹಾಗೆ ಇದ್ದರೆ ಮಾತ್ರ ಏನು? ಈ ಚಂದ್ರ ನಮಗಾಗಿ ಸಾಕ್ಷಿ ಹೇಳುತ್ತಾನೆಯೆ? ಹಂಸವನ್ನು ದೂತನನ್ನಾಗಿ ಕಳುಹಿಸಿದುದು, ಮೇಘವನ್ನೂ ದೂತನನ್ನಾಗಿ ಕಳುಹಿಸಿದುದು, ನನ್ನ ಪಾಲಿಗೆ ನಿಲುಕದ ಕಥೆಯಾಗಿದೆ!" ಎಂದು ಕಣ್ಣೀರು ಬಿಟ್ಟನು. "ಅಯ್ಯೋ! ನಾವು ಒಟ್ಟಿಗಿದ್ದ ಕಾಲದಲ್ಲಿ ಈ ರೀತಿ ಬೆಳದಿಂಗಳಿದ್ದರೆ ಹೇಗೆ ಹಿಗ್ಗುತ್ತಿದ್ದಳು? ಅಂದು ಸಮುದ್ರದ ದಡದಲ್ಲಿ ಚಂದ್ರನ ಕಾಂತಿಯನ್ನು ಕುರಿತು ಹಾಡಿದ ಳಲ್ಲಾ! ಈಗ ಅದೇ ಚಂದ್ರ ವಿರಹತಾಪವನ್ನು ಹೇಗೆ ಹೆಚ್ಚು ಮಾಡುತ್ತಾನೆ ಎಂದು ಹಾಡುವಳೊ?" ಎಂದು ತಾನು ಪ್ರಲಾಪಿಸಿದನು. ಈ ಮೇಘಗಳು ಒಂದರೊಂದಿಗೊಂದು ಭೇದವಿಲ್ಲದೆ ಕಲೆತಿರುವಂತೆ ನಮ್ಮಿಬ್ಬರ ಮನಸ್ಸೂ ಕಲೆತಿದೆ ಎಂದು ಸಂತೋಷಗೊಂಡಳಲ್ಲಾ! ಅದಕ್ಕೆ ಶಿಕ್ಷೆಯೆ ಇದು. ದೈವವೆ?" ಎಂದು ಗೋಳಾಡಿದನು. "ಈ ಆಕಾಶದಂತೆ ಭಗವಂತನು ಅನಂತನಾಗಿ ರಲು ನಮಗೇನು ಕಡಮೆ?" ಎಂದು ಗರ್ವಿಸಿದವಳಿಗೆ ಇದೇ ಆಗಬೇಕಾಗಿತ್ತು" ಎಂದು ತಲೆಯನ್ನಾಡಿಸಿದನು. ನಾವಿಬ್ಬರೂ ಚಂದ್ರನೂ, ರೋಹಿಣಿಯೂ ಇರುವಂತೆ ಒಂದು ದಿನವೂ ಅಗಲಲಾರೆವು. ಸಾಯುವಾಗಾಲು ಸಹ ಇಬ್ಬರೂ ಸೇರಿ ಒಂದೇ ದಿನವೇ ಸಾಯುವೆವು. ಸತ್ತ ಮೇಲೆ ಧ್ರುವ, ಅರುಂಧತಿ, ರೋಹಿಣಿ, ಇವರುಗಳು ಇದ್ದ ಹಾಗೆ ನಾವೂ ಜೊತೆಯಲ್ಲಿ ಪಕ್ಕ ಪಕ್ಕದಲ್ಲಿ ಎರಡು

ನಕ್ಷತ್ರಗಳಾಗಿ, ಶುಕ್ರನಂತೆ ಆಕಾಶದಲ್ಲಿ ಪ್ರಕಾಶಮಾನವಾಗಿ ಮಿನುಗುತ್ತ, ವಿನೋದವಾಗಿ ಇರುವೆನೆಂದು ಬೊಗಳಿದೆಯಲ್ಲೋ—ಹುಚ್ಚೋ, ಇಷ್ಟು ಗರ್ವ ತಾಳಬಹುದೇ ಎಂದು ಭಗವಂತ ಖಂಡಿಸುತ್ತಿದ್ದಾನೆ, ನೋಡಿದೆಯಾ? ಖಂಡಿಸಲಿ" ಎಂದು ನಿಟ್ಟುಸಿರು ಬಿಟ್ಟನು.

ಅನಂತರ ಕುಳಿತುಕೊಳ್ಳಲು ಇಷ್ಟವಿಲ್ಲದೆ ಎದ್ದು, "ಈ ಬೆಳದಿಂಗಳು ಮತ್ತು ತಂಗಾಳಿಯಂತೆ ಇದೆ, ನಮ್ಮ ಪ್ರೇಮ." ಎಂದು ಉಪಮಾನಗಳನ್ನು ತೆಗೆದೆಯಲ್ಲೋ; ಅಯ್ಯೋ ನಾವು ಅನುಭವಿಸಿದುದೂ, ಆಟವಾಡಿದುದೂ, ಆನಂದಿಸಿದುದೂ—ಎಲ್ಲಾ ಕನಸಾಗಿ ಹೋಗಿಬಿಡಲಾರದಲ್ಲವೆ?" ಎಂದು ಹೇಳಿ, ಅಲ್ಲಿಗೂ ಇಲ್ಲಿಗೂ ಓಡಾಡಿದನು. ಆಮೇಲೆ ತನ್ನ ಮೇಲೆ ಕಾವಲಿರುವ ಆಳುಗಳ ಧ್ವನಿ ಕಿವಿಗೆ ಬೀಳಲು, "ಪೋಕರಿ, ಸರಕಾರ!— ಇದೂ ಒಂದು ಸರಕಾರವೆ? ಕೆಲಸಕ್ಕೆ ಬಾರದ ಸರಕಾರ! — ಅಯೋಗ್ಯ ಜನರು, ಅನ್ಯಾಯದ ರಾಜ್ಯ, ತೊಲಗುವ ಕಾಲ ಬಂದಿದೆ! — ಈ ಸರಕಾರಕ್ಕೆ ತೋರಿಸುತ್ತೇನೆ ದಾರಿ! ಕೇಳುವವರು ಹೇಳುವವರಿಲ್ಲವೆ? ವಿಚಾರಣೆ, ಸುಡುಗಾಡು—ಎಂದು ಏನೂ ಇಲ್ಲವೆ? ನಾನು ಬರೆದ ಅರ್ಜಿಗೆ ಕೂಡ ಉತ್ತರವಿಲ್ಲ! ಎಲಾ, ಇಂತಹ ಅಪರಾಧಕ್ಕಾಗಿ ನೀನು ಸೆರೆಮನೆಗೆ ಸೇರಿಸಲ್ಪಟ್ಟೆ—ಎಂದು ಹೇಳಿ ಬಿಡಬೇಡವೆ? ಈಗ ಒಂದೂ ಹೇಳಬಾರದು. ಇವರು ಕೈಬಿಟ್ಟು ಹೊರಗೆ ಹೋದಮೇಲೆ ಮಾಡುತ್ತೇನೆ ಇವರಿಗೆ. ಸುಬ್ಬರಾಯನಿಗೆ ಬರೆದ ಪತ್ರ ನಾಳೆ ಹೋಗಿ ಸೇರುವುದು. ಅವನು ನಾಳೆಯೋ ಉತ್ತರ ಬರೆದರೆ ಎರಡು ಮೂರು ದಿನಗಳಲ್ಲಿಯಾದರೂ ಬರಲಾರದೆ ಉತ್ತರ? ಒಂದು ವೇಳೆ ಅವನೇ ಬಂದರೂ ಬರಬಹುದು. ಅಯ್ಯೋ! ನನ್ನ ಅತ್ತೆ ಒಬ್ಬ ಮಹಾಲಕ್ಷ್ಮಿ. ಅವಳಿಗೆ ಬಂದ ಕಷ್ಟಗಳನ್ನು ನೋಡು! ನನ್ನ ಮಾವನವರು — ಅವರ ದೊಡ್ಡ ಗುಣವೂ, ವಿಶಾಲ ಬುದ್ಧಿಯೂ, ಅವರ ಪರಸ್ಪರ ಪ್ರೀತಿಯೂ, ಅಯ್ಯೋ! ಅವರಿಗೂ ಇಂತಹುದು ಆಗಬಹುದೆ? ಅಪ್ಪಪ್ಪಾ! ಈ ಪ್ರಪಂಚ ಬಹಳ ಕೆಟ್ಟ ಪ್ರಪಂಚವಪ್ಪ!" ಎಂದು ಬೇಸರಗೊಂಡನು.

ಅನಂತರ ಚಂದ್ರ, ರೋಹಿಣಿ ಉಳಿದ ಲೆಕ್ಕವಿಲ್ಲದ ನಕ್ಷತ್ರ ಕೂಟಗಳಿಂದ ಆವರಿಸಲ್ಪಟ್ಟು ಆಕಾಶದಲ್ಲಿ ಶೃಂಗಾರವಾಗಿ ಗಂಭೀರವಾದ ಸೌಂದರ್ಯ

ದಿಂದ ಕೂಡಿ ಮೆತ್ತಗೆ ಮೆರವಣಿಗೆ ಮಾಡುತ್ತಿದ್ದುದನ್ನು ಸ್ವಲ್ಪ ಹೊತ್ತು ಗಮನವಿಟ್ಟು ನೋಡಿ, "ಅಯ್ಯೋ ಲಕ್ಷ್ಮೀ! ನಿನ್ನನ್ನು ಬಿಟ್ಟು ನಾನು ಅಗಲಿರಲು ಸಾಧ್ಯವೆ? ಅಮೆರಿಕಾ ದೇಶದವರಿಗೆ ಪತ್ರ ಬರೆಯಬೇಕೆಂದು ಹೇಳಿದೆಯಲ್ಲ! ಆ ಪತ್ರ "ಮ. ರಾ. ರಾ. ಶ್ರೀ *ಅಮೆರಿಕಾ ದೇಶದ ಮಹಾಜನರಿಗೆ ಅನೇಕ ಆಶೀರ್ವಾದ. ಕ್ಷೇಮ. ಕ್ಷೇಮಕ್ಕೆ ನೀವು ಬರೆಯಬೇಕೆಂದು ಕೋರುತ್ತೇವೆ. ನಮ್ಮ ದೇಶದ ಚಕ್ರವರ್ತಿಯಾದ ಚಂದ್ರಮಹಾರಾಜನೂ, ಪಟ್ಟ ಮಹಿಷಿಯಾದ ರೋಹಿಣಿ ಮಹಾರಾಣಿಯೂ ನಿಮ್ಮ ದೇಶಕ್ಕೆ ಮೆರವಣಿಗೆ ಯಲ್ಲಿ ಬಂದಿರುವರು. ಇಲ್ಲಿ ನಾವು ಬಡಜನರು. ಅವರ ದರ್ಶನವಿಲ್ಲದೆ ತಪಿಸುವುದರಿಂದ ಅವರು ಇಲ್ಲಿಗೆ ಬಿಜಯ ಮಾಡುವಂತೆ ನಾವು ಬೇಡುವು ವೆಂದು ನಮ್ಮ ಪ್ರಾರ್ಥನೆಯನ್ನು ಅವರಿಗೆ ತಿಳಿಸಬೇಕೆಂದು ಕೋರುತ್ತೇನೆ.

ಇಂತು, ಈ ದೇಶದ ಪ್ರಜೆಗಳ ಪರವಾಗಿ,

ಶ್ರೀನಿವಾಸನೂ—ಲಕ್ಷ್ಮಿಯೂ.

—ಎಂದು ಹೀಗೆಲ್ಲ ಆಟವಾಡಿದೆಯಲ್ಲಾ!" ಎಂದು ಹೇಳಿ, ಅವಳ ಸೌಂದರ್ಯವನ್ನೂ, ಅವಳ ಧ್ವನಿಯನ್ನೂ, ಅವಳ ಗಾನವನ್ನೂ, ವಿದ್ಯೆ ಯನ್ನೂ, ಬುದ್ಧಿವಿಸ್ತಾರವನ್ನೂ, ಅವಳೊಡನೆ ತಾನು ಆಡಿದ ಆಟಗಳನ್ನೂ ನೆನೆನೆನೆದು, ಬಾಯಿ, ಗಂಟಲು ಸವೆದು, ತನ್ನನ್ನೂ, ತನಗೆ ಹಲವು ಬಾರಿ ರೂಪುಗೊಂಡಂತೆ ತೋರಿದ ತನ್ನ ಹೆಂಡತಿಯನ್ನೂ, ಮೇಲೆ ಬೆಳಗುತ್ತಿದ್ದ ಚಂದ್ರನನ್ನೂ, ತನ್ನನ್ನು ಕಾಯುತ್ತಿದ್ದ ಆಳುಗಳನ್ನೂ ಒಂದೊಂದನ್ನಾಗಿ ದೃಷ್ಟಿಸಿ ನೋಡಿ, ರಾತ್ರಿಯೆಲ್ಲ ಬಾಡುತ್ತಿದ್ದ ಚಂದ್ರನ ಜೊತೆಗೆ ತಾನೂ ಬಾಡುತ್ತ ಸೊರಗಿದನು.

ಬೆಳಗಾಗುತ್ತಲೆ ಸ್ವಲ್ಪ ಹೊತ್ತಿಗೆಲ್ಲ ಇಬ್ಬರು ಕಾವಲುಗಾರರು ಕೈಯಲ್ಲಿ ಬಿಚ್ಚುಕತ್ತಿಯನ್ನು ಹಿಡಿದವರಾಗಿ ಶ್ರೀನಿವಾಸನನ್ನು ಕೋರ್ಟಿಗೆ ವಿಚಾರಣೆ ಗಾಗಿ ಕರೆದೊಯ್ದರು. ಅಪರಾಧ ದೊಡ್ಡದಾಗಿದ್ದುದರಿಂದಲೂ, ವಿಚಾರಣೆ ಮಹತ್ವದ್ದಾಗಿದ್ದುದರಿಂದಲೂ ಐವರು ನ್ಯಾಯಾಧೀಶರು ಕುಳಿತು ವಿಚಾರಣೆ

---

* ಚಂದ್ರನು ಇಲ್ಲಿಗೆ ಮರೆಯಾದಾಗ ಅಮೆರಿಕಾ ದೇಶದಲ್ಲಿ ಪ್ರಕಾಶಿಸುವು ದೆಂದು ಎಲ್ಲರಿಗೂ ತಿಳಿದ ವಿಷಯ.

ಯನ್ನು ನಡೆಸಿದರು. ಈ ತಮಾಷೆಯನ್ನು ನೋಡಲು ಊರಿನವರೆಲ್ಲ ಕೋರ್ಟಿಗೆ ಬಂದು ಸೇರಿದ್ದರು. ಖೈದಿ ಅಪರಾಧಿಯ ಸ್ಥಳದಲ್ಲಿ ನಿಲ್ಲಿಸಲ್ಪಟ್ಟನು. ಎರಡು ಕಡೆಗಳಲ್ಲಿಯೂ ಇಬ್ಬರು ಸಿಪಾಯಿಗಳು ಬಿಚ್ಚು ಕತ್ತಿಯನ್ನು ಧರಿಸಿ ನಿಂತಿದ್ದರು. ಸರಕಾರದ ಪರ ವಕೀಲರಾದ ದೊಡ್ಡ ದೊರೆ ಅವರು ಕಾಲಿನ ವರೆಗೂ ನಿಲುವಂಗಿಯನ್ನು ಧರಿಸಿಕೊಂಡು ಗಂಭೀರವಾಗಿ ಎದ್ದು ಮೂಗಿನ ಮೇಲೆ ಕನ್ನಡಕವನ್ನು ಹಾಕಿಕೊಂಡು, ಪಿರ್ಯಾದವನ್ನು ಓದಲು ತೊಡಗಿದರು. ಅದರ ವಿವರವೇನೆಂದರೆ, ಪುದುಚೇರಿ ರಾಜ್ಯದ ಪ್ರಥಮ ಮಂತ್ರಿ ದಿವಾನ್ ಶಂಕರ ಅಯ್ಯರ್ ಎಂದು ಒಬ್ಬರಿದ್ದರು. ಅವರು ಸರಕಾರದ ದ್ರವ್ಯಗಳು ಕೆಲವನ್ನು ಅಪಹರಿಸಿ ಮದರಾಸಿನಲ್ಲಿ ತನ್ನ ಮಗನಿಗೆ ಕಳುಹಿಸಿದರು. ಅಪರಾಧ ಹೊರಬೀಳುವ ತರುಣದಲ್ಲಿ ಕುಟುಂಬ ಸಮೇತರಾಗಿ ರಾಜ್ಯವನ್ನು ಬಿಟ್ಟು ಹೊರಟು ಬಿಟ್ಟರು. ಶ್ರೀನಿವಾಸನ್ ರೂಪದಲ್ಲಿಯೂ, ಬಣ್ಣದಲ್ಲಿಯೂ, ಶಂಕರ ಅಯ್ಯರ್ ಮಗನಂತೆಯೇ ಇದ್ದನು. ಆದುದರಿಂದ ಅವನನ್ನು ಶಂಕರ ಅಯ್ಯರ್ ಮಗನೆಂದೇ ಸೆರೆಯಲ್ಲಿಟ್ಟು ವಿಚಾರಣೆಗೆ ಗುರಿಪಡಿಸಿದರು. ಶ್ರೀನಿವಾಸನ್ ದೇವರ ಮೇಲೆ ಭಾರ ಹಾಕಿ ನಿರಪರಾಧಿಯಾದುದರಂದ ಸ್ವಲ್ಪವೂ ಕಳಂಕವಿಲ್ಲದೆ ಸಿಂಹದ ಮರಿಯಂತೆ ನಿಂತು ಗಂಭೀರವಾಗಿ ಕೇಳಿದ ಪ್ರಶ್ನೆಗಳಿಗೆ ಉತ್ತರ ಹೇಳಿದನು.

ವಕೀಲ್ ದೊರೆ:– "ನಿನ್ನ ಹೆಸರೇನು?"

ಶ್ರೀನಿವಾಸನ್:– "ಶ್ರೀನಿವಾಸನ್"

ವಕೀಲ್:– "ನಿಜವಾದ ಹೆಸರು?"

ಶ್ರೀನಿವಾಸನ್:– "ಶ್ರೀನಿವಾಸನ್"

ವಕೀಲ್:– "ಮುಚ್ಚಿಡದೆ ಹೇಳು"

ಶ್ರೀನಿವಾಸನ್:– "ಶ್ರೀನಿವಾಸನ್"

ವಕೀಲ್:– "ವೆಂಕಟರಾಮನೆಂದು ನಿನಗೊಂದು ಹೆಸರುಂಟೆ?"

ಶ್ರೀನಿವಾಸನ್:–"ಹಾಗೆ ಇದುವರಿಗೂ ನನಗೆ ಯಾರೂ ಹೆಸರಿಡಲಿಲ್ಲ."

ವಕೀಲ್:– "ನಿನ್ನ ತಂದೆಯ ಹೆಸರು?"

ಶ್ರೀನಿವಾಸನ್:– "ನಾರಾಯಣ ಅಯ್ಯರ್"

ವಕೀಲ್:- “ಅವರ ಉದ್ಯೋಗ?”

ಶ್ರೀನಿವಾಸನ್:- “ತಹಸೀಲ್‌ದಾರರು.”

ವಕೀಲ್:- “ನೀನು ದಿವಾನ್ ಶಂಕರಯ್ಯರ ಮಗನಲ್ಲವೆ?”

ಶ್ರೀನಿವಾಸನ್:- “ಅಷ್ಟು ದೊಡ್ಡ ಭಾಗ್ಯವನ್ನು ನಾನು ಪಡೆದವನಲ್ಲ.”

ವಕೀಲ್:- “ನೀನು ಅವರ ಮಗನಂತೆಯೇ ಕಾಣುತ್ತೀಯಲ್ಲಾ!”

ಶ್ರೀನಿವಾಸನ್:- “ಅದೂ ನನ್ನ ತಪ್ಪೆ?”

ವಕೀಲ್:- “ನೀನು ಒಳ್ಳೆಯ ಬಾಲಕ. ತುಂಬ ಲಕ್ಷಣವಾಗಿದ್ದೀಯ.”

ಶ್ರೀನಿವಾಸನ್:- “ಅದು ನನ್ನ ತಪ್ಪಲ್ಲವಲ್ಲಾ!”

ವಕೀಲ್:- “ನಾನು ಹೇಳುವುದನ್ನು ಕೇಳು. ಇಂತಹ ವಯಸ್ಸನ್ನೂ ಲಕ್ಷಣವನ್ನೂ ವ್ಯರ್ಥಮಾಡಬೇಡ!”

ಶ್ರೀನಿವಾಸನ್:- “ವ್ಯರ್ಥ ಮಾಡುವುದಿಲ್ಲ. ನನಗೆ ಅನುಗುಣವಾದ ಮದುವೆ ಆಗಿದೆ.”

ವಕೀಲ್:- “ನಾನು ಹೇಳುವುದನ್ನು ಕೇಳು. ನೀನು ಶಂಕರಯ್ಯರ ಮಗನಂತೆಯೇ ಕಾಣುತ್ತೀಯ ಅಪರಾಧವನ್ನು ಒಪ್ಪಿಕೊ.”

ಶ್ರೀನಿವಾಸನ್:- “ಶಂಕರಯ್ಯರ ಮಗನನ್ನು ಹೋಲುವ ಅಪರಾಧವನ್ನು ನಾನು ಪ್ರಯತ್ನ ಪೂರ್ವಕವಾಗಿ ಮಾಡಿದವನಲ್ಲ.”

ವಕೀಲ್: “ನೀನು ನಿಜವನ್ನು ಒಪ್ಪಿಕೊ.”

ಶ್ರೀನಿವಾಸನ್: “ತಮ್ಮ ಆತುರದ ಸಲುವಾಗಿ ಸುಳ್ಳು ಹೇಳುವುದು ನನಗೆ ಸಮ್ಮತವಿಲ್ಲ.”

ವಕೀಲ್:- ದೊರೆಯುವರ ಪ್ರಶ್ನೆಗಳಿಗೆ ತೃಪ್ತಿಯಾದ ಉತ್ತರ ಅವರಿಗೆ ಸಿಗಲಿಲ್ಲವಾದುದರಿಂದ ಸಾಕ್ಷಿಗಳನ್ನು ಕರೆದು ಈ ಮನುಷ್ಯ ಶಂಕರಯ್ಯರವರ ಮಗನೇ ಅಲ್ಲವೇ ಎಂದು ವಿಚಾರಿಸಿದರು. ಶ್ರೀನಿವಾಸನನ್ನು ಸೆರೆಹಿಡಿದು ಬಂದವರು ಹೌದೆಂದು, ಉಳಿದವರು ಅಲ್ಲವೆಂದೂ ಮತ್ತೆ ಕೆಲವರು ಸಂದೇಹವಾಗಿದೆಯೆಂದೂ ಶರೀರದ ಆಕೃತಿಯನ್ನು ನೋಡಿ ಅಭಿಪ್ರಾಯವನ್ನು

ಕೊಟ್ಟರು. ಅನಂತರ ಶ್ರೀನಿವಾಸನ್ ತನ್ನ ಪರ ಸಾಕ್ಷಿಗಳಾಗಿ ತನ್ನ ಡಯರಿ (ದಿನಚರಿ) ಪುಸ್ತಕ, ತನ್ನ ಕೈಯಲ್ಲಿದ್ದ ಕೆಲವು ಪತ್ರಗಳು ಇವುಗಳನ್ನು ಹಾಜರು ಮಾಡಿದನು. ನ್ಯಾಯಾಧಿಪತಿಗಳು ಅವುಗಳ ಪರಿಶೋಧನೆ ಮಾಡಿ ಶ್ರೀನಿವಾಸನ್ ನಿರಪರಾಧಿಯೆಂದು ತೀರ್ಪು ಕೊಟ್ಟರು. ಶ್ರೀನಿವಾಸನ್ ತನ್ನ ತಾಯಿ, ತಂದೆಯವರಿಗೇ ಹುಟ್ಟಿದವನೆಂಬ ಸುದ್ದಿಯನ್ನು ಕೋರ್ಟಿನ ಮುಂದೆ ಋಜು ಮಾಡಿದವನು—ನಾನೊಬ್ಬನೆ ಪ್ರಪಂಚದಲ್ಲಿ—ಅದನ್ನು ತಾವು ಒಪ್ಪಿದುದಕ್ಕಾಗಿ ಕೃತಜ್ಞತೆಯನ್ನು ಸಲ್ಲಿಸುತ್ತೇನೆ." ಎಂದು ಹೇಳಲು ಕೋರ್ಟಿನವರು ಅವನ ಮನೋಧೈರ್ಯವನ್ನೂ ದೊಡ್ಡ ಗುಣವನ್ನೂ ಮೆಚ್ಚಿ, "ಇದುವರೆಗೂ ಸೆರೆಮನೆಯಲ್ಲಿಟ್ಟುದ್ದಕ್ಕಾಗಿಯೂ, ಮಾನ ನಷ್ಟಕ್ಕಾಗಿಯೂ ಹತ್ತು ಸಾವಿರ ರೂಪಾಯಿ ಸರಕಾರದಿಂದ ಕೊಡಬೇಕೆಂದು ಆಜ್ಞೆ ಮಾಡಿದರು.

## ೩೩. ಕಮಲಾಂಬಾಳ್ ಕಂಡ ವಿಚಿತ್ರ ಕನಸು

ಅಮ್ಮಯ್ಯಪ್ಪ ಪಿಳ್ಳೆ ಮೊದಲಾದವರು ತಿರುವತ್ತಿಯೂರನ್ನು ಬಿಟ್ಟು ಕಾಶಿಯನ್ನುದ್ದೇಶಿಸಿ ಹೊರಟರು. ಕಮಲಾಂಬಾಳ್ ತಾನು ಹಿಂದೆ ಇದ್ದ ಸ್ಥಿತಿಯನ್ನೂ, ತನ್ನ ಪತಿ ನಿರಪರಾಧಿಯಾದ ತನ್ನನ್ನು ಬಿಟ್ಟು ಅಗಲಿದುದನ್ನು ನೆನೆದು ಈ ರೀತಿ ದುಃಖಿಸಿದಳು: "ಈ ಪ್ರಪಂಚದಲ್ಲಿ ದೇವರೊಬ್ಬನನ್ನು ನಂಬಬಹುದೇ ಹೊರತು ಮನುಷ್ಯರಲ್ಲಿ ಯಾರನ್ನೂ ನಂಬಬಾರದು. ಎಷ್ಟು ಉತ್ತಮವಾದ ಮನುಷ್ಯರಾದರೇನು? ಅವನೂ ದೇವರ ಆಜ್ಞೆಗೆ ಒಳಪಟ್ಟವನೆ ಅಲ್ಲವೆ? ದೇವರ ಕೃಪೆ ಇದ್ದರೆ ನಮಗೆ ಒಂದು ಕೊರತೆಯೂ ಇರಲಾರದು. ಏನೋ — ನಾವು ಮಾಡಿದ ಪಾಪವನ್ನನುಭವಿಸುತ್ತೇವೆ. ಭಗವಂತನ ಸಂಕಲ್ಪ ಹಾಗೆ ಇರುವುದಾದರೆ ಅದಕ್ಕೆ ನಾವು ಮಾಡತಕ್ಕುದುದ್ದೇನು? ಪತಿಯನ್ನು ಕುರಿತು ಧ್ಯಾನಿಸಿದರಾದರೂ ಉಪಯೋಗ ಉಂಟೆ. ಇತರ ಸ್ತ್ರೀಯರು ಅನುಭವಿಸಿದ ಸುಖವನ್ನು ನಾವು ಅನುಭವಿಸಿದೆವಲ್ಲಾ— ಅದು ಸಾಲದೆ? ಆಸೆಗೆ ಮಿತಿ ಇಲ್ಲವೆಂಬುದು ನಿಜವಾದ ಮಾತು. ಅಲ್ಲದೆ ಈ ಕಷ್ಟವೇ ದೇವರನ್ನು ನೆನೆಯುವಂತೆ ಮಾಡುವುದರಿಂದ ನಮಗೆ ಒಂದು

ದೊಡ್ಡ ಅನುಕೂಲವಾಗಿದೆ. ಮನುಷ್ಯನು ಅನುಭವಿಸುವ ಸುಖವೆಲ್ಲ ಅವನಿಗೆ ಹಿತ ಶತ್ರುವಾಗಿಯೂ, ದುಃಖವೆಲ್ಲ ನಿಜವಾದ ನಲ್ಮೆಯಾಗಿಯೂ ಇರುವುದು. ಅದೃಷ್ಟ ಒದಗಿದರೆ ಮನುಷ್ಯನಿಗೆ ಇರುವ ಕಣ್ಣು, ಕಿವಿ ಎಲ್ಲವೂ ಮುಚ್ಚಿ ಹೋಗುವುದು. 'ನಾನು ನಾನು' ಎಂದು—"ಸರ್ವಂ ಅಹಂ ಮಯಂ ಜಗತ್" ಎನ್ನುವ ಹಾಗೆ ಪ್ರಪಂಚವೆಲ್ಲ ನಾನೇ ತುಂಬಿರಲು, ದೊಡ್ಡವರು, ಸಣ್ಣವರು, ದೇವರು—ಯಾರೂ ಇಲ್ಲದೆ ಹೋಗುವುದು. ಕಷ್ಟ ಬಂದರಾದರೂ ಎಷ್ಟು ನೀಚನಾದ ಮನುಷ್ಯನಾದರೂ ದೇವರನ್ನು ಕುರಿತು ಒಂದು ಕ್ಷಣವಾದರೂ ನೆನೆಯುತ್ತಾನೆ. "ಮರಣ ಕಾಲದಲ್ಲಿ ನನ್ನನ್ನು ಧ್ಯಾನಿಸಿದವನಿಗೆ ನಾನು ಮೋಕ್ಷವನ್ನು ಕೊಡುತ್ತೇನೆ." ಎಂದು ಮಾತು ಕೊಟ್ಟಿರುವ ದೀನವತ್ಸಲನಾದ ಭಗವಂತನು ಕಷ್ಟ ಬಂದಾಗ ಅವನನ್ನು ನೆನೆದವರಿಗೆ ನೆರವಾಗಲಾರನೆ? ಭಗವಂತಾ! ನಿನ್ನ ಇಷ್ಟದಂತೆ ನಡೆಯಿಸು! ನಾನು ಸ್ವಲ್ಪವೂ ಗೋಣಗುವುದಿಲ್ಲ. ನಿನ್ನ ಹೊರತು ಈ ಪ್ರಪಂಚದಲ್ಲಿ ಒಂದು ನೆರವನ್ನೂ ಕಾಣೆ. ಸುಖವಾದರೂ, ದುಃಖವಾದರೂ ಕೊಡುವವನು ನೀನೇ ಎಂಬುದನ್ನು ನೆನೆದರೆ ನನಗೆ ಆನಂದವಾಗಿದೆ!" ಎಂದು ಈ ಬಗೆಯಲ್ಲಿ ತನ್ನ ಮನಸ್ಸಿನಲ್ಲಿ ನೆನೆನೆನೆದು ಪತಿಯನ್ನು ಕುರಿತು ಚಿಂತಿಸುವುದನ್ನು ಬಿಟ್ಟು ಪತಿಭಕ್ತಿಯನ್ನೂ ಪ್ರೇಮವನ್ನೂ ಕ್ರಮವಾಗಿ ಭಗವಂತನ ವಿಷಯದಲ್ಲಿ ತಾಳಲು ಉಪಕ್ರಮಿಸಿದಳು. 'ರಾಮ್, ರಾಮ್' ಎಂದು ರಾಮನಾಮ ಸ್ಮರಣೆ ಮಾಡಲು ತೊಡಗಿದಳು.

"ಸಾಕ್ಷಾತ್ ಶ್ರೀರಾಮನೆ ಸೀತೆಯನ್ನು ಬಿಟ್ಟು ಅಗಲಿ ಮರುಗಿದನಲ್ಲಾ! ಅವನು ತೋರಿಸಿದ ಮಾಯಾ ಪಾಶಕ್ಕೆ ಸಿಕ್ಕಿಬಿದ್ದು ಹುಳುವಿಗಿಂತಲೂ ಕೀಳಾದ ನಾನು ಗಂಡನನ್ನು ಬಿಟ್ಟು ಮರುಗುವುದು ಒಂದು ವಿಚಿತ್ರವೆ?" ಎಂದು ಒಂದು ಸಮಯದಲ್ಲಿ ನಗುವಳು. "ಗಂಡನೇನು—ಹೆಂಡತಿ ಏನು—ಮಗನೇನು—ಮಗಳೇನು—ನೀನೊಬ್ಬನಿರಲು, ನಿನಗಿಂತಲೂ ದೊಡ್ಡವರಾಗಿ ಯಾರನ್ನಾದರು ಗೌರವಿಸಲು ಸಾಧ್ಯವೆ? ನೀನು ತುಂಬಿದ ಪ್ರಪಂಚದಲ್ಲಿ ಏನೂ ಇಲ್ಲವೆಂದು ಕೊರತೆಯನ್ನು ಭಾವಿಸುವುದೇ ನಮ್ಮ ಪಾಪವಲ್ಲವೆ?" ಎಂದು ಎಣಿಸುವಳು ಕೆಲವು ಸಮಯಗಳಲ್ಲಿ. "ನೀನಿರುವುದು

ನಿಜ. ನಾನಿರುವುದು ಸುಳ್ಳು ನಿನ್ನ ಇಚ್ಛೆ ಗೆಲ್ಲುವುದೊ ನನ್ನ ಇಚ್ಛೆ ಗೆಲ್ಲು ವುದೊ? ನಿನ್ನ ದಿವ್ಯ ಚಿತ್ತದಂತೆಯೇ ನಡೆಯಿಸು. ನನ್ನ ವಿಷಯದಲ್ಲಿ ಇಂತ ಹುದನ್ನು ಕೇಳಬೇಕೆಂದೂ ನಾನು ಅರಿಯೆ, ನನಗೆ ಯಾವುದು ಒಳ್ಳೆಯ ದೆಂದು ನಿನ್ನ ದಿವ್ಯಚಿತ್ತಕ್ಕೆ ತೋರುವುದೊ ಅದು ನನಗೆ ಸಿದ್ಧಿಸಲಿ" ಎಂದು ಕೋರುವಳು ಕೆಲವು ಸಮಯಗಳಲ್ಲಿ. "ಅಯ್ಯೋ ! ನನ್ನ ಗಂಡನನ್ನು ಮತ್ತೊಂದು ಸಲ ನಾನು ಕಾಣಲಾಪೆನೊ! ನಿನ್ನ ಕೃಪೆ ಹಾಗಿಲ್ಲದೆ ಇರು ವುದೊ!" ಎಂದು ಪ್ರಲಾಪಿಸುವಳು.

ಹೀಗೆ ಹಲವಾರು ಚಿಂತೆಯಲ್ಲಿ ಅಳಿಯುವ ದಿನಗಳಲ್ಲಿ ಒಂದು ದಿನ ರಾತ್ರಿ ಕೊನೆಯ ಝಾಮದ ವೇಳೆಗೆ ತಟಕ್ಕನೆ ಕಮಲಾಂಬಾಳ್‌ಗೆ ಬಹು ವಿಚಿತ್ರ ವಾದ ಕನಸೊಂದು ಆಯಿತು. ಬೆಟ್ಟಗಳು, ನದಿಗಳು, ಆನೆಗಳು, ಹುಲಿಗಳು, ಋಷಿಗಳು, ಮುನಿಗಳು—ಇವು ತುಂಬಿದ ಕಾಡು ಅವಳ ಕಣ್ಣಿಗೆ ಕಾಣಿಸಿತು. ಆ ಕಾಡಿನಲ್ಲಿ ಫಳೀರೆಂದು ಮಿಂಚುವ ಮಿಂಚಿನ ಬಳ್ಳಿಯಂತಿದ್ದ ತೇಜೋ ಮಯವಾದ ರೂಪದಿಂದ ನೋಡಲು ಹತ್ತು ಸಾವಿರ ಕಣ್ಣುಗಳು ಸಾಲದಂತಹ ದಿವ್ಯ ಸೌಂದರ್ಯದೊಡನೆ ಕೂಡಿದ ಮುಗುಳ್ನಗೆಯಿಂದ ಶೋಭಿಸುವ ತುಟಿ ಗಳೂ, ಹೂವಿನಂತೆ ಅರಳಿದ ಮುಖವೂ, ದುಂಬಿಯಂತೆ ಹೊಳೆಯುತ್ತ ಕಪ್ಪಗಿದ್ದ ಕೂದಲೂ, ಚಂದ್ರನಂತಹ ವಿಶಾಲವಾದ ಹಣೆಯೂ, ಬಿಲ್ಲಿನಂತೆ ಬಾಗಿದ ಹುಬ್ಬೂ, ಉಳ್ಳ ಅತಿ ಲಾವಣ್ಯದಿಂದ ಕೂಡಿದ ಒಂದು ಸ್ತ್ರೀರತ್ನವು, ಅವಳ ಕೈಯಲ್ಲಿ ಕೈ ಹೆಣೆದುಕೊಂಡು ನೀಲ ವರ್ಣನಾಗಿ, ಸಮುದ್ರವೋ, ಕರಿ ಮೇಘವೋ ಎಂದು ಭ್ರಮಿಸುವಂತಹ ಕಲ್ಪನಾ ತೀತವಾದ ಸ್ವರೂಪ ವನ್ನು ತಾಳಿದ ಒಬ್ಬ ಮಹಾ ಪುರುಷನೂ, ಇವಳ ಬಳಿಸಾರಿ ಬಂದಂತೆಯೊ ಕಂಡಳು. ಅವರು ಬಂದಾಗಲೆ "ರಾಮನೂ, ಸೀತೆಯೂ ಬರುತ್ತಿರುವರು. ರಾಮನೂ ಸೀತೆಯೂ ನನಗೆ ದರ್ಶನ ಕೊಡಲು ಬರುತ್ತಿರುವರು" ಎಂದು ಒಂದು ಭಾವನೆ ಉಂಟಾದಂತೆಯೂ ಅವರು ಬಂದ ಕೂಡಲೆ ಕೆಳಗೆ ಬಿದ್ದು, ನಮಸ್ಕಾರ ಮಾಡಿ, ಅವರಿಬ್ಬರ ಪಾದಗಳನ್ನೂ ಗಟ್ಟಿಯಾಗಿ ಹಿಡಿದು ಕೊಂಡಂತೆಯೂ, ಆ ಮಹಾ ಪುರುಷರು "ಭಯಪಡಬೇಡ! ಇವಳನ್ನು ಹುಡು ಕುತ್ತ ನಾನು ಅಲೆದಾಡಿದುದು ನಿನಗೆ ತಿಳಿದಿರುವುದೆ?" ಎಂದು ಹೇಳಿ ಸಮಾ

ಧ್ಯಾನಗೊಳಿಸಿ ಇದ್ದಕ್ಕಿದ್ದಂತೆ ಮರೆಯಾದಂತೆಯೂ ಕಮಲಾಂಬಾಳ್ ಒಂದು ಕನಸನ್ನು ಕಂಡಳು. ಕಂಡು, ಬೆಚ್ಚಿಬಿದ್ದು, ಎಚ್ಚರಗೊಂಡು "ದೇವರೇ ನಿನ್ನ ಮಹಿಮೆಯೇ ಇದು! ಕನಸಿನಲ್ಲಿಯಾದರು ಕಂಡೆನಲ್ಲಾ" ಎಂದು ಹಿಗ್ಗಿ ಸಂತೋಷದಲ್ಲಿ ಕಣ್ಣಿನಲ್ಲಿ ನೀರು ಹರಿಸುತ್ತ ಬಿಕ್ಕಿ ಬಿಕ್ಕಿ ಅತ್ತಳು.

ಅವಳು ಕಂಡುದು ಕನಸೇ ಹೊರತು, ನನಸಲ್ಲ. ಆದರೂ ಅವಳ ಹೆಣ್ಣುಬುದ್ಧಿಗೆ ಅದು ಸಾಕಾಗಿತ್ತು. ಆ ಕನಸನ್ನು ಮತ್ತೆ ಮತ್ತೆ ನೆನಪಿಗೆ ತಂದುಕೊಂಡು ಅಮೃತಪಾನ ಮಾಡಿದಂತೆ ಅವಳು ಆನಂದಿಸಿದಳು. ಮತ್ತೆ ಬರುವುದೇ ಆ ಕನಸು—ಎಂದು ಪ್ರಯತ್ನ ಮಾಡಿದಳು. ಬಾರದುದನ್ನು ಕಂಡು ಕಣ್ಣೀರು ಸುರಿಸಿದಳು. "ರಾಮಾ, ರಾಮಾ, ರಾಮಾ" ಎಂದು ರಾಮ ನಾಮ ಸ್ಮರಣೆಯನ್ನು ಹಿಂದಿಗಿಂತಲೂ ಹತ್ತರಷ್ಟು ಹೆಚ್ಚಾಗಿ ಮಾಡಿದಳು. ಗಂಡನನ್ನು ಕಳೆದುಕೊಂಡ ಚಿಂತೆಗಿಂತಲೂ, ಕನಸನ್ನು ಕಳೆದುಕೊಂಡ ಚಿಂತೆ ಅಧಿಕವಾಯಿತು. "ದೇವರೇ ! ನಿನ್ನ ಮಹಿಮೆಯೇ ಮಹಿಮೆ. ನಾನೂ ಒಂದು ಪದಾರ್ಥವೆಂದು ನಿನ್ನ ದಿವ್ಯ ಚಿತ್ತಕ್ಕೆ ಬಂದೆನಲ್ಲಾ !" ಎಂದು ಆನಂದಿಸಿದಳು. "ಭಯ ಪಡಬೇಡ" ಎಂದು ಹೇಳಿದ ನೀನಿರಲು ನನಗೇತರ ಭಯ ?" ಎಂದು ನಕ್ಕಳು. "ಬಂದವರು ಇನ್ನು ಸ್ವಲ್ಪ ಹೊತ್ತು ಇದ್ದರೆ ?" ಎಂದು ಪ್ರಲಾಪಿಸಿದಳು. "ಕಾಣಿಸಿಕೊಂಡವರು ಮರೆಯಾದರು—ಅವರನ್ನು ನಿಲ್ಲಿಸುವವರು ಯಾರೂ ಇರಲಿಲ್ಲ." ಎಂದು ಬಿಕ್ಕಿ ಬಿಕ್ಕಿ ಅತ್ತಳು. ರಾಮನು ಸೀತೆಯನ್ನು ಕಂಡಂತೆ ನಾನೂ ನನ್ನ ಗಂಡನನ್ನು ಕಾಣುವೆನು. ನನ್ನ ಪತಿ ದೇವನನ್ನು ಕಾಣುವೆನು" ಎಂದು ಹಿಗ್ಗಿದಳು. ಕಮಲಾಂಬಾಳಾದರೋ ಹೀಗೆ ಅಳುತ್ತಲೂ ನಗುತ್ತಲೂ ಇದ್ದಳು. ಲಕ್ಷ್ಮಿಯಾದರೊ ಪೂರ್ತಿಯಾಗಿ ಅಳುತ್ತಲೇ ಇದ್ದಳು. ಏನಾದರೂ ಕೆಲವು ವೇಳೆ ನಕ್ಕರೂ, ಹಿಂದಿದ್ದ ಸ್ಥಿತಿ ಯನ್ನೂ ಈಗಿನ ಸ್ಥಿತಿಯನ್ನೂ ಕುರಿತು ಪರಿತಾಪಗೊಳ್ಳುವ ಶಕ್ತಮಯ ವಾದ ನಗುವಾಗಿತ್ತೇ ಹೊರತು ಸಂತೋಷದ ನಗೆಯಲ್ಲ. ಗಂಡನನ್ನು ಕಂಡವ ಳಂತೆಯೂ, ಕಾಣದೆ ಹುಡುಕುವಳಂತೆಯೂ, ಕನಸುಗಳನ್ನು ಕಂಡು, ನಿದ್ದೆ ಕೆಟ್ಟು ಮರುಗಿದ್ದು ಮಾತ್ರವಲ್ಲದೆ, ಪ್ರತ್ಯಕ್ಷವಾಗಿ ಎದುರಿಗೆ ಕಾಣುವಂತೆ ಕಲ್ಪಿಸಿಕೊಂಡು ಹಾಗೆ ಕಂಡಾಗ ಆತುರದಿಂದ ಆಲಿಂಗನ ಮಾಡಲು ಹೋಗಿ

ಬರಿ ಬಯಲನ್ನು ನೋಡಿ ನಾಚಿಕೊಂಡಳು. ಅರಳಿದ ಕೆಂದಾವರೆಯಂತಿದ್ದ ಮುಖ ಸದಾ ಬಾಡಿತ್ತು. ಲವಲವಿಕೆ ಇಲ್ಲದೆ ದೇಹವೆಲ್ಲ ಕೃಶವಾಯಿತು. ಕೂದಲು ಜಟಿಯಾಗಿ ಕಟ್ಟಿತು. ಕಣ್ಣು ಕೆಂಪೇರಿತು. ಹವಳದಂತಿದ್ದ ಬಾಯಿ ವರ್ಣರಹಿತವಾಯಿತು. ಕೈಕಾಲುಗಳು ನಿಶ್ಯಕ್ತಿಯಿಂದ ಸೊರಗಿದುವು. ಕೈಯಲ್ಲಿದ್ದ ಬಳೆಗಳು ಮೊಳಕೈವರೆಗೂ ಜಾರಿ ಹೋದುವು. ಕತ್ತಿನಲ್ಲಿ ಮಾಂಗಲ್ಯವೊಂದನ್ನು ಬಿಟ್ಟು ಬೇರೆ ಯಾವ ಆಭರಣವೂ ಇರಲಿಲ್ಲ. ತಾಂಬೂಲ, ಹೂ, ಗಂಧ—ಇವುಗಳೊಂದೂ ಅವಳಿಗೆ ಬೇಕಾಗಿರಲಿಲ್ಲ. ಲಕ್ಷ್ಮಿ ತನ್ನ ಮನೋವೇದನೆಯನ್ನು ಸಹಿಸಲಾಗದೆ ಬೆಂಕಿಯ ಬಳಿ ಇಟ್ಟಿರುವ ಹೂ ಬಳ್ಳಿಯಂತೆ ಸೊರಗಿ ಹೋದಳು.

## ೩೪. ಬ್ರಹ್ಮಾನಂದ ಸುಖ

ಇವರ ಸ್ಥಿತಿ ಹೀಗಿರಲು, ಸಚ್ಚಿದಾನಂದ ಸ್ವಾಮಿಗಳೂ ಮುತ್ತುಸ್ವಾಮಿ ಅಯ್ಯರವರೂ ಇನ್ನು ಕೆಲವು ಶಿಷ್ಯರ ಸಮೇತ ಜೀವನ್ಮುಕ್ತಿ ಕ್ಷೇತ್ರವಾದ ಕಾಶಿ ಮಹಾನಗರವನ್ನು ಸೇರಿ ಅಲ್ಲಿ ಹನುಮಾನ ಘಟ್ಟದ ಸಮೀಪವಿದ್ದ ಒಂದು ಮಠದಲ್ಲಿ ತಂಗಿದರು. ಸಚ್ಚಿದಾನಂದ ಸ್ವಾಮಿಗಳು ಕಾಶಿಯಲ್ಲಿ ಬಹಳ ಪ್ರಭಾವ ಉಳ್ಳವರು. ಅಲ್ಲಿ ಅವರ ಸೇವೆಗಾಗಿ ಕಾದಿದ್ದವರು ಅನೇಕರು. ಅವರು ಮಧ್ಯೆ ಕಾಣದೆ ಇದ್ದು ಮತ್ತೆ ಬಂದಿರುವರೆಂಬ ಸುದ್ದಿ ಹರಡಿದ ಕೂಡಲೆ ತಂಡತಂಡವಾಗಿ ಜನರು ಬಂದು ನಮಸ್ಕಾರ ಮಾಡಿದರು. ಹಾಗೆ ನಮಸ್ಕರಿಸಿದವರಲ್ಲಿ ಸಚ್ಚಿದಾನಂದ ಸ್ವಾಮಿಗಳವರ ವೈಭವವನ್ನೂ ಮುತ್ತು ಸ್ವಾಮಿ ಅಯ್ಯರವರ ಆನಂದ ಸ್ಥಿತಿಯನ್ನೂ ಕಂಡು ಹೊಗಳದವರಿರಲಿಲ್ಲ. ಮಕ್ಕಳಿಗೆಲ್ಲ ಬ್ರಹ್ಮಾನಂದ ಸ್ವರೂಪರಾದ ಸ್ವಾಮಿಗಳ ವಿಷಯದಲ್ಲಿ ಬಹಳ ಪ್ರೀತಿ. ಮಕ್ಕಳು ಶಾಲೆಗೆ ಹೋಗುವಾಗಲೂ ಬರುವಾಗಲೂ ಅವರ ಬಳಿ ಬಂದು ಅವರು ಅವರಿಗಾಗಿ ಶೇಖರಿಸಿಟ್ಟಿದ್ದ ತೆಂಗಿನಕಾಯಿ ಹಣ್ಣುಗಳನ್ನು ತೆಗೆದುಕೊಂಡು ದಾರಿಯುದ್ದಕ್ಕೂ ತಿನ್ನುತ್ತ ಹೋಗುವರು. ಉಳಿದ ವೇಳೆ ಗಳಲ್ಲಿ ಮಠಕ್ಕೆ ಬಂದು ಗದ್ದಲ ಮಾಡುತ್ತ ಆಟವಾಡುವರು. ಹಾಗೆ ಆಟ

ವಾಡಿಯೂ ಆ ಮಹಾನುಭಾವರ ನಿಷ್ಠೆ ಕಲಕದೆ ಇರುವುದನ್ನು ಕಂಡು ಆಶ್ಚರ್ಯ ಪಡುವರು. ಎರಡು ವರ್ಷ, ಮೂರು ವರ್ಷ, ನಾಲ್ಕು ವರ್ಷ— ಈ ವಯಸ್ಸಿನ ಮಕ್ಕಳೆಲ್ಲ ಆವರ ತೋಳಿನ ಮೇಲೆಯೂ, ತಲೆಯ ಮೇಲೆಯೂ, ಕಾಲಿನ ಮೇಲೆಯೂ, ಕೈಮೇಲೆಯೂ, ಒತ್ತಿಕೊಂಡೇ ಇರುವುವು. ಅವರನ್ನು ಆ ಮಕ್ಕಳು "ತಾತಾ" ಎಂದು ಕರೆಯುವುದು ವಾಡಿಕೆ. ಮುತ್ತುಸ್ವಾಮಿ ಅಯ್ಯರವರೂ ಆವರ ವಿಷಯದಲ್ಲಿ ಸ್ವಾಮಿಗ ಳಂತೆಯೇ ವಿಶ್ವಾಸವನ್ನು ತೋರಿಸಿದುದರಿಂದ ಅವರೂ ಅವರಿಗೆ 'ಮಾವ'. ಮಕ್ಕಳು ಅವರ ತೋಳಿನ ಮೇಲೆ ಏರಿ ಕುಣಿಯಲು ತೊಡಗಿದರು. ಸ್ವಾಮಿಗ ಳವರ ಉಪದೇಶಬಲದಿಂದ ಮಕ್ಕಳೆಲ್ಲರೂ ಅವರಿಗೆ ಬ್ರಹ್ಮಸ್ವರೂಪವಾಗಿ ತೋರಿದರು. ಹಾಗೆ ತೋರಲು ದೇವರೊಂದಿಗೆ ಪ್ರತ್ಯಕ್ಷ ಸರಸವಾಡುವಂತೆ ಅವರು ಅವರೊಡನೆ ಆಟವಾಡುತ್ತಿದ್ದರು. ಆ ಮಕ್ಕಳ ಪೈಕಿ ದೊರೆಸ್ವಾಮಿ ಎನ್ನುವವನ ಮೇಲೆ ಮಿತಿಯಿಲ್ಲದ ಪ್ರೀತಿ ಉಂಟಾಯಿತು. ಆ ಮಗು ಲಕ್ಷಣ ವಾಗಿದ್ದುದು ಮಾತ್ರ ಕಾರಣವಲ್ಲ, ಅದರ ಮುಖ ವಿಲಾಸದಲ್ಲಿಯೂ, ನಡತೆ ಯಲ್ಲಿಯೂ ಬ್ರಹ್ಮತೇಜಸ್ಸು ಪ್ರಜ್ವಲಿಸುತ್ತಿದ್ದುದರಿಂದ ಆ ಮಗುವಿನೊಡನೆ ಅವರು ಸಾಕ್ಷಾತ್ ಗೋಪಾಲನನ್ನು ಮಗುವಾಗಿ ಹೆತ್ತ ವಸುದೇವನಂತೆ ಪ್ರಸನ್ನರಾಗಿ ಆಟವಾಡಿದರು.

ಹೀಗೆ ಅವರು ನಿಷ್ಠೆಯಲ್ಲಿಯೂ, ವ್ಯವಹಾರದಲ್ಲಿಯೂ ತನ್ನನ್ನು ತಾನು ಮರೆಯದೆ ಸುಖ ಪಡುತ್ತಿದ್ದ ದಿನಗಳಲ್ಲಿ ಒಂದು ದಿನ ಇದ್ದಕ್ಕೆ ಇದ್ದಂತೆ ಅವರ ಮಠದಲ್ಲಿ ಮೂರು ಜನರು ಒಟ್ಟಿಗೆ ಬಂದು ಅವರನ್ನು ನಮಸ್ಕರಿ ಸಿದರು. ಅವರನ್ನು ಕಂಡು ಮುತ್ತುಸ್ವಾಮಿ ಅಯ್ಯರ್ ಅಚ್ಚರಿಗೊಂಡು ನಿಲ್ಲಲು ಆ ಮೂವರೂ "ಸ್ವಾಮೀ, ನಾವು ಮಾಡಿದ ಅಪರಾಧವನ್ನು ಕ್ಷಮಿಸಿ ದಯೆ ತೋರಬೇಕು." ಎಂದು ಬೇಡಿದರು. ಅವರಲ್ಲಿ ಒಬ್ಬನು "ಸ್ವಾಮೀ, ನಾನು ಮಾಡಿದ ತಪ್ಪಿಗೆ ಇದೊಂದು ಪರಿಹಾರವಾಗಲಾರದು." ಎಂದು ಹೇಳಿ ಜೊತೆಯಲ್ಲಿ ಬ್ರಾಹ್ಮಣರ ಕಡೆಯಿಂದ ಪಡೆದ ಬ್ಯಾಂಕು ನೋಟುಗಳ ಒಂದು ದೊಡ್ಡ ಹಣದ ಕಟ್ಟನ್ನು ಅವರ ಪಾದದಲ್ಲಿ ಸಮರ್ಪಿಸಿದನು. ಹಾಗೆ ಸಮರ್ಪಿಸಿದವನು ನಮ್ಮ ಹಳೆಯ ಸ್ನೇಹಿತನಾದ ಪೇಯಾಂಡಿ ದೇವನೇ.

ಅವನು ಉತ್ತರ ದೇಶಗಳಿಗೆ ಹೋಗಿ ಕೊಳ್ಳೆ ಹೊಡೆದು ಕೆಲವು ವರ್ಷಗಳ ಹಿಂದೆ ತನ್ನ ಶತ್ರುವಾದ ಮುತ್ತುಸ್ವಾಮಿ ಅಯ್ಯರವರ ಸ್ಥಿತಿಗತಿಗಳನ್ನು ನೋಡಿ ಬರೋಣವೆಂದು ಶಿರುಕುಳಕ್ಕೆ ಬರಲು ಊರೆಲ್ಲ ಚಂದ್ರನಿಲ್ಲದ ರಾತ್ರಿಯಂತೆಯೂ, ಗಂಡನನ್ನು ಕಳೆದುಕೊಂಡ ವಿಧವೆಯಂತೆಯೂ, ಕಾಂತಿಹೀನವಾಗಿ, ದಯಾರಹಿತವಾಗಿರುವುದನ್ನು ಕಂಡು ಆಶ್ಚರ್ಯಪಟ್ಟು ಅದರ ಕಾರಣವನ್ನು ವಿಚಾರಿಸಲು ಆ ಊರಿಗೆ ಅರಸರಂತೆ ಬೆಳಗಿದ ಅಯ್ಯರವರ ಕುಟುಂಬ ನೆಲಸಮವಾಗಿ ಭಿನ್ನಭಿನ್ನವಾಗಿ ಹೋದುದನ್ನು ಕೇಳಿ ಅದಕ್ಕೆ ತಾನು ಕಾರಣನಾಗಿದ್ದುದನ್ನೂ ನೆನೆದು ಬಹಳ ವ್ಯಥೆಯನ್ನು ತಾಳಿ, ಹೇಗಾದರೂ ತಾನು ಮಾಡಿದ ಕೆಡಕಿಗೆ ಪರಿಹಾರ ಮಾಡಲೇಬೇಕೆಂದು ಘನವಾದ ವೈರಾಗ್ಯ ಬುದ್ಧಿಯಿಂದ ಮುತ್ತುಸ್ವಾಮಿ ಅಯ್ಯರನ್ನು ಹುಡುಕುತ್ತ ಹೊರಟನು.

ಊರಿಂದ ಊರಿಗೆ ಹೋಗುತ್ತ ಸುಳಿವನ್ನು ವಿಚಾರಿಸಿಕೊಂಡು ಹೋದುದರಲ್ಲಿ ಒಂದು ದಿನ ರಾತ್ರಿ ಒಂದು ಮನೆಯ ಬೀದಿಯ ಜಗುಲಿಯಲ್ಲಿ ಮಲಗಿ ನಿದ್ರಿಸುತ್ತಿದ್ದನು. ಅರ್ಧ ರಾತ್ರಿಯಾದ ಮೇಲೆ ಆ ಮನೆಯಲ್ಲಿ ಇಬ್ಬರು ಒಬ್ಬರಮೇಲೊಬ್ಬರು ಕಡು ಕೋಪದಿಂದ ಜಗಳವಾಡುತ್ತಿದ್ದುದು ಅವನ ಕಿವಿಗೆ ಬಿತ್ತು. ಅವನು ನಿದ್ರೆಯನ್ನು ಸಾಕುಮಾಡಿ ಗಮನಿಸಿದನು. ಗಮನಿಸಿದ ಕೂಡಲೆ ಅವರಿಬ್ಬರೂ ಮುತ್ತುಸ್ವಾಮಿ ಅಯ್ಯರವರ ದೊಡ್ಡ ಹಣದ ರಾಶಿಯನ್ನು ಒಟ್ಟುಗೂಡಿ ಲೂಟಿಮಾಡಿ, ಊರನ್ನು ಬಿಟ್ಟು ಓಡಿದ್ದ ಕಳ್ಳ ಬ್ರಾಹ್ಮಣರೆಂದೂ ಆ ಧ್ರವ್ಯವನ್ನು ಹಂಚಿಕೊಳ್ಳುವುದರಲ್ಲಿ ಅವರಿಬ್ಬರೂ ಚರ್ಚಿಸುತ್ತಿರುವುದಾಗಿಯೂ ಅರಿತು, ಯುಕ್ತಿಯಿಂದ ಆ ಕ್ಷಣವೇ ಆ ಮನೆಯಲ್ಲಿ ಪ್ರವೇಶಿಸಿ ಪೋಲೀಸ್ ಅಧಿಕಾರಿಯಂತೆ ನಟಿಸಿ ಅವರನ್ನು ಹೆದರಿಸಲು, ಅವರು ಬಹಳ ಭಯಗೊಂಡು ದಿಗ್ಭ್ರಾಂತರಾಗಿ ಅವನ ಕೈಯಲ್ಲಿ ಸಿಕ್ಕಿದರು. ಅನಂತರ ಹಣವನ್ನು ಅದರ ಒಡೆಯರಿಗೆ ಸೇರಿಸಿ ಬಿಟ್ಟರೆ ಅವರನ್ನು ಸರಕಾರದ ಶಿಕ್ಷೆಗೆ ಗುರಿ ಮಾಡುವುದಿಲ್ಲವೆಂದು ಅವರಿಗೆ ಮಾತು ಕೊಟ್ಟು ಅವರನ್ನು ಕರೆದುಕೊಂಡು ಹೋಗಿ ಹಣವನ್ನು ಹೂತಿದ್ದ ಜಾಗಕ್ಕೆ ಹೋಗಿ ಅದನ್ನು ವಶಮಾಡಿಕೊಂಡು ಮೂವರೂ ಕಾಶಿಯನ್ನು ತಲಪಿದರು. ಅಲ್ಲಿ ಮುತ್ತುಸ್ವಾಮಿ ಅಯ್ಯರ್ ತಂಗಿದ್ದ ಮಠಕ್ಕೆ ಬಂದು ಸೇರಿದರು. ಇದ್ದ

ಕ್ಕಿದ್ದಂತೆ ಕಳೆದುಕೊಂಡಿದ್ದ ದ್ರವ್ಯವೆಲ್ಲ ತನ್ನಿದಿರಿನಲ್ಲಿ ಒಂದು ರಾಶಿಯಾಗಿ ನಿಂತಾಗ ಮುತ್ತುಸ್ವಾಮಿ ಅಯ್ಯರ್ ನಿರ್ವಿಕಲ್ಪವಾದ ಮನೋಲಕ್ಷಣವನ್ನು ಪಡೆದು ಮುಕ್ತರಾದುದರಿಂದ ದೇವರ ಅನುಗ್ರಹಕ್ಕಾಗಿ ಸಂತೋಷಗೊಂಡು ದ್ರವ್ಯವೆಲ್ಲವನ್ನು ದಾನಮಾಡಿ ಬಿಡಬೇಕೆಂದು ಪೇಯಾಂಡಿ ದೇವನಿಗೆಅನು ಮತಿಯನ್ನಿತ್ತರೂ ಅದನ್ನು ಕೇಳಿ ಒಳಗಿದ್ದ ಸಚ್ಚಿದಾನಂದ ಸ್ವಾಮಿಗಳು, "ಅದು ನಿನ್ನ ಸಂಪತ್ತಲ್ಲ. ಇತರರಿಗಾಗಿ ನೀನು ಅದನ್ನು ಭದ್ರಮಾಡ ಬೇಕೆಂದು ದೇವರು ನಿನಗೆ ಕಳುಹಿಸಿದ್ದಾನೆ. ಅದನ್ನು ತೆಗೆದಿಡು." ಎಂದು ಆಜ್ಞಾಪಿಸಲು, ಗುರುಗಳ ಆಜ್ಞೆಯನ್ನು ಪಾಲಿಸಿ ಅವರೂ ಹಾಗೆಯೇ ಮಾಡಿದರು.

ಸ್ವಲ್ಪ ಹೊತ್ತಿಗೆಲ್ಲ, ಮುತ್ತುಸ್ವಾಮಿ ಅಯ್ಯರ್ ಮುಖ್ಯ ಸ್ನೇಹಿತ ನಾದ ಮಗುದೊರೆ ಸ್ವಾಮಿಯೂ ಅವನ ತಂದೆಯಾದ ರಾಮಶೇಷಯ್ಯ ಎನ್ನು ವವರೂ ಅಲ್ಲಿಗೆ ಬಂದು ಅವರಿಗೆ ನಮಸ್ಕರಿಸಿ ಕುಳಿತುಕೊಂಡರು. ಪಕ್ಕ ದಲ್ಲಿದ್ದ ಪೇಯಾಂಡಿ ದೇವನು ಅವರಿಬ್ಬರನ್ನೂ ಸ್ವಲ್ಪ ಹೊತ್ತು ದೃಷ್ಟಿಸಿ ನೋಡಿ, ಅನಂತರ ರಾಮಶೇಷಯ್ಯರನ್ನು ನೋಡಿ "ಸ್ವಾಮೀ, ನಾನು ದಾಸ ಬಂದಿದ್ದೇನೆ. ಮಗುವಿನ ಒಡೆಯರು ಎದುರಿನಲ್ಲಿಯೇ ಇದ್ದಾರೆ. ತಮಗೆ ಅಷ್ಟೇ ಪ್ರಾಪ್ತ" ಎಂದು ಹೇಳಿದನು. ರಾಮಶೇಷಯ್ಯರ್ ಬೆಚ್ಚಿಬಿದ್ದು ತನ್ನೊಡನೆ ಮಾತಾಡಿದವನು ಪೇಯಾಂಡಿ ದೇವನೆಂದು ಮನಗಂಡು ಅವನ ಯೋಗಕ್ಷೇಮವನ್ನೂ ಆಕಸ್ಮಿಕವಾದ ಬರುವಿಕೆಯನ್ನೂ ಕುರಿತು ವಿಚಾರಿಸಿ, ಕ್ಲೇಶದಿಂದ "ಯಾರು ಮಗುವಿನ ಒಡೆಯರು?" ಎಂದು ಕೇಳಿದರು. "ಮಗು, ಯಾರ ಮಡಲಿನಲ್ಲಿ ಇದೆಯೋ, ಅವರೇ!" ಎಂದು ಪೇಯಾಂಡಿ ಮುತ್ತುಸ್ವಾಮಿ ಅಯ್ಯರನ್ನು ತೋರಿಸಿ ಉತ್ತರವಿತ್ತನು. ಈ ಮಾತು ಕಿವಿಯಲ್ಲಿ ಬೀಳು ವುದಕ್ಕೆ ಮೊದಲೇ ರಾಮಶೇಷ ಅಯ್ಯರಿಗೆ ಕಣ್ಣೀರು ಪ್ರವಾಹವಾಗಿ ಹರಿ ಯುತ್ತಿತ್ತು. ಅಳುತ್ತ ಅವರು ಮುತ್ತುಸ್ವಾಮಿ ಅಯ್ಯರನ್ನು ನೋಡಿ, "ಸ್ವಾಮೀ, ತಮ್ಮ ಮಗುವಂತೆ, ಬೆಳೆಸಿದ ವಾತ್ಸಲ್ಯ ನನ್ನನ್ನು ಬಿಡಲಿಲ್ಲ. ಮಗುವನ್ನು ಪಡೆದುಕೊಳ್ಳಿ" ಎಂದು ಹೇಳಿ ಹೊರಗೆ ಹೊರಡಲು ಮುತ್ತುಸಾಮಿ ಅಯ್ಯರ್ ದೇವರ ನಾಟಕವನ್ನೂ, ಮನುಷ್ಯರ ಅಜ್ಞಾನವನ್ನು ಕಂಡು,

ಅಚ್ಚರಿಗೊಂಡು, ಅವರ ಕೈಯನ್ನು ಹಿಡಿದು ಎಳೆದು, "ಹಿಂದಿನಂತೆಯೇ ಈಗಲೂ ತಮ್ಮ ಮಗುವೇ ನನ್ನದಾದರೇನು, ತಮ್ಮದಾದರೇನು?" ಎಂದು ಉಪಚಾರದ ಮಾತುಗಳನ್ನಾಡಿ, ಅವರನ್ನು ಸಮಾಧಾನಗೊಳಿಸಿ, "ನಟರಾಜ!" ಎಂದು ಪ್ರೇಮದಿಂದ ಕೂಗಿಕರೆದು "ಹೆತ್ತವನಾದ ನನಗಿಂತಲೂ, ಬೆಳೆಸಿದ ಅವರು—ದೊಡ್ಡ ತಂದೆ" ಎಂದು ಬಹಳ ವಿಶ್ವಾಸದಿಂದ ಹೇಳಿ ತನ್ನ ಮನಸ್ಸಿನಲ್ಲಿ, "ಸ್ವಾಮೀ! ಯಾವ ಕಾರ್ಯಕ್ಕಾಗಿ ಈ ನಿನ್ನ ಯುಕ್ತಿ?" ಎಂದು ಭಾವಿಸಲು, ಒಳಗಿದ್ದ ಸಚ್ಚಿದಾನಂದ ಸ್ವಾಮಿಗಳವರು ಹೊರಕ್ಕೆ ಬಂದು ಮಗು ನಟರಾಜನನ್ನೂ, ಮುತ್ತುಸ್ವಾಮಿ ಅಯ್ಯರನ್ನೂ ನೋಡಿ, ಭಗವಂತನ ಕಾರ್ಯಕ್ಕೆ "ತಥಾಸ್ತು" ಎಂದು ಹೇಳುವುದೇ ನಮ್ಮ ಕಸಬು. ನಮಗಾಗಿ ಬೇಕಾದುದೇನೂ ಇಲ್ಲ" ಎಂದು ತನ್ನ ಶಿಷ್ಯರಿಗೆ ಎತ್ತಿ ಹೇಳಿದರು.

ಅನಂತರ ಪೇಯಾಂಡಿ ದೇವನು ತಾನು ಮಕ್ಕಳನ್ನು ಅಪಹರಿಸಲು ಔಷಧವನ್ನು ಕೊಡುವ ಹೆಂಗಸೊಬ್ಬಳನ್ನು ಕಳುಹಿಸಿ ಮಗುವನ್ನು ಯುಕ್ತಿಯಿಂದ ಹಿಡಿದು ತಂದು ಕುದುರೆಯ ಮೇಲೆ ಸಾಗಿಸಿಕೊಂಡು ಓಡಿದುದನ್ನೂ, ಮಕ್ಕಳಿಲ್ಲದೆ ತಪಿಸುತ್ತಿದ್ದ ರಾಮಶೇಷಯ್ಯರವರ ಪ್ರಾರ್ಥನೆಗೆ ಮರುಗಿ ಸಾವಿರ ಹೊನ್ನಿಗೆ ಆ ಚೆಲುವಾದ ಮಗುವನ್ನು ವಿಕ್ರಯ ಮಾಡಿದುದನ್ನೂ, ಆಕಸ್ಮಿಕವಾಗಿ ಅವರನ್ನು ಇಲ್ಲಿ ಸಂಧಿಸಿದುದನ್ನೂ ವಿಸ್ತಾರವಾಗಿ ಹೇಳಲು ಎಲ್ಲರೂ ಭಗವಂತನ ಕೃಪೆಯನ್ನು ಕೊಂಡಾಡಿದರು. ಪೇಯಾಂಡಿ ದೇವನು ರಾಮಶೇಷ ಅಯ್ಯರನ್ನು ನೋಡಿ, "ತಮ್ಮ ಸಾವಿರ ಹೊನ್ನನ್ನೂ ಹಿಂತಿರುಗಿಸಿ ಕೊಡುತ್ತೇನೆ. ಯೋಚಿಸಬೇಡಿ." ಎಂದು ಹೇಳಲು, ಅವರು, "ನಾನು ಇರುವವರೆಗೂ ಈ ಮಗುವನ್ನು ಬಿಟ್ಟು ಅಗಲದೆ ಇರುವಂತೆ ವರವನ್ನು ತರಿಸಿ ಕೊಡುವೆಯಾದರೆ ಸಾವಿರ ಹೊನ್ನಿಗೆ ಸಾವಿರ ಲಕ್ಷ ಹೊನ್ನನ್ನು ಕೊಟ್ಟಂತೆ ಆಗುವುದು." ಎಂದು ಅಳುತ್ತ ಹೇಳಲು, ಮುತ್ತುಸ್ವಾಮಿ ಅಯ್ಯರ್, "ಭಯ ಪಡಬೇಡಿ! ಮಗು ತಮ್ಮದೆ! ತಮ್ಮದೆ!" ಎಂದು ಧೈರ್ಯ ಹೇಳಿದರು.

## ೩೫. ಅಗಲಿದವರು ಕೂಡಿದರೆ ಹೇಳಬೇಕೆ ?

ಅಮ್ಮಯ್ಯಪ್ಪ ಪಿಳ್ಳೈ, ಕಮಲಾಂಬಾಳ್, ಲಕ್ಷ್ಮಿ, ಸುಂದರಂ — ಮೊದಲಾದವರು ಹಲವಾರು ಊರುಗಳಲ್ಲಿ ತಿರುಗಾಡಿ ಕೊನೆಗೆ ಕಾಶಿಗೆ ಬಂದು ಒಂದು ಮನೆಯಲ್ಲಿ ತಂಗಿದ್ದರು. ಕೆಲವು ದಿನಗಳಾದ ಮೇಲೆ ಒಂದು ದಿನ ಆ ಮನೆಯಲ್ಲಿ ವೀಣೆ ಒಂದಿರುವುದನ್ನು ಕಂಡು ಭಗವಂತನನ್ನು ಕುರಿತು ಹಾಡಬೇಕೆಂದು ಆಸೆ ಉಂಟಾದುದರಿಂದ ಲಕ್ಷ್ಮಿಯನ್ನು ಸ್ವಲ್ಪ ಸಮಾಧಾನ ಮಾಡಿ ಉಪಚಾರದ ಮಾತುಗಳನ್ನು ಹೇಳಿ ಆ ವೀಣೆಯನ್ನು ತೆಗೆದುಕೊಂಡು ಹಾಡುವಂತೆ ಕೇಳಿಕೊಳ್ಳಲು ಅವಳೂ ಅರೆ ಮನಸ್ಸಿನಿಂದ ಸಮ್ಮತಿಸಿ* ವೀಣೆ ಯನ್ನು ಕೈಯ್ಯಲ್ಲಿ ತೆಗೆದುಕೊಂಡು, ಶ್ರುತಿ ಸೇರಿಸಿ ಹಾಡತೊಡಗಿದಳು. ಆ ಹಾಡು ಒಂದು ಹಸುರ ಗಿಳಿಯನ್ನುದ್ದೇಶಿಸಿ ಹಾಡಿದ ಹಾಡು.

ಹೀಗೆ ಹಾಡುತ್ತಿದ್ದಾಗ ಕಮಲಾಂಬಾಳ್ ಕನಸಿನಲ್ಲಿ ಕಂಡ ರಾಮನನ್ನು ಕುರಿತು ಕಣ್ಣೀರು ಹರಿಸಿದಳು. ಹಾಡನ್ನು ಕೇಳಿದವರು ಹಸುರು ಗಿಳಿಯ ಕಣ್ಣಿನ ಸೊಗಸಿಗೂ, ಹಾಡಿನ ಚಂದಕ್ಕೂ ಮನ ಕರಗಿ ಅಶ್ರುಧಾರೆ ಕರೆದರು. ಹಾಡುತ್ತಿದ್ದ ಲಕ್ಷ್ಮಿಯಾದರೂ ತನ್ನ ಗಂಡನನ್ನು ಸದಾಕಾಲದಲ್ಲಿಯೂ ತನ್ನ ಮನಸ್ಸಿನಲ್ಲಿ ನೆನೆನೆನೆದು ಅವನನ್ನು ಕಾಣಬೇಕೆಂದು ಮಾಡಿದ ಪ್ರಯತ್ನಗಳು ವಿಫಲವಾದ ದುಃಖದಿಂದ ಹಾಡಲಾಗದವಳಾಗಿ ಮುಖದ ಮೇಲೆ ವಸ್ತ್ರವನ್ನು ಮುಚ್ಚಿಕೊಂಡು ಕಣ್ಣೀರಿನಿಂದ ತೋಯ್ದು ವೀಣೆಯನ್ನು ಕೈಬಿಟ್ಟು ಕೆಳಗಿಟ್ಟು 'ಓ' ಎಂದು ಗಟ್ಟಿಯಾಗಿ ರೋಧಿಸಿದಳು. ಹೀಗೆ ಇವರು ಮೇರೆಯಿಲ್ಲದ ಶೋಕಸಾಗರದಲ್ಲಿ ಮುಳುಗಿರಲು ಒಂದು ದಿನ ತಾವು ತಂಗಿದ್ದ ಜಾಗಕ್ಕೆ ಸ್ವಲ್ಪ ದೂರದಲ್ಲಿ ತ್ರಿಕಾಲಜ್ಞಾನಿಯಾದ ಸಚ್ಚಿದಾನಂದ ಸ್ವಾಮಿ ಗಳೆಂಬ ಒಬ್ಬರು ಮಹನೀಯರು ಇರುವುದನ್ನು ಕೇಳಿ ಅವರ ದರ್ಶನಾರ್ಥ

---

* ವೀಣೆ ಪೂರ್ಣವಾದ್ಯವೆಂಬುದು ಪ್ರಸಿದ್ಧ. ಶುದ್ಧ ಸತ್ತ್ವವಾದ ಅದರ ಸೌಂದರ್ಯ ನಾದಕ್ಕೆ ಯಾವುದೂ ಎಣೆಯಿಲ್ಲ. ಈ ವಾದ್ಯ ನಮ್ಮ ಸ್ತ್ರೀಯ ರಲ್ಲಿ ಅಪೂರ್ವವಾಗುತ್ತಿರುವುದು ಬಹಳ ಶೋಚನೀಯವಾದ ವಿಷಯ.

ವಾಗಿ ಅಮ್ಮೈಯ್ಯಪ್ಪ ಪಿಳ್ಳೈ, ಜಾನಕಿ ಅಮ್ಮಾಳ್, ಕಮಲಾಂಬಾಳ್ – ಈ ಮೂವರೂ ಹೊರಟರು. ಇವರು ಹೋದ ಸ್ವಲ್ಪಹೊತ್ತಿಗೆ ಅವರಿದ್ದ ಮನೆಯ ಬೀದಿಯ ಜಗುಲಿಯಲ್ಲಿ ದಾರಿಯಲ್ಲಿ ಹೋಗುತ್ತಿದ್ದ ಇಬ್ಬರು ಹುಡುಗರು ಬಂದು ಕುಳಿತರು.

ಅವರಲ್ಲಿ ದೊಡ್ಡವನು : "ಕಾಶಿಗೆ ಬಂದಿರುವುದು ನಿಜವಾದರೆ ಇಷ್ಟು ಅಲೆದಾಡಿದರೂ ಸಿಗದೆ ಇರುವರೆ ? ಚಿದಂಬರದಲ್ಲಿ ನಮಗೆ ಕೊಟ್ಟ ಪತ್ರಗಳು ಸುಳ್ಳಾಗಿ ಬಿಟ್ಟುವಲ್ಲವೆ ? ಮದುವೆಯ ಕಾಲದಲ್ಲಿ ಯಾವಾಗ ಅಷ್ಟು ಕೆಟ್ಟ ಶಕುನಗಳು ಸಂಭವಿಸಿದುವೊ, ಆಗಲೇ ನನಗೆ ನಂಬಿಕೆ ಇಲ್ಲ. ಇನ್ನು ಊರಿಗೆ ಹಿಂತಿರುಗಲೇ ಬೇಕು !"

ಇನ್ನೊಬ್ಬನು : "ಊರಿನಲ್ಲಿ ಏನಿದೆ ನನಗೆ ? ನೀನುಮಾತ್ರ ಹೋಗು. ಪಾಪ ! ನನಗಾಗಿ ನೀನೂ ವ್ಯರ್ಥವಾಗಿ ಅಲೆದಾಡುತ್ತಿರುವೆ. ನಾನು ಅವರಿಗಾಗಿ ಗಯಾದಲ್ಲಿ ಶ್ರಾದ್ಧಮಾಡಿಬಿಟ್ಟು ನನಗೂ ಶ್ರಾದ್ಧವನ್ನು ಮಾಡಿಕೊಂಡು ಬರುತ್ತೇನೆ. ನೀನು ಬೇಗ ಹೊರಡು."

ಮೊದಲನೆಯವನು:– "ನಿನ್ನನ್ನು ಬಿಟ್ಟು ಊರಿನಲ್ಲಿ ನನಗೇನು ಬದುಕು? ಇಬ್ಬರೂ ಈ ಊರಿನಲ್ಲಿಯೇ ಸಾಯೋಣ, ಕಾಶಿಯಲ್ಲಿ ಸತ್ತರೆ ಸದ್ಗತಿಯುಂಟು."

ಎರಡನೆಯವನು:– "ಈಗಾಗಲೆ ಇರುವ ಒಂದು ವ್ಯಥೆ ಸಾಲದೆಂದು ನಿನ್ನ ತಾಯಿ, ತಂದೆ, ಹೆಂಡತಿ ಇವರ ವ್ಯಥೆಯೂ ನನ್ನ ಮೇಲೆ ಬರಬೇಕೆ?"

ಮೊದಲನೆಯವನು: "ನಿನಗಿಂತಲೂ ಅವರಿಬ್ಬರೂ ನನಗೆ ಮುಖ್ಯವಲ್ಲ. ಇಲ್ಲಿಯೇ ಇಬ್ಬರೂ ಸಾಯೋಣ ಬಾ!"

ಎರಡನೆಯವನು:– "ಸ್ವಾಮಿ, ವಿಶ್ವೇಶ್ವರಾ! ನಿನಗೆ ಇದು ಸಮ್ಮತವೆ?" ಎಂದು ಗಟ್ಟಿಯಾಗಿ ಕೂಗಿ, "ಸರಿ ಇಲ್ಲಿ ಕುಳಿತ್ತಿದ್ದರೆ ಹೇಗೆ!" ಎಂದು ಹೇಳಿ ಇಬ್ಬರೂ ದಾರಿಯ ಕಡೆಗೆ ಹೊರಡಲಾರಂಭಿಸಿದರು."

ಆಗ ಒಳಗಿದ್ದ ಲಕ್ಷ್ಮಿ ತಮಿಳು ಮಾತಾಗಿದೆಯಲ್ಲಾ, ಎಂದು ಆಶ್ಚರ್ಯದಿಂದ ಚಕಿತಳಾಗಿ ಸುಂದರನನ್ನು ಕರೆದು, "ಬೀದಿಯಲ್ಲಿ ಯಾರು ನೋಡು!" ಎಂದು ಹೇಳಲು, ಸುಂದರಂ ಓಡಿ ಬಂದು ನೋಡಿದನು. ತನ್ನ ಭಾವನಾದ

ೕನಿವಾಸನನ್ನು ಕಂಡನು. ಸಂತೋಷದ ಆವೇಶದಿಂದ "ಭಾವಾ" ಎಂದು ೂಗಿದನು. ಅದನ್ನು ಕೇಳಿದ ಶ್ರೀನಿವಾಸನೂ, ಸುಬ್ಬರಾಯನೂ, ಬೆಚ್ಚಿಬಿದ್ದು ರುಗಿ ನೋಡಿ, ಸುಂದರನನ್ನು ಕಂಡು, ಅವನನ್ನು ತಟ್ಟಿಕೊಟ್ಟು — ಇಲ್ಲಿಯೇ ಇದ್ದೀರಾ? ಅಕ್ಕ ಎಲ್ಲಿ?" ಎಂದು ಕೇಳಿದನು. ಸುಂದರಂ ಂತೋಷದ ಭರದಲ್ಲಿ ಮಾತನಾಡಲಾಗದವನಾಗಿ ಒಳಗಡೆ ಕೈ ತೋರಿಸಿದನು. ೂಡಲೆ ಶ್ರೀನಿವಾಸನು ಆತುರದಿಂದ ಒಳಗೆ ಹೊಗಲು, ಲಕ್ಷ್ಮಿ ಎದುರು ೂಂಡು ಓಡಿ ಬಂದು ಅವನನ್ನು ಗಟ್ಟಿಯಾಗಿ ತಬ್ಬಿಕೊಂಡು ಮುರ್ಛಿತಳಾ ಳು. ಶ್ರೀನಿವಾಸನು ಅವಳನ್ನು ತನ್ನ ಎದೆಗೆ ತಬ್ಬಿಕೊಂಡು ಆನಂದ ಭಾಷ್ಪ ನ್ನು ಸುರಿಸಿದನು. ಸುಬ್ಬರಾಯನು ಸುಂದರನನ್ನು ತಬ್ಬಿಕೊಂಡು ಬಿಕ್ಕಿ ಕ್ಕಿ ಅತ್ತನು. ಬಹಳ ಹೊತ್ತಾದ ಮೇಲೆ ಲಕ್ಷ್ಮಿ ಮೂರ್ಛೆಯಿಂದೆದ್ದು, ಚ್ಚರಗೊಂಡು ತನ್ನ ಗಂಡನನ್ನು ಮತ್ತೆ ಮತ್ತೆ ದೃಷ್ಟಿಸಿ ನೋಡಿ, ಈಗ ನರ್ಜನನವೂ, ಪುನರ್ವಿವಾಹವೂ ಆದುದರಿಂದ ತನ್ನ ಪರಿಮಳ ಪೂರಿತ ಾದ ಅದರದ ಚುಂಬನಗಳಿಂದ ಮತ್ತೊಮ್ಮೆ ವರಣಮಾಲೆಯನ್ನು ಹಾಕಿ ಈ ಮಾರಂಭವನ್ನು ಸಾಂಗಗೊಳಿಸಿ, ತನ್ನನ್ನು ಹುಡುಕಿ, ನೊಂದು ಬಂದ ವಯುವಗಳಿಗೆ ಕಣ್ಣಿಂದಲೂ ಕೈಯಿಂದಲೂ ಮುಖದಿಂದಲೂ ಒತ್ತಿ ಒತ್ತಿ ುಪಚರಿಸಿದಳು. "ಅಗಲಿದವರು ಸೇರಿದರೆ ಮಾತನಾಡಲೂ ಬೇಕೆ?" ಎಂಬಂತೆ ಬ್ಬರನೊಬ್ಬರು ತನಗೆ ಅನ್ಯರೆಂದು ಭಾವಿಸಲಸಾಧ್ಯವಾಗದೆ, ಮುಖದೊಡನೆ ುಖವೂ, ಕಣ್ಣಿನೊಂದಿಗೆ ಕಣ್ಣೂ, ಕೈಯೊಡನೆ ಕೈಯೂ, ದೇಹದಿಂದ ೇಹವೂ, ಮನಸ್ಸಿನೊಡನೆ ಮನಸ್ಸೂ ಐಕ್ಯಗೊಂಡು ಇಬ್ಬರೂ ಪುಳಕಾಂಕಿತ ಾಗಿ ಎರಡು ದೇಹಗಳಿದ್ದರೂ ಒಂದು ಜೀವವಾಗಿ ಶ್ರೀನಿವಾಸನೂ ಲಕ್ಷ್ಮಿಯೂ ದ್ದ ಸ್ಥಿತಿಯನ್ನು ಏನೆಂದು ವರ್ಣಿಸೋಣ!

ಕಣ್ಣನ್ನು ಕಳೆದುಕೊಂಡು ಕುರುಡರಾಗಿ ಅಲೆಯುವವರು ತಠಾರನೆ ಣ್ಣನ್ನು ಪಡೆದಂತೆಯೊ, ಅಥವಾ ಭಗವಂತನ ಕೃಪೆಗಾಗಿ ಬಹಳ ದಿನಗಳು ಠೋರ ತಪಸ್ಸನ್ನಾಚರಿಸುವವರು ಇದ್ದಕ್ಕಿದ್ದಂತೆ ಸಾಕ್ಷಾತ್ಕಾರವನ್ನು ೊಂದಿ ಆ ಭಗವಂತನನ್ನು ಕಣ್ಣಾರೆ ಕಂಡಂತೆಯೊ!

ಇವರ ಸ್ಥಿತಿ ಹೀಗಿರಲು ಸಚ್ಚಿದಾನಂದ ಸ್ವಾಮಿಗಳು ಕಮಲಾಂಬಾ ಳನ್ನು ಕಂಡ ಕೂಡಲೆ ಅವಳ ಮುಖ ವಿಲಾಸವನ್ನೂ, ಗಾಂಭೀರ್ಯವನ್ನೂ ಶಾಂತತೆಯನ್ನು ನೋಡಿ ಅವಳು ತನ್ನ ಶಿಷ್ಯನ ಪತ್ನಿಯೆಂದು ಹೇಗೋ ತೋರಿ ಬಂದು ಬೇಗ ಅಲ್ಲಿಗೆ ಹೋಗಿ ತನ್ನ ಎರಡು ಕೈಗಳನ್ನು ಅವಳ ಶಿರದ ಮೇಲಿಟ್ಟು, "ದೀರ್ಘ ಸುಮಂಗಲೀ ಭವ" ಎಂದು ಹರಸಿ, "ಮಹಾಲಕ್ಷ್ಮಿ ಎಂದರೆ ನಿನ್ನ ಹೊರತು ಬೇರೆ ಯಾರೂ ಇಲ್ಲ" ಎಂದು ಪ್ರಶಂಸಿದರು. ತಲೆ ಬಾಗಿ ನಿಂತ ಕಮಲಾಂಬಾಳ್ ಸ್ವಾಮಿಗಳನ್ನು ತಲೆ ಎತ್ತಿ ನೋಡಿದಳು. ಪಕ್ಕದಲ್ಲಿ ನಿಂತಿದ್ದ ಮುತ್ತುಸ್ವಾಮಿ ಅಯ್ಯರವರ ಮುಖವು ಕಂಡಿತು. ಕೂಡಲೆ ಕಮಲಾಂಬಾಳ್ ಆತುರದಿಂದ ಮುಂದುವರಿದು ಅವರ ಪಾದದಲ್ಲಿ ಬಿದ್ದು ಮೂರ್ಛಿತಳಾದಳು. ಮುತ್ತುಸ್ವಾಮಿ ಅಯ್ಯರಾದರೊ, "ದೇವರೇ, ನಿನ್ನ ಮಾಯೆ ಮಹತ್ವದ್ದು. ನಗಬೇಕೊ ಅಳಬೇಕೊ ನನಗೆ ತಿಳಿಯಲಿಲ್ಲ. ನಾನು ಎರಡನ್ನೂ ಮಾಡದೆ ನಿನ್ನ ಪ್ರಭಾವವನ್ನೇ ಸ್ತುತಿಸುತ್ತೇನೆ." ಎಂದು ಬ್ರಹ್ಮದಲ್ಲಿ ಲಯ ಹೊಂದಿ ಪರವಶರಾದರು. ಇವರು ಹೀಗೆ ಆನಂದಿಸುತ್ತಿ ದ್ದಾಗಲೆ ಶ್ರೀನಿವಾಸನ್, ಲಕ್ಷ್ಮಿ, ಸುಂದರಂ, ಸುಬ್ಬರಾಯನ್ ಮೊದಲಾ ದವರೂ ಮಠಕ್ಕೆ ದಾರಿಯನ್ನು ವಿಚಾರಿಸಿಕೊಂಡು ಬಂದು ಸೇರಿದರು. ಬಂದ ಮೇಲೆ ಎಲ್ಲವೂ ಸಂಪೂರ್ಣ ಸಂಭ್ರಮವಾಯಿತು. ಹಲವರ ಬಹಳ ಕಾಲದ ದುಃಖ ಭಗವಂತನ ಕೃಪೆಯಿಂದ ಒಂದೇ ಸ್ಥಳದಲ್ಲಿ ಒಂದೇ ಘಳಿಗೆಯಲ್ಲಿ ನಿವೃತ್ತಿಯಾಗಲು ಸಚ್ಚಿದಾನಂದ ಮಠ ಸಾಕ್ಷಾತ್ ಸಚ್ಚಿದಾನಂದ ಮಠವಾ ಗಿಯೇ ಪರಿಣಮಿಸಿತು. ಅಲೆದಾಡಿದುದೂ, ತಿರುಗಾಡಿದುದೂ, ಅಳುವುದೂ, ಪ್ರಲಾಪಿಸುವುದೂ, ಊರುಊರಾಗಿ ಓಡಾಡಿದುದೂ, ಮನೆಮನೆಯಾಗಿ ಹುಡುಕಿದುದೂ—ಎಲ್ಲವೂ ಯಾವುದೊ ಒಂದು ಕನಸಿನಂತೆ ಮರೆಯಾಗಿ ಎಲ್ಲರೂ ಅಡಗಿಸಲಾರದ ಕುತೂಹಲದಿಂದ ಕೂಡಿ ಆನಂದ ತಾಂಡವ ವನ್ನಾಡಿದರು.

## ೩೬. 'ತಾಳ್ಮೆಯುಳ್ಳವರು ಕೀಳ್ಮೆ ಪಡೆಯರು'

ಶ್ರೀನಿವಾಸ್ ಮತ್ತು ಲಕ್ಷ್ಮಿಗೆ ಉತ್ತರದಲ್ಲಿ ಹಿಮವತ್ಪರ್ವತವನ್ನು ನೋಡಿ ಬರಬೇಕೆಂಬ ಆಸೆ. ಪ್ರಪಂಚದಲ್ಲಿನ ಎಲ್ಲಾ ಬೆಟ್ಟಗಳಿಗಿಂತಲೂ ದೊಡ್ಡದಾಗಿ ಭಯಂಕರವಾದ ಗಾಂಭೀರ್ಯದೊಡನೆ ಸೃಷ್ಟಿಯ ದೃಶ್ಯಗಳಲ್ಲಿ ಒಂದಾಗಿ ಮಹೋನ್ನತವಾದ ವೈಭವದೊಂದಿಗೆ ಬೆಳಗುತ್ತ ನಿಲ್ಲುವ ದೇವತೆಗಳ ವಾಸಕ್ಕೆ ಯೋಗ್ಯವಾದ ಹಿಮಾಲಯವನ್ನು ಕಣ್ಣುತುಂಬ ನೋಡಿ ಬರಲು ಅವರಿಬ್ಬರಿಗೆ ಬಹಳ ಇಚ್ಛೆ. ಆದರೆ ಸಮಯ ಅನುಕೂಲವಾಗಲಿಲ್ಲ. ಆದರೂ ಆ ಬೆಟ್ಟದಲ್ಲಿ ಹುಟ್ಟಿ, ಜನ್ಮಸ್ಥಳಕ್ಕೆ ಯೋಗ್ಯವಾದ ಹಿರಿಮೆಯಿಂದ ಎರಡು ದಡಗಳಲ್ಲಿಯೂ ಅಲೆಗಳನ್ನು ಬೀರುತ್ತ, ಸಿಂಹವು ತನ್ನ ಕೇಶರಾಶಿಗಳನ್ನು ಕೆದರಿಗೊಂಡು ಹೋಗುವಂತೆಯೂ, ಮದದಿಂದ ತುಂಬಿದ ವೃಷಭದ ಧೋರಣೆಯಿಂದಲೂ, ಬೆಟ್ಟದ ಲಕ್ಷಣಗಳಿಂದ ಕೂಡಿದ ಮದಗಜದಂತೆಯೂ, ಗಂಭೀರವಾದ ಗತಿಯಿಂದ ರಾಜನು ಮೆರವಣಿಗೆಯಲ್ಲಿ ಹೊರಟಂತೆ, ಊರೂರಿಗೂ ಹೋಗಿ ಸಮುದ್ರದಲ್ಲಿ ಸೇರುವ ದೇವ ನದಿಯಾದ ಗಂಗೆಯನ್ನು ಕಂಡು ಅವರು ತಮ್ಮನ್ನು ತಾವೇ ಒಂದು ರೀತಿಯಲ್ಲಿ ತೃಪ್ತಿ ಪಡಿಸಿಕೊಂಡರು. "ಮಣ್ಣಿನ ಮನೆಯನ್ನು ಕಟ್ಟಿ, ಅದರಲ್ಲಿ ಅಡಿಗೆ ಮಾಡಿ ಉಂಡು ತೇಗಿ" ಬದುಕುವ ಕಿರಿಯರಂತೆ ಅಲ್ಪ ವಿಷಯಗಳಲ್ಲಿ ಆಯುಷ್ಯಗಳನ್ನು ಕಳೆದು ಸಣ್ಣತನದಲ್ಲಿ ಬಾಳಿ ಜೀವವನ್ನು ಕುಗ್ಗಿಸಿಕೊಂಡು—ನಾವು—ನಮ್ಮದು! ಎನ್ನುವ ವಿಚಾರಗಳಲ್ಲಿಯೇ ಬಿದ್ದಿರದೆ ಎಲ್ಲೆಯನ್ನು ದಾಟಿ, ಸಮುದ್ರ, ಗಾಳಿ, ಮೇಘ, ಸೂರ್ಯ, ಚಂದ್ರ ನಕ್ಷತ್ರಾದಿಗಳು ಮೊದಲಾದ ದೊಡ್ಡ ವಸ್ತುಗಳೊಡನೆ ಮನಸ್ಸನ್ನು ಬೆರೆಸಿ ಸಂಬಂಧ ಬೆಳೆಸುವುದೇ ಈ ಪ್ರಪಂಚದಲ್ಲಿ ಒಂದು ದೊಡ್ಡ ಭಾಗ್ಯವಲ್ಲವೆ! ಕಮಲಾಂಬಾಳ್ ಮೊದಲಾಗಿ ಅವರೆಲ್ಲರೂ ಒಂದುಗೂಡಿ ಎರಡು ದಿನಗಳಾದಮೇಲೆ ಗುಂಪು ಗುಂಪಾಗಿ ಗಂಗಾ ನದಿಯ ಬಳಿಯ ಮರಳಿನಲ್ಲಿ, ಬಿಳಿಯ ಬೆಳದಿಂಗಳಲ್ಲಿ, ಬಿಳಿ ಬಣ್ಣದ ಹುಗ್ಗಿಯೇ ಮೊದಲಾದ ಪದಾರ್ಥಗಳನ್ನು ತೆಗೆದುಕೊಂಡು ಹೋಗಿ ಹಬ್ಬದೂಟ ಮಾಡಿದಮೇಲೆ ಶಿರುಕುಳದ ಕಡೆ ಎಲ್ಲರೂ ಹೊರಟರು. ಉತ್ತರ

ಪ್ರದೇಶವನ್ನು ದಾಟಿ ದಕ್ಷಿಣಕ್ಕೆ ಬಂದ ಕೂಡಲೆ ತಾರಿನ ಮೂಲಕ ಎಲ್ಲವನ್ನು
ತಿಳಿದಿದ್ದ ಸಬ್‌ಮ್ಯಾಜಿಸ್ಟ್ರೇಟ್ ವೈದ್ಯನಾಥ ಅಯ್ಯರ್, ಅವರ ಬರುವಿ
ಯನ್ನು ಆತುರದಿಂದ ಇದಿರು ನೋಡುತ್ತಿದ್ದರು. ಅವರು ಬಂದು ಸೇರು
ವರಿಗಾದರೂ ಪ್ರಾಣದೊಂದಿಗಿರಬೇಕೆಂಬುದೊಂದೇ ಆ ಪ್ರಭುವಿನ ಕೋರಿಕೆ
ಪ್ರೇಮವೆಂಬುದು ಮಾದಕ ದ್ರವ್ಯದಂತೆ—ಹೀಗೆ ಆಸೆ ಹೆಚ್ಚಾಗಿದ್ದುದರಿಂ
ತನ್ನ ನೆನಪು ಕೂಡ ಇಲ್ಲದಂತೆ, ಕಂಡವರೆಲ್ಲರ ಬಳಿಯೂ "ಮುತ್ತುಸ್ವಾಮಿ
ಅಯ್ಯರ್ ಬರುತ್ತಾರೆ—" "ಮುತ್ತುಸ್ವಾಮಿ ಅಯ್ಯರ್ ಬರುತ್ತಾರೆ" ಎಂದ
ಹೇಳುತ್ತ ಹಿಂದಿನ ಕಾಲದಲ್ಲಿ ರಾಮನನ್ನು ಎದಿರು ನೋಡಿದ ಭರತನಂತೆ
ಸಡಗರ ಪಡುತ್ತಿದ್ದರು. ವೈದಿಕರನ್ನೂ ತಮ್ಮನ್ನೂ ಗೌರವದಿಂದ ಕಾಣ
ತ್ತಿದ್ದ ಊರವರನ್ನೂ ಒಡಗೊಂಡು ಊರಿಂದ ಒಂದು ಮೈಲಿಗೆ ಆಚೆಯೆ
ಪೂರ್ಣಕುಂಭಗಳು, ಮತ್ತು ಮೇಳ ವಾದ್ಯಗಳ ಸಹಿತವಾಗಿ ಹೋಗಿ ಅವರ
ಬರುವ ಸುದ್ದಿಯನ್ನು ಕೇಳಿ ಕಾದಿದ್ದರು.

ಶಿರುಕುಳವೆಲ್ಲ ಹೆಣ್ಣುಗಂಡು — ಎಲ್ಲರೂ ಆ ಸ್ಥಳದಲ್ಲಿ ಸೇರಿತ್ತು
ಮುತ್ತುಸ್ವಾಮಿ ಅಯ್ಯರವರೂ, ಸಚ್ಚಿದಾನಂದ ಸ್ವಾಮಿಗಳವರೂ ಎರಡ
ಪಲ್ಲಕ್ಕಿಗಳಲ್ಲಿ ಹೊರಟು ಬಂದರು. ಉಳಿದವರು ಕುದುರೆಗಾಡಿಯಲ್ಲಿ ಬಂದರು
ಮಂಗಳ ವಾದ್ಯಗಳು ಮೊಳಗಿದುವು. ಅಮ್ಮಯ್ಯಪ್ಪ ಪಿಳ್ಳೆಯವರ
ಮಾತ್ರ ಒಂದು ಕುದುರೆಯನ್ನು ಹತ್ತಿ ಬರುತ್ತಿದ್ದರು. ಆ ಕುದುರೆ ವಾದ್ಯ
ಘೋಷವನ್ನು ಕೇಳಿ, ಬೆದರಿ ಓಡಲು ಪಿಳ್ಳೆಯವರು ಅದರೊಂದಿಗೆ ಗೌರವ
ವಾಗಿ ಹೆಣಗಿ ನೋಡಲು ಅದು ಸಾಧ್ಯವಾಗದೆ ಕೂಗಿಕೊಂಡರು. ಅನಂತರ
ಅವರಿಗೂ ಅವರ ವಾಹನಕ್ಕೂ ಇದ್ದ ಘರ್ಷಣೆಯನ್ನು ಬಿಡಿಸಿ, ಇಬ್ಬರನ್ನೂ
ಬೇರ್ಪಡಿಸಿದರು. ವೈದ್ಯನಾಥ ಅಯ್ಯರಿಗೆ ಸಂತೋಷದ ಭರದಲ್ಲಿ ತಲೆ ಕಾಲ
ತಿಳಿಯಲಿಲ್ಲ. ಊರಲ್ಲೆಲ್ಲ ಅಲ್ಲೋಲ ಕಲ್ಲೋಲವಾಗಿತ್ತು. ಸ್ವಾಮಿಗಳ
ಬ್ರಹ್ಮಸ್ವರೂಪರಾಗಿ ವಿಜಯ ಮಾಡಿದ್ದರು. ಮುತ್ತುಸ್ವಾಮಿ ಅಯ್ಯರ್
ಮೊದಲಾದವರು ವೈದ್ಯನಾಥ ಅಯ್ಯರೇ ಮೊದಲಾದ ಎಲ್ಲರಿಗೂ ಪ್ರೇಮ
ಪೂರಿತವಾದ ಹಾರೈಕೆಗಳೊಂದಿಗೆ ಊರನ್ನು ಪ್ರವೇಶಿಸಿದರು. ಊರಿನ ಎಲ್ಲೆ
ಯನ್ನೇ ಮೆಟ್ಟಿದುದೇ ತಡ — 'ಭಂ' 'ಭಂ' ಎನ್ನುವ ಶಂಖಧ್ವನಿಗಳೂ

'ತಧೀಂ' 'ತಧೀಂ' ಎನ್ನುವ ಭೇರಿನಾದವೂ, 'ಜಂ' 'ಜಂ' ಎಂಬ ತಾಳಗಳ ಶಬ್ದವೂ 'ತಾಂ' 'ತಾಂ' ಎನ್ನುವ ಮದ್ದಳದ ವರಿಸೆಗಳೂ, ಮೇಳವಾದ್ಯದ ಸ್ವರವೂ, ವೇದಘೋಷವೂ, ಬ್ರಾಹ್ಮಣರ ಆಶೀರ್ವಚನಗಳೂ, ಆನಂದವಾದ ಉತ್ಸವದ ಸಂಭ್ರಮವನ್ನುಂಟುಮಾಡಿದುವು. ಈ ವಿಧದ ಉತ್ಸಾಹದೊಂದಿಗೆ ಊರನ್ನು ಸುತ್ತಿಬಂದು ತಮ್ಮ ತಮ್ಮ ಬಿಡದಿಗಳನ್ನು ಸೇರಿದರು.

ಜನರು ತುಂಬಿದ್ದ ಕಾಶಿಯನ್ನೂ, ಗಂಗೆಯನ್ನೂ ಮರೆತು ಶಿರುಕುಳ ವೆನ್ನುವ ಗ್ರಾಮದಲ್ಲಿ ಕೆಲವು ಕಾಲ ನಾವೂ ಇರೋಣ. ಆ ಊರಿನ ಅಗ್ರಹಾರ, ಗುಡಿ, ಕೊಳ, ನದಿ, ತೋಪುಗಳು, ದನದ ಹಿಂಡುಗಳು, ದೊಡ್ಡ ವೃಕ್ಷಗಳ ಸಾಲು, ಕಮ್ಮಾರರು, ಕಲ್ಲುಕುಟಿಗರು, ಅರಳಿಮರದ ಕಟ್ಟೆ—ಮುಂತಾದ ಗ್ರಾಮದ ಚಿಸ್ಹೆಗಳೆಲ್ಲವನ್ನೂ ನಾವು ಮನಸ್ಸಿನಲ್ಲಿ ಕಲ್ಪಿಸಿ ಕೊಂಡು, ನಮ್ಮ ಕಲ್ಪನಾಶಕ್ತಿಯಿಂದ ಶಿರುಕುಳವನ್ನು ಸೃಷ್ಟಿ ಮಾಡಿಕೊಂಡು ಅಲ್ಲಿ ಸ್ವಲ್ಪ ವಾಸಮಾಡೋಣ.

ಸ್ವಾಮಿಗಳು ಮುತ್ತುಸ್ವಾಮಿ ಅಯ್ಯರನ್ನು ಗೃಹಸ್ಥರನ್ನಾಗಿ ಸ್ಥಾಪಿಸಿ, ಆಶೀರ್ವಾದಮಾಡಿ ಕಾಶಿಗೆ ತೆರಳಿದರು. ಪೊನ್ನಮ್ಮಾಳ ಸ್ಥಿತಿ ಯನ್ನು ಮುತ್ತುಸ್ವಾಮಿ ಅಯ್ಯರರು ಕಂಡು ಪರಿತಾಪ ಹೊಂದಿ ಅವಳ ನಿಮಿತ್ತ ಭಗವಂತನನ್ನು ಪ್ರಾರ್ಥಿಸುತ್ತಾರೆ. ಅವಳಿಗೆ ಚಿತ್ತಸ್ವಾಧೀನವಾಗಿದೆ ಯೆಂದು ವದಂತಿ. ಏನಾದರೂ ಹಿಂದೆ ಇದ್ದುದಕ್ಕೆ ಈಗ ವಾಸಿ ಎನ್ನುವು ದಕ್ಕೆ ಸಂದೇಹವಿಲ್ಲ. ಕುಪ್ಪಿ ಅಜ್ಜಿ ಬಹಳ ದಿನಗಳ ವ್ಯಾಧಿಯಿಂದ ಕಷ್ಟ ಪಟ್ಟು ಸತ್ತು ಹೋದಳು. ಶಂಕರಿ ಅಮ್ಮಾಳ್ ಕಮಲಾಂಬಾಳಳ ಜೀವನದ ವಿಷಯಗಳನ್ನು ಕೇಳಿ ಮತ್ಸರಗೊಂಡು, ಬಾವಿಯಲ್ಲಿ ಬಿದ್ದು ಮಡಿದಳು. ಸುಬ್ಬಮ್ಮಾಳ್ ಗಂಡನನ್ನು ಕಳೆದುಕೊಂಡು ಉಪಾದಾನ ಮಾಡಿಕೊಂಡು ಹೊಟ್ಟೆ ಹೊರೆದು ಕೊಳ್ಳುತ್ತಿದ್ದಳು. ಅವಳಿಗೆ ಒಂದು ಕಣ್ಣು ಹೋಯಿತು. ಈಶ್ವರ ದೀಕ್ಷಿತರು ಕುಷ್ಟ ರೋಗದಿಂದ ನರಳುತ್ತಿದ್ದಾರೆ. ಮುತ್ತುಸ್ವಾಮಿ ಅಯ್ಯರ್—ಇವರಿಬ್ಬರೂ ಮಾಡಿದ ಉಪಕಾರಕ್ಕಾಗಿ ಅವರಿಗೆ ಕೃತಜ್ಞತೆ ಯನ್ನುಳ್ಳವರಾಗಿದ್ದಾರೆ. ಸುಬ್ಬಮ್ಮಾಳ್ ಜೀವನಕ್ಕಾಗಿ ಸ್ವಲ್ಪ ಭೂಮಿಯನ್ನು ದತ್ತಿಕೊಟ್ಟರು. ದೀಕ್ಷಿತರಿಗೂ ಆಗಾಗ್ಗೆ ಸಮಾಧಾನ ಹೇಳುತ್ತಾ ಇದ್ದರು.

"ದುಷ್ಟರನ್ನು ಹೀಗೆ ಆದರಿಸಬಹುದೇ?" ಎಂದರೆ ಅವರು "ಒಳ್ಳೆಯದಕ್ಕೆ ಒಳ್ಳೆಯದು ಮಾಡಬಹುದು—ಕೆಟ್ಟದಕ್ಕೆ ಕೆಟ್ಟದು ಮಾಡಬಾರದು. ಅಲ್ಲದೆ ನಮಗೆ ಕಷ್ಟವನ್ನು ಕೊಡುವವರು ನಮಗೆ ದೊಡ್ಡ ಉಪಕಾರಿಗಳು. ಏಕೆಂದರೆ ದುಃಖದಂತಹ ಹಿತವಾದ ಸ್ನೇಹಿತ ಯಾರೂ ಇಲ್ಲ. ನನಗೆ ಮೇಲೆ ಮೇಲೆ ದುಃಖಗಳು ಸಂಭವಿಸದಿದ್ದರೆ ನಾನು ಈಗ ಅನುಭವಿಸುವ ಬ್ರಹ್ಮಾನಂದ ವನ್ನು ಪಡೆಯಲಾಗುತ್ತಿರಲಿಲ್ಲ" ಎಂದು ಉತ್ತರ ಕೊಡುತ್ತಾರೆ.

ಯಥಾರ್ಥವಾಗಿಯೇ ಇಹಲೋಕದ ಸುಖಗಳಂತೆ ನಮಗೆ ವಿರೋಧಿ ಗಳು ಬೇರೆ ಯಾರೂ ಇಲ್ಲ. ನಮ್ಮ ನಿಜ ಸ್ವರೂಪವನ್ನು ನಮ್ಮಿಂದ ಮರೆ ಮಾಚಿ,ನಾಳೆ ಬರುವ ಭತ್ತ ರಾಶಿಗಿಂತಲೂ ಇಂದಿರುವ ಹಿಡಿಕಾಳು ದೊಡ್ಡದು. ಎಂದು—ಉಂಡು ತಿಂದು ವ್ಯರ್ಥ ಕಾಲಹರಣ ಮಾಡುವ ಕೆಲವು ಮಾನವ ರಂತೆ ನಾವು ನಾಳೆ ಪಡೆಯಬಹುದಾದ ಬ್ರಹ್ಮಾನಂದ ಸುಖವನ್ನು ಮರೆತು ಇಂದಿರುವ ಅಲ್ಪ ಸುಖಗಳಲ್ಲಿ ಮಗ್ನರಾಗಿ, ಮೋಹಗೊಳ್ಳುವಂತೆ, ನಮ್ಮನ್ನು ಮಾಡುವ ಅಲ್ಪವೂ, ಅನಿತ್ಯವೂ, ಪ್ರಯೋಜನವಿಲ್ಲದುದೂ, ತಮೋ ಗುಣಕ್ಕೆ ಸಂಬಂಧಿಸಿದುದೂ, ದುಃಖಕರವೂ, ಆಸುರಗುಣ ಸ್ವರೂಪವುಳ್ಳದೂ, ನಮಗೂ ಹೆರರಿಗೂ ಜನನ ಮರಣ ಸಂಸಾರವಾದ ಅನರ್ಥ ಪರಂಪರೆಗೆ ಹೇತುವನ್ನೂ ಉಳ್ಳ ಈ ಬಗೆಯ ಸುಖಗಳು ಜ್ಞಾನಿಗಳು ಆಶಿಸ ತಕ್ಕುದಲ್ಲ. "ಇಲ್ಲಿ ಇಲ್ಲದವ ರಿಗೆ ಅಲ್ಲಿ ಉಂಟು" ಎಂಬಂತೆ ಅನೇಕರಿಗೆ ಕಷ್ಟವೇ. ಒಂದು ದೊಡ್ಡ ಮೋಕ್ಷಸಾಧನೆಯಾಗಿರುವುದರಿಂದ, ಧನಿಕನ ಧನವನ್ನೂ, ರೂಪವಂತನ ರೂಪವನ್ನೂ ಭೋಗದಲ್ಲಿ ಉಲ್ಲಾಸವಾಗಿ ಹಿಗ್ಗುವವರ ಭೋಗವನ್ನೂ ಕಂಡು ನಾವು ಮತ್ಸರ ಗೊಳ್ಳಬಾರದು. ಅವಕ್ಕೆ ಅಧೀನರಾಗಿರುವವರನ್ನು ಕನಿಕರಿಸಿ, ದುಃಖದ ರೂಪವಾಗಿ ಬರುವ ಭಗವಂತನ ಅನುಗ್ರಹವನ್ನು ಪಡೆದವ ರನ್ನು ಕಂಡು ಕೈಮುಗಿಯುವುದೇ ರಹಸ್ಯವಾದ ತತ್ತ್ವಮಾರ್ಗ. ಈ ಮಾತಿರಲಿ.

ಶ್ರೀನಿವಾಸನೂ, ಲಕ್ಷ್ಮಿಯೂ ಸೌಖ್ಯವಾಗಿಯೇ ಇದ್ದಾರೆ. ಅವರ ಸುಖ ಕೀಳಾದ ಇಂದ್ರಿಯ ಸುಖವಲ್ಲ. ಉದಾಹರಣೆಗಾಗಿ ಒಂದು ದಿನ ಶಿರುಕುಳದಲ್ಲಿದ್ದಾಗ ಸಂಜೆ ಶ್ರೀನಿವಾಸನು ಹಿತ್ತಲು ಕಡೆಯಿದ್ದ ತೋಪಿಗೆ

ಹೋದನು. ಅಸ್ತಮಿಸಿದ ವೇಳೆಯಾದುದರಿಂದ ಸೂರ್ಯನ ಮಂದವಾದ ಕಿರಣಗಳು ಪ್ರಸರಿಸಿ ಎಲ್ಲೆಲ್ಲಿಯೂ ಹೊಂಬೆಳಕಾಗಿತ್ತು. ಶ್ರೀನಿವಾಸನು ಆ ಸಂಧ್ಯಾಕಾಲದ ಆನಂದವಾದ ಶಾಂತಿಯನ್ನು ಕಂಡು ಸಂತೋಷಭರಿತ ನಾದನು. ಅಲ್ಲಿ ಒಂದು ಸುಂದರವಾದ ಅರಳಿಮರದಲ್ಲಿ ದಿವ್ಯವಾದ ಮಲ್ಲಿಗೆ ಬಳ್ಳಿಯೊಂದು ಪ್ರೀತಿಯಿಂದ ಸುತ್ತಿಕೊಂಡು ಲೆಕ್ಕವಿಲ್ಲದಷ್ಟು ಹೂಗಳನ್ನು ಹೊತ್ತು ವಿರಾಜಿಸುತ್ತಿತ್ತು. ಅದನ್ನು ಕಂಡು "ಪಂಡಿತ, ಬಳ್ಳಿ, ಸ್ತ್ರೀ" —ಈ ಮೂವರೂ ಆಶ್ರಯರಹಿತರಾಗಿ ತನಿಯಾಗಿ ಬಾಳಲಾರರು." ಎಂಬ ವಾಕ್ಯ ಜ್ಞಾಪಕಕ್ಕೆ ಬರಲು ಆ ಅರಳಿಮರದ ಗಾಂಭೀರ್ಯವನ್ನೂ, ಯೌವನ ವನ್ನೂ, ಕಾಂತಿಯನ್ನೂ, ಆದರವನ್ನೂ, ಚೆಲುವನ್ನೂ, ಆ ಹೂಬಳ್ಳಿಯ ನಮ್ರತೆಯನ್ನೂ, ಎಳೆತನವನ್ನೂ, ಮೃದುತ್ವವನ್ನೂ, ಹೂ ಸಂಪತ್ತನ್ನೂ, ಮನೋಜ್ಞವಾದ ಸೌಂದರ್ಯವನ್ನೂ, ಆ ಅರಳಿಮರವನ್ನೂ ನಂಬಿ ಪ್ರೀತಿಸಿ, ಆಲಂಗಿಸಿ, ಅಲಂಕಾರವಾಗಿ ನಿಂತ ಆ ದೃಶ್ಯವನ್ನೂ ಕಂಡು ಪರವಶನಾಗಿ ನಿಂತನು. ಲಕ್ಷ್ಮಿ ಅವನನ್ನು ಅಲ್ಲಿ ಇಲ್ಲಿ ಹುಡುಕಿ ಕಾಣದೆ ತೋಪಿನ ಕಡೆ ಬರಲು ಅವನು ಪ್ರಜ್ಞೆ ಇಲ್ಲದೆ ನಿಂತಿರುವುದನ್ನು ಕಂಡು ಸದ್ದುಮಾಡದೆ, ಹತ್ತಿರ ಹೋಗಿ ಆ ಹೂವಿನ ಬಳ್ಳಿ ಅರಳಿಮರವನ್ನು ತಬ್ಬಿ ನಿಂತುಕೊಂಡಿರು ವಂತೆ ತಾನೂ ಪ್ರೀತಿಯಿಂದ ತಬ್ಬಿಕೊಂಡಳು. ತಬ್ಬಿಕೊಂಡ ಕೂಡಲೆ ಶ್ರೀನಿವಾಸನು ಬೆಚ್ಚಿಬಿದ್ದು ತಿರುಗಿ ಅವಳಿಗೆ ಒಂದು ಮುದ್ದನ್ನು ಕೊಟ್ಟನು. ಲಕ್ಷ್ಮಿ ಅರಳಿಮರವನ್ನು ದೃಷ್ಟಿಸಿ ನೋಡಿ, ತನ್ನ ನಾಯಕನನ್ನೂ ನೋಡಿ ಮುಗುಳ್ನಗೆ ನಕ್ಕಳು. ಶ್ರೀನಿವಾಸನೂ ಹೂ ಬಳ್ಳಿಯನ್ನು ನೋಡಿ, ತನ್ನ ನಾಯಕಿಯನ್ನು ನೋಡಿ ಮುಗುಳ್ನಗೆ ನಕ್ಕನು.

ಹಾಗೆ ಅವರು ನಿಂತಿರಲು, ಪಟೀರೆಂದು ಹಲವು ಮಲ್ಲಿಗೆ ಮೊಗ್ಗುಗಳು ಕಣ್ಣುತೆರೆದು ಅರಳಿದುವು. ಅವು ಅರಳಿದುದನ್ನು ಕಂಡು ಶ್ರೀನಿವಾಸನು, "ನಿನ್ನ ನೋಡಿ ಆ ಬಳ್ಳಿಗೆ ಏನು ಆನಂದ ನೋಡು!" ಎಂದು ಪರಿಹಾಸ್ಯ ಮಾಡಿದನು. ಅಲ್ಲಿಂದ ಸ್ವಲ್ಪಸರಿದರು. ಒಂದು ದೊಡ್ಡ ಆಲದ ಮರವನ್ನು ಅವರು ಕಂಡರು. ಅದು ಆಕಾಶದಲ್ಲಿ ಎದ್ದು, ಸುತ್ತಲೂ ಹರಡಿಕೊಂಡು, ಬಹು ದೊಡ್ಡ ವಿಸ್ತೀರ್ಣವನ್ನು ಉಳ್ಳದುದಾಗಿ, ಅನೇಕ ಬಿಳಲುಗಳನ್ನು

ಕೆಳಗೆ ಬಿಟ್ಟು, ಅನೇಕ ಸ್ತಂಭಗಳೂ, ಮಂಟಪಗಳೂ ಇರುವ ಒಂದು ಆಲಯದಂತೆ ಶೋಭಿಸಿ, ಪರಿಶುದ್ಧ ಗಾಳಿ ಬೀಸುತ್ತ ಅಲಂಕರಿಸಿದ ರಥದ ಶಿಖರದಂತೆ ಶಿಖರವನ್ನುಳ್ಳದ್ದಾಗಿ, ಅರಸನು ಕುದುರೆಗಳನ್ನು ಕಟ್ಟಿ ರಥದ ಮೇಲೆ ಕುಳಿತು ದೊಡ್ಡ ಸೈನ್ಯದೊಡನೆ ಬಂದು ಬಿಡಾರ ಮಾಡಲು ಯೋಗ್ಯವಾದ ರೀತಿಯಲ್ಲಿ ತಂಪಾದ ನೆರಳನ್ನು ಹರಡಿ ವಿರಾಜಿಸುತ್ತಿತ್ತು. ಸೂರ್ಯನು ಅಸ್ತಮಿಸುವ ತರುಣವಾದುದರಿಂದ ಅವನ ಕೆಂಪು ಕಿರಣಗಳು ಆ ಆಲದಮರದಲ್ಲಿ ಹೊಕ್ಕು ರತ್ನ ದೀಪಗಳನ್ನು ಹೊತ್ತಿಸಿದಂತೆ ಕಾಣಲು, ಆ ಮರದ ಗಾಂಭೀರ್ಯವನ್ನೂ, ಬಳ್ಳಿಗಳು ಸಾಲಾಗಿ ನಿಂತಿದ್ದ ಸೊಬಗನ್ನೂ, ಸೂರ್ಯನ ರಶ್ಮಿಯನ್ನೂ, ನೆಲಿದು ಬಿದ್ದ ಮಂದವಾದ ನೆರಳನ್ನೂ ಆ ಆಲಯದ ಮಂಟಪಗಳನ್ನೂ, ಸ್ತಂಭಗಳನ್ನೂ, ಶಿಖರವನ್ನೂ, ದೀಪಗಳನ್ನೂ ಕಂಡು, ಇಬ್ಬರೂ ಒಬ್ಬರನ್ನೊಬ್ಬರು ಕೇಳದೆಯೇ ಏಕಕಾಲದಲ್ಲಿ ಆ ಮರದಡಿಯಲ್ಲಿ ತಲೆಯನ್ನು ಬಗ್ಗಿಸಿ ಕೈ ಮುಗಿದರು. ಕೈ ಮುಗಿದು ಪರಸ್ಪರ ಪ್ರೀತಿಯಿಂದ ಆಲಿಂಗನ ಮಾಡಿಕೊಂಡು ಮೌನವಾಗಿ ಮಾತಾಡಿಕೊಂಡು ಆನಂದಿಸಿದರು.

ಇವರು ವೇಳೆಯನ್ನು ಹೀಗೆ ಕಳೆಯಲು ಮಗು ನಟರಾಜನು ಸುಂದರನ ಜೊತೆಯಲ್ಲಿ ಸೇರಿದನು. ಅವರಿಬ್ಬರೂ ನದಿಯ ದಡ, ತೋಪು, ತೊರೆ, ಗುಡಿ, ಕೊಳ, ಮೊದಲಾದ ಸ್ಥಳಗಳೆಲ್ಲೆಲ್ಲ ಓಡಿ ಆಟವಾಡುತ್ತಾರೆ. ಆಟದ ಜೊತೆಗೆ ಜಗಳವನ್ನೂ ಆಡುವುದುಂಟು. ಜಗಳವಾಡಿದರೂ ಮರುಕ್ಷಣವೇ ರಾಜಿಯಾಗಿಬಿಡುವುದು. ಒಂದು ದಿನ ಅವರಿಬ್ಬರೂ ಒಂದು ಚಿನ್ನಿಕೋಲಿಗಾಗಿ ಜಗಳವಾಡಿಬಿಟ್ಟರು. ಕೆಲವು ನಿಮಿಷಗಳಾದಮೇಲೆ ನಟರಾಜನು, ಒಂದು ಬೇಲದ ಹಣ್ಣನ್ನು ತೆಗೆದುಕೊಂಡು ಸುಂದರನಿರುವ ಜಾಗಕ್ಕೆ ಬಂದನು. ಬಂದು "ನಮ್ಮಪ್ಪ, ನನಗೆ ಬೇಲದ ಹಣ್ಣನ್ನು ತಂದಿದ್ದಾರೆ. ನಿನಗೆ ಕೊಡುತ್ತೇನೆಯೆ?" ಎಂದನು. ಅದಕ್ಕೆ ಸುಂದರನು "ನಾನು ನಮ್ಮ ಮನೆಯಲ್ಲಿ ಒಂದು ದಪ್ಪವಾದ ಬೇಲದ ಹಣ್ಣು ಇಟ್ಟಿದ್ದೇನೆ. ಅದು ನಿನಗೆ ಕೊಡುತ್ತೇನೆಯೆ? ನೀನು ಕೊಟ್ಟರೆ ನಾನು ಕೊಡುತ್ತೇನೆ" ಎನ್ನಲು, ನಟರಾಜನ್, "ನೀನೇ ನನ್ನನ್ನು ಹೊಡೆದೆಯಲ್ಲಾ. ಇನ್ನು ಮುಂದೆ ಹೊಡೆಯುವುದಿಲ್ಲವೆಂದು ಹೇಳು, ಕೊಡುತ್ತೇನೆ." ಎಂದನು ಸುಂದರಂ "ಇನ್ನು

ಮುಂದೆ ಹೊಡೆಯುವುದಿಲ್ಲ" ಎಂದು ಹೇಳಲು ನಟರಾಜನ್ "ಇಲ್ಲವೆಂದು ಕೆನ್ನೆಯಲ್ಲಿ ಬಾರಿಸಿಕೊ" ಎಂದನು. ಸುಂದರಂ ಹಾಗೆಯೇ ಮಾಡಲು ನಟರಾಜನ್ "ಕೆನ್ನೆಯಲ್ಲಿ ಬಾರಿಸಿಕೊಂಡರೆ ಸಾಕೋ? ಗುಂಜಿ ಹಾಕಬೇಕು. ಆಗಲೇ ಕೊಡುತ್ತೇನೆ." ಎಂದು ಹೇಳಿದನು. ಪಾಪ! ಸುಂದರಂ ಗುಂಜಿಯನ್ನೂ ಹಾಕಲು ನಟರಾಜನ್ ಹಣ್ಣನ್ನು ಅರ್ಧಮಾಡಿ, ಒಂದು ಭಾಗವನ್ನು ಅವನಿಗೆ ಕೊಟ್ಟನು. ಕೂಡಲೆ ಇಬ್ಬರೂ ಬಹಳ ಸ್ನೇಹಿತರಾಗಿ ಬಿಟ್ಟರು. ಹೀಗೆ ಇವರು ಆಟವಾಡುತ್ತಿರಲು ರಾಮಶೇಷಯ್ಯರಿಗೆ ನಟರಾಜನನ್ನು ಬಿಟ್ಟು ಅರ್ಧ ಘಳಿಗೆಯೂ ಅಗಲಲು ಮನಸ್ಸು ಬರಲಿಲ್ಲ. ಆದುದರಿಂದ ಅವರು ಹೋಗುವ ಸ್ಥಳಕ್ಕೆಲ್ಲಾ ಜೊತೆಯಲ್ಲಿಯೇ ತಾವೂ ತಿರುಗುತ್ತಿದ್ದರು. ಶಿರುಕುಳದಲ್ಲಿ ಯೋಗ್ಯವಾದ ಮನೆ, ಭೂಮಿ ಕೊಂಡು, ಮಗು ದೊರೆಸ್ವಾಮಿ (ನಟರಾಜನ್) ಹೆಸರಿಗೆ ಬರೆದಿಟ್ಟು ಬಿಟ್ಟರು.

ಅಮ್ಮಯ್ಯಪ್ಪ ಪಿಳ್ಳೆಯವರು ಶಿರುಕುಳದಲ್ಲಿಯೇ ವಾಸಮಾಡಿ ಮುತ್ತುಸ್ವಾಮಿ ಅಯ್ಯರಿಗೆ ಶಿಷ್ಯರಾದರು. ಹೊತ್ತು ಹೋಗದಿದ್ದರೆ ಆ ಊರಿನವರೆಲ್ಲರೂ ಅವರನ್ನು ಸುತ್ತಿಕೊಳ್ಳುವರು. ಆಡುಸಾಪಟ್ಟಿಯ ಮಹತ್ವವನ್ನು ಅವರು ಹೇಳಲು ಆರಂಭಿಸಿದರೆ ಆರು ದಿನಗಳಾದರೂ ದಣಿಯಲಾರರು. ದಸ್ತಾವೇಜುಗಳಲ್ಲಿಯೂ ಸಹ "ಈ ಭೂಮಂಡಲಕ್ಕೇ ಒಂದು ತಿಲಕಪ್ರಾಯವಾಗಿರುವ ಆಡುಸಾಪಟ್ಟಿಯಲ್ಲಿ ಅವತರಿಸಿದ ದೇವತೆಗಳು ಹೊಗಳುವ ಅಷ್ಟಾವಧಾನ ಮಹಾವಿದ್ವಾನ್ ಅಮ್ಮಯ್ಯಪ್ಪ ಪಿಳ್ಳೆಯವರು" ಎಂದೇ ಕೈಬರೆಹವಿತ್ತು. ಆಡುಸಾಪಟ್ಟಿಗೆ ಕುರಿಗೆ ಮೋಕ್ಷ ಕೊಟ್ಟ ಸ್ಥಳ—ಎಂದು ಅರ್ಥವಂತೆ. ಗಜೇಂದ್ರ ಆಳ್ವಾರಿಗೆ ಸ್ಪರ್ಧಿಯಾಗಿ ಅಜೇಂದ್ರ ಆಳ್ವಾರ್ ಒಬ್ಬರಿದ್ದರು. ಅವರಿಗೆ ಆಡುಸಾಪಟ್ಟಿಯಲ್ಲಿ ಮೋಕ್ಷವಂತೆ. ಹೀಗೆ ಕೆಲವು ಪುರಾಣಗಳನ್ನು ವಿಸ್ತಾರವಾಗಿ ಮಾತನಾಡುತ್ತ ಅಮ್ಮಯ್ಯಪ್ಪ ಪಿಳ್ಳೆಯವರು ಕಾಲವನ್ನು ಕಳೆಯುತ್ತಾರೆ.

ಪೇಯಾಂಡಿ ದೇವನು ತನ್ನ ಊರಿಗೆ ಹೋಗಿ ಅಲ್ಲಿ ರಾಜ್ಯ ಪರಿಪಾಲನೆ ಮಾಡುತ್ತಿದ್ದಾನೆ. ಬೆಳಗಾಗುತ್ತಲೆ ಎದ್ದು ಮುತ್ತುಸ್ವಾಮಿ ಅಯ್ಯರವರು ಇರುವ ದಿಕ್ಕಿಗೆ ತಿರುಗಿಕೊಂಡು ಒಂದುಸಲ ನಮಸ್ಕಾರ ಮಾಡಿದ ಮೇಲೆಯೇ

ಇತರ ಕಾರ್ಯಗಳಲ್ಲಿ ಪ್ರವೇಶಿಸುವನು. ಆ ತಿರುಮಂಗೈ ಆಳ್ವಾರಿಗೂ ಮುತ್ತುಸ್ವಾಮಿ ಅಯ್ಯರ್ ಯಾವುದೋ ಅನುಗ್ರಹ ಮಾಡಿರುವುದರಿಂದ ಅವರಲ್ಲಿ ಅವನಿಗೆ ದೇವತಾ ವಿಶ್ವಾಸ. ಅವನು ಕದಿಯುವುದನ್ನು ಪೂರ್ತಿಯಾಗಿ ಬಿಟ್ಟುಬಿಟ್ಟನು.

ವೈದ್ಯನಾಥ ಅಯ್ಯರವರು ಕೆಲಸಕ್ಕೆ ರಾಜೀನಾಮೆ ಕೊಟ್ಟು ಶಿರುಕುಳ ದಲ್ಲಿ ವಾಸಮಾಡಲು ಏರ್ಪಾಡುಮಾಡಿ ಮುತ್ತುಸ್ವಾಮಿ ಅಯ್ಯರವರಲ್ಲಿ ಉಪದೇಶವನ್ನು ಹೊಂದಿ ಶಿವರಾಜ ಯೋಗಾಭ್ಯಾಸ ಮಾಡುತ್ತಿದ್ದಾರೆ. ಒಳ್ಳೆಯ ಹೃದಯವುಳ್ಳವರಾದುದರಿಂದ ಅವರಿಗೆ ಒಳ್ಳೆಯ ಅನುಭವಗಳು ಶೀಘ್ರದಲ್ಲಿ ಸಿದ್ಧಿಸುವುವೆಂದು ನಾನು ಭಾವಿಸುತ್ತೇನೆ. ಮುತ್ತುಸ್ವಾಮಿ ಅಯ್ಯರವರ ಕುಟುಂಬಗಳು ಅವರ ಮೇಲ್ವಿಚಾರಣೆಯಲ್ಲಿಯೇ ಇವೆ.

ಕಮಲಾಂಬಾಳ್ ಸಕಲ ವಿಧ ಭಾಗ್ಯವನ್ನೂ ಮತ್ತೆ ಪಡೆದೂ ರಾಮ ನಾಮ ಸ್ಮರಣೆಯನ್ನು ಬಿಡಲಿಲ್ಲ. ದಿನದಿನಕ್ಕೂ ಅವಳ ಭಕ್ತಿ ಹೆಚ್ಚುತ್ತಲೇ ಇದೆ. ಆ ಭಕ್ತಿ ವಿಶೇಷದಿಂದ ಅವಳಿಗೆ ಪ್ರಪಂಚವೆಲ್ಲ ರಾಮ ಸ್ವರೂಪವಾ ಗಿಯೇ ತೋರಿತು. ಮೇಘ, ಸೂರ್ಯ, ಚಂದ್ರ, ನಕ್ಷತ್ರಾದಿಗಳು ಮೊದಲು ಗೊಂಡು ಮರ, ಪಟ್ಟಿ, ಮನುಷ್ಯನ ಪರ್ಯಂತ ಸಕಲವೂ ಅವಳಿಗೆ ಆನಂದ ವಾದ ಶ್ರೀರಾಮಮಯವಾಗಿಯೇ ತೋರಲು, "ಎಲ್ಲವೂ ನಿನ್ನದೇ, ಎಲ್ಲ ನಿನ್ನ ಕಾರ್ಯವೇ, ಎಲ್ಲೆಲ್ಲಿಯೂ ವ್ಯಾಪಿಸಿ ನೀನಿರುವೆ." ಎಂದು ಸದಾ ಆ ರಾಮನನ್ನೇ ಧ್ಯಾನಿಸುತ್ತ ತನಗೆಂದು ಯಾವುದೂ ಇಲ್ಲದೆ, ಅನ್ನ ಆಹಾರ ಮೊದಲಾದು ವನ್ನು ಸೇವಿಸುವಾಗ ಅದರಲ್ಲಿಯೂ ಅವನೇ ಇರುವುದರಿಂದ ಅವನಿಗೇ ಅರ್ಪಿಸಿ, "ಪ್ರಪಂಚವೆಲ್ಲಾ ನಿನ್ನ ನಾಮ ಸ್ವರೂಪವೇ!" ಎಂದು ಅಂತರಂಗ ದಲ್ಲಿ ಆನಂದಗೊಂಡು, ಉಕ್ಕಿ ಏಳುವ ರಾಗದ್ವೇಷಾದಿಗಳನ್ನು ನಿಗ್ರಹಿಸಿ, ನೋಡುವುದರಲ್ಲೆಲ್ಲ ರಾಮನನ್ನೇ ನೋಡಿ, ಅವನೊಬ್ಬನೇ ಇರುವನೆಂದು ಮನಗಂಡು ಆ ಬ್ರಹ್ಮಾನಂದಾನುಭವದಲ್ಲಿ ಕಾಲವನ್ನು ಕಳೆದಳು. ಹಾಡುವು ದೆಲ್ಲ ರಾಮನ ಹಾಡು; ಆಡುವುದೆಲ್ಲ ರಾಮನ ಮಾತು; ಓದುವುದೆಲ್ಲ ರಾಮನ ದಿವ್ಯನಾಮ.

ರಾಘವನನ್ನು ಕುರಿತು ಹಾಡಿ, ಹಿಗ್ಗಿ, ಹಲವು ವಿಧದಲ್ಲಿ ಅವನ ನಾಮವನ್ನು ಉಚ್ಚರಿಸಿ, ಕಣ್ಣೀರು ಸುರಿಸುತ್ತ, ನಗುತ್ತ, ನಲಿಯುತ್ತ ತನ್ನ ಕಾಲವನ್ನು ಕಳೆದಳು. ತನ್ನ ಗಂಡನನ್ನು ಕಂಡರೆ ಶ್ರೀರಾಮನನ್ನು ಪ್ರತ್ಯಕ್ಷವಾಗಿ ಕಂಡಂತೆ ನೆನಪು. ಅವರೊಂದಿಗೆ ಮಾತನಾಡಿದರೂ ರಾಮನೊಂದಿಗೆ ಮಾತನಾಡಿದಂತೆ ಭಾವನೆ. ಅವರ ಬಳಿ ಇದ್ದರೆ ಶ್ರೀರಾಮನ ಬಳಿ ಇರುವಂತೆ ಸಂತೋಷ. ಅವರ ನಡಿಗೆಯನ್ನೂ, ಅವರ ನಗೆಯನ್ನೂ ಕಾಣುವಾಗ ರಾಮನನ್ನು ಕಂಡ ಸೀತೆಯಂತೆ ತನ್ನೊಳಗೆ ಹಾಡಿಕೊಳ್ಳುತ್ತ ಆನಂದಿಸಿ, ಸ್ತುತಿಸಿ, ರಾಮಧ್ಯಾನಾನಂದ ವೈಭವದಲ್ಲಿ ಮಗ್ನಳಾಗಿದ್ದಾಳೆ.

ಕಮಲಾಂಬಾಳಳ ಭಕ್ತಿಯ ವೈಭವವೇ ಹೀಗಿರಬೇಕಾದರೆ ಮುತ್ತುಸ್ವಾಮಿ ಅಯ್ಯರವರ ಜ್ಞಾನದ ವೈಭವವನ್ನು ಹೇಳಲೂ ಬೇಕೆ?

ಯಥಾಕಾಶಸ್ಥಿತೋ ನಿತ್ಯಂ ವಾಯುಸ್ಸರ್ವತ್ರಗೋಮಹಾನ್
ತಥಾ ಸರ್ವಾಣಿ ಭೂತಾನಿ ಮತ್ ಸ್ಥಾನೀತ್ಯುಪಧಾರಯ

"ಸರ್ವ ವ್ಯಾಪಕವಾಗಿ ತುಂಬಿರುವ ವಾಯು ಯಾವಾಗಲೂ ಹೇಗೆ ಆಕಾಶದಲ್ಲಿ ಇರುವುದೊ, ಹಾಗೆಯೇ ಸಮಸ್ತ ಭೂತಗಳೂ ನನ್ನಲ್ಲಿರುವುದಾಗಿ ತಿಳಿದುಕೋ" ಎಂದೂ, 'ಲೋಕವೆಲ್ಲವೂ ನಾನೇ, ಹಲವಾಗಿ ಕಾಣುವ ಪ್ರಾಣಗಳೂ ನಾನೇ — ಸ್ವಲ್ಪವೂ ಭೇದವಿಲ್ಲ'ವೆಂದೂ, ಮಾತು ಕೊಟ್ಟಿರುವ ಭಗವಂತನ ಮಹಾವಾಕ್ಯವನ್ನು ವಿಚಾರಮಾಡಿ, ಗುರುವಿನ ಉಪದೇಶದ ಮಹಿಮೆಯಿಂದ ಪಂಚಕೋಶದ ತೆರೆಗಳನ್ನು ಭೇದಿಸಿ, ಪೂರ್ಣವೂ, ಏಕವೂ ಅಚಲವೂ, ಅಶರೀರಿಯೂ, ಅನಾದಿಯೂ, ಆಪ್ತವೂ, ನಿತ್ಯ, ನಿರ್ಗುಣ, ನಿರಾಮಯ, ನಿರಂಜನ, ನಿರಾಲಂಬ, ನಿರ್ವಿಷಯವೂ ಆಗಿ ಬೆಳಗಿ ನಿಲ್ಲುವ ಸಚ್ಚಿದಾನಂದ ಸ್ವರೂಪವಾದ ಆತ್ಮನನ್ನು ದರ್ಶನಮಾಡಿ, ಅಖಂಡ ಬ್ರಹ್ಮಾಕಾರ ವಿಶ್ವರೂಪ ವೃತ್ತಿಯಲ್ಲಿ ಪ್ರವೇಶಿಸಿ ತ್ರಿಪುಟಿ ರಹಿತವಾದ ಬ್ರಹ್ಮಾನಂದದಲ್ಲಿ ಮುಳುಗಿ ಆತ್ಮಕ್ರೀಡೆಯಲ್ಲಿ ಲೋಲುಪ್ತನಾಗಿ, ಸಮಾಧಿ ನಿಷ್ಠೆಯನ್ನು ನಿರ್ವಹಿಸಿ, ಸಮಾಧಿ ತೀರಿದ ವೇಳೆಗಳಲ್ಲಿ ಭಗವಂತನ ಮಾಯಾ ವಿಭೂತಿಯನ್ನು ಕಂಡು, ಅಚ್ಚರಿಗೊಂಡು, ಪ್ರಕಾಶದಲ್ಲಿ, ಕತ್ತಲೆಯಲ್ಲಿ, ಬಯಲಿನಲ್ಲಿ, ಮಣ್ಣಿನಲ್ಲಿ, ನೀರಿನಲ್ಲಿ, ಬೆಟ್ಟದಲ್ಲಿ, ಸಮುದ್ರದಲ್ಲಿ, ದಡದಲ್ಲಿ,

ಮರದ ಎಲೆಯಲ್ಲಿ, ಹಣ್ಣಿನಲ್ಲಿ, ಗಾಳಿಯಲ್ಲಿ, ಬಲ್ಲಿದರಲ್ಲಿ, ಬಡವರಲ್ಲಿ, ನಿರ್ಗತಿಕರಲ್ಲಿ — ಜಗತ್ತಿನಲ್ಲೆಲ್ಲೆಲ್ಲೂ "ನೀನಲ್ಲದೆ ಬೇರೊಂದಿಲ್ಲ" ಎಂದು ತಿಳಿದು, ಲೋಕ ವ್ಯವಹಾರಗಳಲ್ಲಿ ಪ್ರವೇಶಿಸಿದಾಗ, ಹಿಂದಿನ ನಿಕಟ ಸಂಬಂಧ ಗಳನ್ನು ಮರೆಯದೆ, ಹೊಸದಾಗಿ ಮದುವೆಯಾದ ನಾರಿಯರಂತೆ ಉತ್ಸಾಹ ಗೊಂಡು ಮುತ್ತುಸ್ವಾಮಿ ಅಯ್ಯರ್ ಜ್ಞಾನಾನಂದ ವೈಭವಸಾಗರದಲ್ಲಿ ಮುಳುಗಿದ್ದರು.

---

# ಹಿನ್ನುಡಿ

ಈ ಸುಳ್ಳು ಕಥೆಯನ್ನು ಇದುವರೆಗೂ ತಾಳ್ಮೆಯಿಂದ ಓದಿದ ಸ್ನೇಹಿತರೇ ನಿಮ್ಮ ದೊಡ್ಡ ತಾಳ್ಮೆಗೆ ನನ್ನ ಅನೇಕ ವಂದನೆಗಳು.

ಈ ಕಥೆಯು ಬಹು ಭಾಗ ಹಲವು ವಿಧವಾದ ಮನಸ್ಸಿನ ಚಾಂಚಲ್ಯದ ಮಧ್ಯೆ ಬರೆಯಲ್ಪಟ್ಟದ್ದಾದ್ದರಿಂದ ಅದರ ಸೊಬಗು ಕೆಟ್ಟು, ಇನ್ನೂ ಅನೇಕ ದೋಷಗಳು ಇದರಲ್ಲಿ ತಲೆದೋರಿವೆ. ಅಲ್ಲದೆ ನನ್ನ ಅಜ್ಞಾನದಿಂದಲೂ ಇತರ, ಕಾರಣಗಳಿಂದಲೂ, ಭಾಷಾ ದೋಷಗಳು ಹಲವು ಬಿದ್ದಿವೆ—ಇದು ವಿಧ್ಯಾಸಂಪನ್ನರಿಗೆ ಬೇಸರ ಉಂಟುಮಾಡಬಹುದು. ಆದರೂ ಸಾಕಷ್ಟು ಅವಕಾಶ, ಮೊದಲಾದ ಅನುಕೂಲ್ಯಗಳು ಇದ್ದಿದ್ದರೆ ಇವುಗಳನ್ನು ತಕ್ಕ ಮಟ್ಟಿಗೆ ಪರಿಹಾರ ಮಾಡಬಹುದಾಗಿತ್ತು.

ಈ ಮಾತಿರಲಿ. ಈ ಚರಿತ್ರೆಯನ್ನು ಬರೆಯುವುದರಲ್ಲಿ ಕಥೆಯೇ ನನ್ನ ಮುಖ್ಯ ಉದ್ದೇಶವಲ್ಲ. ಮತ್ತೇನೆಂದು ಕೇಳಿದರೆ ಭಗವಂತನು ಅರ್ಜುನನಿಗೆ ಹೇಳಿದ ವಾಕ್ಯ,

"ನಾಂತೋಸ್ತಿ ಮಮ ದಿವ್ಯಾನಾಂ ವಿಭೂತೀನಾಂ ಪರಂತಪ"

(ಎಲೈ ಅರ್ಜುನನೆ! ನನ್ನ ದಿವ್ಯವಾದ ವಿಭೂತಿ ರೂಪಗಳಿಗೆ ಕೊನೆಯಿಲ್ಲ.) ಎಂಬ ವಾಕ್ಯಕ್ಕನುಸಾರವಾಗಿ, ಅವನ ಮಾಯಾ ವಿಭೂತಿಯಾದ ಮಹಾ ಸಮುದ್ರದಲ್ಲಿ, ಒಂದು ಅಲೆಯಲ್ಲಿ, ಒಂದು ನೊರೆಯಲ್ಲಿ, ಒಂದು ತೊಟ್ಟಿನಲ್ಲಿ, ಒಂದು ಅಣುವನ್ನು ನಾನೆತ್ತಿ ಅದರಲ್ಲಿ ನನ್ನ ಅಲ್ಪಬುದ್ಧಿಗೆ ಎಟುಕಿದಷ್ಟು ಹೊಕ್ಕು ನೋಡಿದ್ದೇನೆ. ಸರ್ವವ್ಯಾಪಿಯೆಂದು ತೋರಿಸಲು ಭಗವಂತನು ಕಂಭವನ್ನು ಸೀಳಿ ಹಿರಣ್ಯಕಶ್ಯಪನನ್ನು ಬಗೆದು ನರಸಿಂಹನಾದನು. ಅವನನ್ನು ಕಂಡು ಕೈ ಮುಗಿದು, ಆಡಿ, ಹಾಡಿ, ಲೋಕದಲ್ಲೆಲ್ಲ ಭಕ್ತಿ ಭಾವ ಉದ್ರೇಕದಿಂದ ನೆಗೆದಾಡಿದ ಬಾಲಕನಾದ ಪ್ರಹ್ಲಾದನಂತೆ ನಾವೂ ಆಡಿಹಾಡಿ ಓಡಾಡಬೇಕೆಂಬ ಉದ್ದೇಶವೇ ಹೊರತು, ಅನ್ಯಥಾ ಇಲ್ಲ.

ಪೊನ್ನಮ್ಮಾಳ್ ಕೃತ್ರಿಮವೂ, ಶಂಕರಿಯ ಕೊಲ್ಲಗೇರತನವೂ, ಸುಬ್ಬುವಿನ ಕಲಹ ಸ್ವಭಾವವೂ, ನಟರಾಜನ ನಿಷ್ಕಪಟವಾದ ಎಳೆತನವೂ,

ರಾಮಶೇಷಯ್ಯರ ವಾತ್ಸಲ್ಯವೂ, ಲಕ್ಷ್ಮಿಶ್ರೀನಿವಾಸನ್ ಅವರ ಮನೋಧರ್ಮ ವಿಶೇಷವೂ, ಕಮಲಾಂಬಾಳ್ ಭಕ್ತಿ ವೈಭವವೂ, ಮುತ್ತುಸ್ವಾಮಿ ಅಯ್ಯರ್ ಆತ್ಮಾನಂದವೂ—ಇವೆಲ್ಲದರಲ್ಲಿಯೂ ಈ ಭಗವಂತನ ವಿಭೂತಿರೂಪ ಸಮನಾಗಿ, ಏಕವಾಗಿ, ಪೂರ್ಣವಾಗಿ, ನಿತ್ಯವಾಗಿ ಕಾಣಿಸುವುದು. ಕಮಲಾಂಬಾಳಂತೆ ನಾವೂ ಅವಾಙ್ಮಾನಸಗೋಚರನಾದ ಆ ಪರಮಾತ್ಮನ ದಿವ್ಯ ಪಾದಗಳಲ್ಲಿ ಆಶ್ರಯವನ್ನು ಹೊಂದೋಣ, ಮತ್ತು ಮುತ್ತುಸ್ವಾಮಿ ಅಯ್ಯರಂತೆ ವರ್ಣನಾತೀತವಾದ ಭಗವಂತನ ಚಿದ್ವಿಲಾಸದ ಮಹಿಮೆಯಲ್ಲಿ ಶಿವಾನುಭೂತಿಯನ್ನು ಪಡೆದು, 'ಶಿವೋಹಂ' ಎಂದರಿತು ಕಾಲವನ್ನು ಕಳೆಯೋಣ.

ಯಾವ ದೈವವನ್ನು ಪ್ರಾರ್ಥಿಸಿ ಈ ಸಣ್ಣ ಗ್ರಂಥ ರಚಿಸಲ್ಪಟ್ಟಿತೊ, ಯಾವ ಸ್ವಯಂ ಪ್ರಕಾಶವಾದ ದಿವ್ಯ ತೇಜೋರೂಪದ ಕಾರಣದಿಂದ ಈ ಕಥೆ ನಿಷ್ಕಾಮ ಬುದ್ಧಿಯಿಂದ ಅರ್ಪಿಸಲ್ಪಡುವುದೊ ಆ ದಿವ್ಯ ಮಂಗಳ ಗುಣಾತೀತ ಪರಿಪೂರ್ಣ ಸಚ್ಚಿದಾನಂದ ಸ್ವರೂಪವನ್ನು ನಾವೆಲ್ಲರೂ ಪ್ರಯತ್ನ ಮಾಡಿ ಹೊಂದುವಂತೆ ಆಗಲಿ!

---

## ಈ ಕಾದಂಬರಿ ಕುರಿತು

ತಮಿಳು ಸಾಹಿತ್ಯದಲ್ಲಿ ಕಾದಂಬರಿ ಬರೆಯಲು ಮೊದಲಿಟ್ಟವರಲ್ಲಿ ಶ್ರೀ ಪಿ. ಆರ್. ರಾಜಂ ಅಯ್ಯರ್ ಒಬ್ಬರು. "ಕಮಲಾಂಬಾಳ್ ಚರಿತ್ರಂ" ಎಂಬ ಹೆಸರಿನಿಂದ ೧೮೯೬ ರಲ್ಲಿ ಪ್ರಕಟಿತವಾದ ಈ ಕಾದಂಬರಿಯು ತಮಿಳು ಕಾದಂಬರಿಗಳಲ್ಲಿ ಎರಡನೆಯದು. ತಪ್ಪದೇ ಓದಲೇಬೇಕಾದ ತಮಿಳು ಪುಸ್ತಕಗಳಲ್ಲಿ ಇದೂ ಒಂದು. ಅಂದಿಗೂ ಇಂದಿಗೂ ಎಂದೆಂದಿಗೂ ಅದೇ ಆನಂದವನ್ನು ಉಂಟುಮಾಡುವ ಪುಸ್ತಕವಿದಾಗಿದೆ.

ಈ ಕಾದಂಬರಿಯು ಮೊದಲು 'ವಿವೇಕ ಚಿಂತಾಮಣಿ' ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟಿಸಲ್ಪಟ್ಟು, ಅದೇ ಪ್ರಕಾಶಕರಿಂದ ಇದು ಪುಸ್ತಕ ರೂಪವಾಗಿ ಅನೇಕಸಲ ಪ್ರಕಟಿಸಲ್ಪಟ್ಟಿತು. ಇದು ಜನಪ್ರಿಯವಾದ ಕಾದಂಬರಿ.

ಆಗಿನ ಕಾಲದ ತಮಿಳು ನಾಡಿನ ಗ್ರಾಮೀಣ ಜೀವನದ ಸಂಸಾರದಲ್ಲಿಯ ಸುಖ ದುಃಖಗಳನ್ನು ರಸವತ್ತಾಗಿ ಬಣ್ಣಿಸಲ್ಪಟ್ಟ ಈ ಕಾದಂಬರಿಯು ತಮಿಳು ರಸಿಕರಿಗೆ ಅತ್ಯಂತ ಪ್ರಿಯವಾದ ಕಾದಂಬರಿಗಳಲ್ಲಿ ಒಂದಾಗಿದೆ. ಪ್ರಸಿದ್ಧ ಕಾದಂಬರಿಕಾರರೂ ಲೇಖಕರೂ ಆದ ಶ್ರೀ ಕೆ. ಸಂಪದ್ಗಿರಿರಾವ್ ಅವರು ಶುದ್ಧವಾದ ಮತ್ತು ಸುಲಭವಾದ ಶೈಲಿಯಲ್ಲಿ ಈ ಕಾದಂಬರಿಯನ್ನು ಕನ್ನಡಿಸಿದ್ದಾರೆ.

